# ಯಾದಗಿರಿ ಜಿಲ್ಲೆಯ ಚಿತ್ರಕಲೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ




ಸಂಶೋಧಕರು

ಬಸವರಾಜ

ಮಾರ್ಗದರ್ಶಕರು

ಡಾ. ಎಸ್. ಸಿ. ಪಾಟೀಲ







ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೧೩

# ಯಾದಗಿರಿ ಜಿಲ್ಲೆಯ ಚಿತ್ರಕಲೆ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಸಂಪ್ರಬಂಧ)

ಸಂಶೋಧಕ

**ಬಸವರಾಜ**

ನೋಂದಣಿ ಸಂಖ್ಯೆ

**KUVA-೦೦೫೩೧**

ಮಾರ್ಗದರ್ಶಕರು

**ಡಾ. ಎಸ್.ಸಿ.ಪಾಟೀಲ**

ವಿಶೇಷಾಧಿಕಾರಿಗಳು
ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ
ಪ್ರಾದೇಶಿಕ ಕಚೇರಿ
ಬೆಂಗಳೂರು.



ದೃಶ್ಯಕಲಾ ವಿಭಾಗ
ಲಲಿತಕಲೆಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

**"ಯಾದಗಿರಿ ಜಿಲ್ಲೆಯ ಚಿತ್ರಕಲೆ"** ಎಂಬ ಸಂಪ್ರಬಂಧವನ್ನು ಡಾ. ಎಸ್.ಸಿ.ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಲಲಿತಕಲೆಗಳ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ:

**ಬಸವರಾಜ**
ಸಂಶೋಧಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಯಾದಗಿರಿ ಜಿಲ್ಲೆಯ ಚಿತ್ರಕಲೆ"** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಬಸವರಾಜ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ:

**ಡಾ. ಎಸ್.ಸಿ.ಪಾಟೀಲ**

ವಿಶೇಷಾಧಿಕಾರಿಗಳು

ಕರ್ನಾಟಕ ಲಲಿತಕಲಾ ವಿಶ್ವವಿದ್ಯಾಲಯ

ಪ್ರಾದೇಶಿಕ ಕಚೇರಿ

ಬೆಂಗಳೂರು.

# ದೃಢೀಕರಣ ಪತ್ರ

**ಬಸವರಾಜ** ಅವರು **ಯಾದಗಿರಿ ಜಿಲ್ಲೆಯ ಚಿತ್ರಕಲೆ** ಎಂಬ ಶೀರ್ಷಿಕೆಯ ಸಂಶೋಧನ ಸಂಪ್ರಬಂಧವನ್ನು **ಡಾ. ಎಸ್.ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿರುತ್ತಾರೆ. ಪ್ರಸ್ತುತ ಸಂಪ್ರಬಂಧವನ್ನು ಯಾವುದೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 30/7/13

ಮುಖ್ಯಸ್ಥರು

(ಡಾ. ಕೆ. ರವೀಂದ್ರನಾಥ)

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುಖ್ಯಸ್ಥರು
ದೃಶ್ಯಕಲಾ ವಿಭಾಗ (ಲಲಿತಕಲಾ ನಿಕಾಯ)
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಯಾದಗಿರಿ ಜಿಲ್ಲೆಯ ಚಿತ್ರಕಲೆ

## ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

## ಪ್ರಸ್ತಾವನೆ

ಚಿತ್ರಕಲೆ ಆದಿಮಾನವನ ಕಾಲದಿಂದ ಇಂದಿನವರೆಗೂ ಮಾನವನ ಬದುಕಿನ ಪ್ರತಿಯೊಂದು ಸಂದರ್ಭಗಳಲ್ಲೂ ಜೊತೆ ಜೊತೆಯಾಗಿ ಸಾಗುತ್ತ ಬಂದಿದೆ. ಮನುಷ್ಯ ತನ್ನ ಅಂತರಂಗದ ಭಾವನೆಗಳನ್ನು ಚಿತ್ರಗಳ ಮೂಲಕ ಅಭಿವ್ಯಕ್ತಿಗೊಳಿಸುವ ಕ್ರಿಯೆಯನ್ನು ಚಿತ್ರಕಲೆ ಎಂದು, ಸಾಮಾನ್ಯವಾಗಿ ಕರೆಯಲಾಗುತ್ತದೆ. ಮಾನವ ಹುಟ್ಟಿದ ಮೇಲೆ ತನ್ನ ಬದುಕಿನ ತೊಳಲಾಟಗಳು, ಭಿನ್ನತೆಯ ಅನಿಸಿಕೆಯನ್ನು ವ್ಯಕ್ತಪಡಿಸಲು ಆದಿಮಾನವ ಪ್ರಪ್ರಥಮವಾಗಿ ಚಿತ್ರಗಳ ಮೂಲಕ ಮಾತನಾಡಲು ಪ್ರಯತ್ನಿಸಿರುವಂತಿದೆ. ಅಂತಹ ಅನೇಕ ಕುರುಹುಗಳು ಆದಿಮಾನವನು ವಾಸಿಸಿದ ನೆಲೆಗಳನ್ನು ನೋಡಿದಾಗ ಅಂದಿನ ಚಿತ್ರಗಳು ಇಂದಿಗೂ ಕಂಡುಬರುತ್ತವೆ. ತಾನು ವಾಸಿಸುವ ಕಲ್ಲಾಸರೆ ಹಳ್ಳ ಕೊಳ್ಳವಿರುವ ತಂಪಾದ ಪ್ರದೇಶ, ಗುಡ್ಡ, ಗವಿ ಬಯಲು ಬಂಡೆಗಳ ಮೇಲೆ ಗೀರುವ, ಕುಟ್ಟುವ, ರೇಖೆ, ಬಣ್ಣಗಳ ಮೂಲಕ ಚಿತ್ರಿಸಿದ ಚಿತ್ರಗಳು ದೇಶ–ವಿದೇಶಗಳಲ್ಲಿ ಹೇರಳವಾಗಿ ಕಂಡುಬರುತ್ತವೆ.

ಮಾನವನ ಆಲೋಚನೆಯ ಶಕ್ತಿ ಪಸರಿಸಿದಂತೆಲ್ಲ ಅವನ ಬದುಕಿನ ಸಂಗತಿಗಳು ಭಿನ್ನವಾಗಿ ರೂಪುಗೊಳ್ಳುತ್ತವೆ. ಆದಿಮಾನವನ ಪ್ರಾಗಿತಿಹಾಸಕಾಲದ ಚಿತ್ರಕಲೆಗಳ ನಂತರ ಪುರಾಣ, ಸಂಪ್ರದಾಯ, ಪೂರಕವಾದಂತಹ ಚಿತ್ರರಚನೆ ಮೂಡಿಬರುತ್ತದೆ. ತದನಂತರ ದೇಶದಲ್ಲಿನ ರಾಜಾಶ್ರಯ ನೆಲೆಯಲ್ಲಿ ಅವರವರ ಆಡಳಿತ ಕಾಲದಲ್ಲಿ ಚಿತ್ರಕಲೆಯ ಬೆಳವಣಿಗೆ ಕಂಡುಬರುತ್ತದೆ. ವಿವಿಧ ರೀತಿಯ ಶೈಲಿಯ ಕಲಾ ಮನೆತನಗಳು ಹುಟ್ಟಿಕೊಂಡು ತಮ್ಮದೇಯಾದ ವಿಭಿನ್ನ ಶೈಲಿಯಾಗಿ ಚಿತ್ರಕಲೆ ತನ್ನ ವ್ಯಾಪಕತೆಯನ್ನು ಹಿಗ್ಗಿಸಿಕೊಳ್ಳುತ್ತದೆ. ಕಾಲ ಬದಲಾದಂತೆ ಕಲೆಯ ರೂಪವು ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ. ನೈಜರೂಪ, ಸಮಕಾಲೀನತೆ, ಸಂಪ್ರದಾಯ, ಆಚರಣೆ, ಹೀಗೆ ಅನೇಕ ಪ್ರಕಾರಗಳಲ್ಲಿ

ಚಿತ್ರಕಲೆ ಬೆಳೆಯುತ್ತಾ ಸಾಗುತ್ತದೆ. ಭಾರತೀಯ ಚಿತ್ರಕಲೆಗೆ ಅತ್ಯಂತ ಮಹತ್ವವಾದ ಸ್ಥಾನವಿದೆ. ಪ್ರಾಗಿತಿಹಾಸ ಕಾಲದ ಚಿತ್ರನೆಲೆ, ಹಾಗೆಯೇ ಬೆಳವಣಿಗೆಯಾದ ಪುರಾಣ, ಸಂಪ್ರದಾಯ, ಅನೇಕ ಚಿತ್ರಶೈಲಿಗಳು ಬೆಳೆದುಬಂದಿವೆ.

ಭಾರತೀಯ ಚಿತ್ರಕಲೆ ಸಾಂಪ್ರದಾಯಿಕ ಚಿತ್ರರಚನೆಯೊಂದಿಗೆ ತನ್ನ ತನದ ಹಿರಿಮೆಯನ್ನು ಗಳಿಸಿಕೊಳ್ಳಲು ಅಜಂತಾ, ಎಲ್ಲೋರಾ, ಬಾದಾಮಿ, ಹಂಪಿಯಂತಹ ಸ್ಥಳಗಳಲ್ಲಿನ ಭಿತ್ತಿ ಚಿತ್ರಗಳನ್ನು ರಚಿಸುವ ಮೂಲಕ ಕಲಾವಿದರು ಕಲಾಕೃತಿ ರಚಿಸುವ ಮೂಲಕ ಅತ್ಯಂತ ಹೆಚ್ಚಿನ ಶ್ರೇಯಸ್ಸನ್ನು ತನ್ನ ತಾಯ್ನೆಲದ ಘನತೆಯನ್ನು ತಂದುಕೊಟ್ಟಿದ್ದಾರೆ.

ಭಾರತೀಯ ಚಿತ್ರಕಲೆಯ ನೈಪುಣ್ಯತೆಗೆ ಕರ್ನಾಟಕದ ಕಲಾಶ್ರೀಮಂತಿಕೆಯು ಬಹುಮುಖ್ಯವಾದದ್ದು. ಇಲ್ಲಿ ಅನೇಕ ಅರಸು ಮನೆತನಗಳು ತಮ್ಮ ಆಳ್ವಿಕೆಯಲ್ಲಿ ಸಾಹಿತ್ಯ, ಸಾಂಸ್ಕೃತಿಕ ಚೌಕಟ್ಟನ್ನು ಸುಂದರಗೊಳಿಸಿದ್ದಾರೆ. ಕಲಾವಿದರ ರಕ್ಷಣೆ ಮತ್ತು ಅವರ ಕಲೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ರಾಜಾಶ್ರಯ ನೆಲೆಯ ಹಿನ್ನೆಲೆಯಾಗಿ ಹುಟ್ಟಿಕೊಂಡ ಅನೇಕ ಚಿತ್ರಶೈಲಿಯ ಮನೆತನಗಳೇ ಇದಕ್ಕೆ ಸಾಕ್ಷಿಯಾಗಿವೆ.

ಸಾಂಪ್ರದಾಯಿಕ ಶೈಲಿಯ ಚಿತ್ರಗಳಷ್ಟೇ ಅಲ್ಲದೇ ಕರ್ನಾಟಕದಲ್ಲಿ ಅನೇಕ ಕಡೆಗಳಲ್ಲಿ ಆದಿಮಾನವನ ಪ್ರಾಗಿತಿಹಾಸ ಚಿತ್ರಕಲೆಗಳನ್ನು ಹೊಂದಿದೆ ಮತ್ತು ಹಲವಾರು ಪ್ರದೇಶಗಳಲ್ಲಿ ಪ್ರಾಗಿತಿಹಾಸ ಚಿತ್ರಗಳು ಕಂಡುಬರುತ್ತವೆ.

ಮಾನವ ಹುಟ್ಟು ಮತ್ತು ಬೆಳವಣಿಗೆ ಕ್ರಿಯೆಯಿಂದಿಡಿದೂ ಇಂದಿನವರೆಗೂ ಕಲೆಯ ಬೆಳವಣಿಗೆ ಪರಿಶೀಲನೆ ಮಾಡಿದಾಗ ಚಿತ್ರಕಲೆ ಭಾರತೀಯ ನೆಲದ ಮೂಲ ವಾಸನೆಯನ್ನು ಬಿಡದೇ, ಹೊಸ ಹೊಸ ವಿಚಾರಗಳನ್ನು ಬಿತ್ತರಿಸುವ ಮೂಲಕ ಸೃಜನಶೀಲ ಕಲಾಕೃತಿಗಳನ್ನು ಸೃಷ್ಟಿಸುತ್ತಿದೆ. ಸಮಕಾಲೀನ ಚಿಂತನೆಯ ಅಂಶಗಳನ್ನು ಗಮನಿಸುವ ಮೂಲಕ ಸಾಮಾಜಿಕ ವ್ಯವಸ್ಥೆಗೆ ತನ್ನದೇಯಾದ ಕೊಡುಗೆಯನ್ನು ನೀಡುತ್ತಿದೆ. ಸಾಮಾಜಿಕ ವ್ಯವಸ್ಥೆಗೆ ಬೋಧನಾ ಕಾರ್ಯ ಸೂಚಿಸುವುದಲ್ಲದೇ ವಿಶ್ವಶಾಂತಿಯ ಪೂರಕವಾಗಿಯೂ ಚಿತ್ರಕಲೆ ತನ್ನ ಸಾಮರ್ಥ್ಯವನ್ನು ಬಿಂಬಿಸಿದೆ.

### ಅಧ್ಯಯನದ ಉದ್ದೇಶ

ಕರ್ನಾಟಕದ ೩೦ನೇ ಜಿಲ್ಲೆಯಾಗಿರುವ ಯಾದಗಿರಿ, ಕಲೆ, ಸಾಹಿತ್ಯ, ಸಾಂಸ್ಕೃತಿಕವಾಗಿ ಅತ್ಯಂತ ಶ್ರೀಮಂತ ಜಿಲ್ಲೆಯಾಗಿದೆ. ಮೌರ್ಯ, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಹಮನಿ ಸುಲ್ತಾನರು, ಹೈದರಾಬಾದ್ ನಿಜಾಮರು, ಹೀಗೆ ಅನೇಕ ಅರಸು ಮನೆತನಗಳು ಆಳ್ವಿಕೆಯ ನಾಡು ಅವರವರ ಕಾಲಕ್ಕೆ ಹುಟ್ಟಿಕೊಂಡ ಕೋಟೆ, ಕೊತ್ತಲು, ದೇಗುಲ,

ಶಿಲ್ಪ, ಚಿತ್ರಗಳು ಇಲ್ಲಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಅತ್ಯಂತ ಚಿಕ್ಕ ಜಿಲ್ಲೆ ಇದಾಗಿದೆ. ಯಾದಗಿರಿ, ಶಹಾಪುರ, ಸುರಪುರ. ಈ ಮೂರು ತಾಲೂಕುಗಳನ್ನು ಹೊಂದಿದ ಜಿಲ್ಲೆ ಯಾದಗಿರಿ ಈ ಜಿಲ್ಲೆಯ ಹತ್ತಿರವೇ ಆಂಧ್ರಪ್ರದೇಶ, ತೆಲುಗು, ಹಿಂದಿ, ಕನ್ನಡ, ಹಲವು ಭಾಷೆಗಳನ್ನು ಆಡುವ ಜನರನ್ನು ಹೊಂದಿದೆ. ಇಲ್ಲಿ ಅಧ್ಯಯನದ ದೃಷ್ಟಿಯಿಂದ ಚಿತ್ರಕಲೆಯ ಅವಲೋಕನವನ್ನು ಮಾಡಿದಾಗ ಯಾದಗಿರಿ ಜಿಲ್ಲೆ ಚಿತ್ರಕಲಾ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆಯನ್ನು ನೀಡಿರುವುದು ಕಂಡುಬರುತ್ತದೆ. ಯಾದಗಿರಿ ತಾಲೂಕಿನೊಳಗೆ ಬರುವಂತಹ ಬಳಿಚಕ್ರ ಗ್ರಾಮದಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರನೆಲೆ ಹೊಂದಿದೆ. ವಿಜಯನಗರ ಪಥನದ ನಂತರ ಉಗಮಗೊಂಡ ಸುರಪುರದ ಗರುಡಾದ್ರಿ ಚಿತ್ರಶೈಲಿಯು ಅತ್ಯಂತ ಪ್ರಭಾವಿ ಕಲಾಶೈಲಿಯಾಗಿದೆ. ಸುರಪುರ ಸಮೀಪವಿರುವ ರಂಗಂಪೇಟೆಯ ರುದ್ರಸ್ವಾಮಿ ಮಠದಲ್ಲಿರುವ ಭಿತ್ತಿಚಿತ್ರ, ಸುರಪುರದ ಹೊಸ ದರ್ಬಾರ್‌ನಲ್ಲಿರುವ ಭಿತ್ತಿಚಿತ್ರ, ಅಣ್ಣಯ್ಯಮಠ, ಅರಮನೆಗಳಲ್ಲಿನ ಭಿತ್ತಿಚಿತ್ರ, ಮಂದಿರಗಳಲ್ಲಿರುವ ಭಿತ್ತಿಚಿತ್ರ, ಆಸ್ಥಾನದ ಪ್ರಮುಖರ ಮನೆಗಳಲ್ಲಿರುವ ಭಿತ್ತಿಚಿತ್ರಗಳು ಮತ್ತು ಕಾಕಲವಾರದ ದೇಶಮುಖ ಮನೆಯ ಭಿತ್ತಿಚಿತ್ರಗಳು ಹೀಗೆ ಯಾದಗಿರಿ ಜಿಲ್ಲೆಯಲ್ಲಿ ಅನೇಕ ಭಿತ್ತಿಚಿತ್ರಗಳು ಕಂಡುಬರುತ್ತವೆ.

ಹಾಗೆಯೇ ಹಸ್ತಪ್ರತಿ ಚಿತ್ರಕಲೆ, ಜನಪದ ಚಿತ್ರಕಲೆ, ಸಂಕೀರ್ಣ ಚಿತ್ರಕಲೆ, ಜಿಲ್ಲೆಯ ಹಿರಿಯ ಮತ್ತು ಯುವ ಕಲಾವಿದರು. ದೃಶ್ಯಕಲಾ ಸಾಹಿತ್ಯ, ಹೀಗೆ ಹಲವಾರು ನೆಲೆಗಳಿಂದ ಯಾದಗಿರಿ ಜಿಲ್ಲೆ ಅತ್ಯಂತ ಕಲೆಯ ಸಾಂಸ್ಕೃತಿಕವಾಗಿ ತನ್ನದೇ ಆದ ಶ್ರೀಮಂತಿಕೆಯನ್ನು ಹೊಂದಿದೆ. ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಕುರಿತು ಸಮಗ್ರ ಅಧ್ಯಯನ ಇಲ್ಲಿಯವರೆಗೆ ನಡೆದಿರುವುದಿಲ್ಲ. ಯಾದಗಿರಿ ಜಿಲ್ಲೆಯ ಐತಿಹಾಸಿಕ ದಾಖಲೆ, ಲಲಿತಕಲೆಗಳ ಮಾಹಿತಿ, ಇಲ್ಲಿನ ಚಿತ್ರಕಲೆಯ ಹಲವಾರು ಬಗೆಯ ಪ್ರಕಾರಗಳನ್ನು ಸಮಗ್ರ ಅಧ್ಯಯನವಾಗಿ ಕಟ್ಟಿಕೊಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

**ಯಾದಗಿರಿ ಜಿಲ್ಲೆಯ ಚಿತ್ರಕಲೆ ಕುರಿತು ನಡೆದಿರುವ ಅಧ್ಯಯನಗಳು**

ಯಾದಗಿರಿ ಜಿಲ್ಲೆಯ ಚಿತ್ರಕಲೆ ಕುರಿತು ಹಲವು ಗ್ರಂಥಗಳಲ್ಲಿ ಉಲ್ಲೇಖನೀಯ ಬರಹಗಳು ಮತ್ತು ಪತ್ರಿಕೆಗಳಲ್ಲಿ ಪ್ರಕಟಗೊಂಡ ಲೇಖನಗಳನ್ನು ಹೊರತುಪಡಿಸಿದರೆ ಪ್ರತ್ಯೇಕವಾದ ಮತ್ತು ಸಮಗ್ರವಾದ ಅಧ್ಯಯನಗಳು ಇಲ್ಲಿಯವರೆಗೆ ನಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಈ ಪ್ರಬಂಧ ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಕುರಿತಾಗಿ ಎಲ್ಲ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಸುರಪುರದ ಗರುಡಾದ್ರಿ ಚಿತ್ರ ಕಲಾಶೈಲಿಯ ಕುರಿತಂತೆ ನಡೆದ ಅಧ್ಯಯನಗಳು ಇಂತಿವೆ. ಪ್ರಪ್ರಥಮವಾಗಿ ಸುರಪುರ ಕಲಾಶೈಲಿಯನ್ನು ಗುರುತಿಸಿದವರು ಖ್ಯಾತ ಇತಿಹಾಸಕಾರರಾದ ಸ್ಟೆಲ್ಲಾ ಕ್ರಾಮರಿಷ್ ಇವರು ತಮ್ಮ A Survey of Paintings in Deccan ಕೃತಿಯಲ್ಲಿ ಸುರಪುರ ಚಿತ್ರಕಲೆ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ನಂತರದಲ್ಲಿ ಇತಿಹಾಸಕಾರ ಜಗದಿಶ್ ಮಿತ್ತಲ್‌ರವರು

ಭಾರತೀಯ ಚಿತ್ರಕಲೆ ಕುರಿತು ವಿಶೇಷ ಅಧ್ಯಯನ ನಡೆಸಿ (೨೦೦೧) ದಖನಿ ಚಿತ್ರಕಲೆಯಲ್ಲಿ 'ಸುರಪುರ ಚಿತ್ರಕಲೆ' ಒಂದು ಸ್ವತಂತ್ರ ಶೈಲಿ ಎಂದು ಗುರುತಿಸಿದವರು, ಮಾರ್ಕ್ ಝುಬ್ರವಸ್ಕಿ ಅವರ Deccani Painting ಗ್ರಂಥದಲ್ಲೂ ಸುರಪುರ ಚಿತ್ರಕಲೆ ಕುರಿತಾದ ಸಾಂದರ್ಭಿಕ ವಿವರಗಳಿವೆ. ಕಲಾ ಇತಿಹಾಸಕಾರರಾದ ಜಯಾ ಅಪ್ಪಾಸ್ವಾಮಿಯವರೂ ಈ ಕಲೆಯನ್ನು ಕುರಿತು ವಿಶೇಷ ಅಧ್ಯಯನ ಕೈಗೊಂಡಿದ್ದಾರೆ. ಇವರು ೧೯೭೦ರ ದಶಕದಲ್ಲಿ ಲಂಡನ್ನಿನ ಬ್ರಿಟೀಷ್ ಮ್ಯೂಜಿಯಂಗೆ ಭೇಟಿ ನೀಡಿದ್ದರು. ಈ ವಸ್ತು ಸಂಗ್ರಾಹಲಯದಲ್ಲಿ ಭಾರತೀಯ ಕಲೆಗೆ ಸಂಬಂಧಿಸಿದ ಸಾಕಷ್ಟು ಚಿತ್ರಗಳಿದ್ದು, ಅದರಲ್ಲಿ ಸುರಪುರ ಸಾಂಪ್ರದಾಯಿಕ ಚಿತ್ರಗಳಲ್ಲಿಯ ಸೂಕ್ಷ್ಮಾತೀಸೂಕ್ಷ್ಮತೆಗೆ ಮನಸೋತರೆಂಬುದಾಗಿ ಒಂದು ಕಡೆ ಹೇಳಿಕೊಂಡಿದ್ದಾರೆ. ಅಪ್ಪಾ ಸ್ವಾಮಿಯವರು ಲಂಡನ್ನಿನಿಂದ ಭಾರತಕ್ಕೆ ಬಂದವರೇ ಸುರಪುರಕ್ಕೆ ಭೇಟಿಕೊಟ್ಟರು. ಸುಮಾರು ಒಂದು ವಾರಗಳ ಕಾಲ ಇವರು ಸುರಪುರ ಪ್ರದೇಶದುದ್ದಕ್ಕೂ ಕ್ಷೇತ್ರಕಾರ್ಯ ಕೈಗೊಂಡು ಈ ಭಾಗದ ಮನೆ-ಮಠಗಳಲ್ಲಿನ ಚಿತ್ರಗಳ ವೈವಿಧ್ಯತೆಯನ್ನು ಕುರಿತು ಒಂದೆರಡು ಲೇಖನಗಳನ್ನು ಬರೆದಿದ್ದಾರೆ. ೧೯೮೦ರ ದಶಕದಲ್ಲಿ ಪ್ರಕಟಗೊಂಡ (೧೯೮೬) 'ಸಗರನಾಡ ದರ್ಶನ' ಗ್ರಂಥದಲ್ಲಿ ಸುರಪುರ ಚಿತ್ರಕಲೆ ಕುರಿತು ವಿವರಣೆಯಿದೆ. ಲೋಕಯ್ಯ ಮಠಪತಿ ಅವರ ಗರುಡಾದ್ರಿ ಚಿಕಣಿ ಚಿತ್ರಕಲೆ, ಲಘುಶೋಧ ಪ್ರಬಂಧದಲ್ಲಿ ಸುರಪುರ ಚಿತ್ರಕಲೆ ಮತ್ತು ಆಸ್ಥಾನ ಕಲಾವಿದರಿಗೆ ಸಂಬಂಧಿಸಿದ ವಿವರಗಳಿವೆ. ಬಸವರಾಜ ಉಪ್ಪಿನ ಅವರು ಬರೆದ (೧೯೯೫) ಬಾನಯ್ಯ ಗರುಡಾದ್ರಿ ಕಿರುಹೊತ್ತಿಗೆಯಲ್ಲಿ ಆಸ್ಥಾನ ಕಲಾವಿದರ ವಿವರಣೆಯೊಂದಿಗೆ ಒಂದೆರಡು ಕಲಾಕೃತಿಗಳನ್ನು ವಿಶ್ಲೇಷಣೆಗೊಳಪಡಿಸಿದೆ. ಡಾ. ರಂಗರಾಜ ವನದುರ್ಗ ಅವರ (೧೯೯೫) 'ಸುರಪುರ ಸಂಸ್ಥಾನ' ಒಂದು ಅಧ್ಯಯನ ಪಿಎಚ್.ಡಿ. ಪ್ರಬಂಧದಲ್ಲಿ ಸುರಪುರ ಸಂಸ್ಥಾನದ ಆಡಳಿತ ಹಾಗೂ ಆರ್ಥಿಕ ಸ್ಥಿತಿ-ಗತಿಗಳೊಂದಿಗೆ ಸಂಗೀತ ಮತ್ತು ಚಿತ್ರಕಲೆಗಳು ಪ್ರಸ್ತಾಪಗೊಂಡಿವೆ. ಡಾ. ಯಾದಪ್ಪ ಪರದೇಶಿಯವರು (೨೦೦೧) ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸುರಪುರದ ಭಿತ್ತಿಚಿತ್ರಗಳ ಕುರಿತು ವಿವರ ಮತ್ತು ಚರ್ಚೆಯಿದೆ. ಡಾ. ಎಸ್.ಕೆ.ಅರುಣಿ ಅವರು ತಮ್ಮ (೨೦೦೧)'ದಖನಿ ಚಿತ್ರಕಲೆ' ಕೃತಿಯಲ್ಲಿ ಸುರಪುರ ಚಿತ್ರಕಲೆಯನ್ನು ಪ್ರತ್ಯೇಕ ಅಧ್ಯಾಯವನ್ನಾಗಿ ವಿಂಗಡಿಸಿಕೊಂಡು ಅನ್ಯ ಶೈಲಿಗಳೊಂದಿಗೆ ಚರ್ಚಿಸಿದ್ದಾರೆ. ಅಲ್ಲದೆ ಇವರು ತಮ್ಮ (೨೦೦೧) ಪಿಎಚ್.ಡಿ. ಪ್ರಬಂಧದಲ್ಲಿ ಸುರಪುರ ಸಂಸ್ಥಾನದ ಐತಿಹಾಸಿಕ ವಿವರಗಳೊಂದಿಗೆ ಚಿತ್ರಕಲೆಯನ್ನು ಚರ್ಚಿಸಿದ್ದಾರೆ. ಭಾಸ್ಕರರಾವ್ ಮುಡಬೂಳ ಅವರು (೨೦೦೧) 'ಮರೆತುಹೋದ ಸುರಪುರ ಇತಿಹಾಸ' ಗ್ರಂಥದಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯನ್ನು ಪ್ರಸ್ತಾಪಿಸಿದ್ದಾರೆ. ಬಿ. ಕೃಷ್ಣಮಾಚಾರ್ ಅವರ (೨೦೦೩) ಮರೆಯಲಾಗದ ಸುರಪುರ ರಾಜರ ಚರಿತ್ರೆ ಗ್ರಂಥದಲ್ಲಿ ಆಸ್ಥಾನ ಕಲಾವಿದರ ವಿವರಣೆಯೊಂದಿಗೆ ಸುರಪುರ ಭಿತ್ತಿ ಚಿತ್ರಗಳ ಸಂಕ್ಷಿಪ್ತ ವಿವರಣೆಯಿದೆ.[೧]

ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ (೨೦೦೯) 'ಸುರಪುರ ಚಿತ್ರಕಲೆ' ಪಿಎಚ್.ಡಿ. ಪ್ರಬಂಧದಲ್ಲಿ ಸುರಪುರ ಚಿತ್ರಕಲೆ[೨]ಯ ಸಮಗ್ರ ಅಧ್ಯಯನವನ್ನು ಮಾಡಿದ್ದಾರೆ. ಹಾಗೂ ಇದೇ ಲೇಖಕರು ಬರೆದ (೨೦೦೯) ಚಿತ್ರಲೇಖ[೩] (೨೦೦೯) ಲೇಖಾವರಣ[೪] ಗ್ರಂಥಗಳಲ್ಲಿ ಸುರುಪುರ ಚಿತ್ರಕಲೆಯ ಕುರಿತಂತೆ ಬಿಡಿಲೇಖನಗಳಿವೆ. ದೇವು ಪತ್ತಾರ ಅವರು (೨೦೦೯)ರಲ್ಲಿ 'ಮಹಾದೇವ ಬಾಬಾ ಮೆಡೋಸ್ ಟೇಲರ್' ಸಂಪಾದನೆ ಗ್ರಂಥದಲ್ಲಿ ಸುರಪುರ ಸಂಸ್ಥಾಪಕರ ಮತ್ತು ಗರುಡಾದ್ರಿ ಚಿತ್ರಕಲಾವಿದರೊಂದಿಗಿನ ಸಹ ಸಂಬಂಧದ ವಿವರಣೆಯನ್ನು ಮತ್ತು ಚಿತ್ರಕಲೆಯ ಮಹತ್ವವನ್ನು ತಿಳಿಸುತ್ತಾರೆ.[೫] (೨೦೧೧) ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ, ಸಂಪಾದನೆ ಗ್ರಂಥದಲ್ಲಿ ಗರುಡಾದ್ರಿ ಚಿತ್ರಕಲೆಯ ಕುರಿತು ಸಂಕ್ಷಿಪ್ತವಾಗಿ ವಿವರವಿದೆ.[೬] ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಅವರ (೨೦೧೧) 'ದೃಶ್ಯ ಸಂಸ್ಕೃತಿ' ಗ್ರಂಥದಲ್ಲಿ ಸುರಪುರ ಸಂಸ್ಥಾನದ ಗರುಡಾದ್ರಿ ಚಿತ್ರಕಲೆಯನ್ನು ಕುರಿತು ಚರ್ಚಿಸಿದ್ದಾರೆ.[೭] ಕೆ.ವಿ. ಕಾಳೆ ಅವರ (೨೦೦೦) ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ ಎಂಬ ಗ್ರಂಥದಲ್ಲಿ ಸುರಪುರ ಕಲಾಕೃತಿಗಳಲ್ಲಿ ಬಣ್ಣದ ಪಾತ್ರವನ್ನು ವಿವರಿಸಿದ್ದಾರೆ.[೮] ಡಾ. ಶೈಲಜಾ ಬಾಗೇವಾಡಿ, ಅವರು (೨೦೧೨) ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, ಸಂಪಾದನೆ ಕೃತಿಯಲ್ಲಿ ಕಣ್ಮರೆಯಾಗುತ್ತಿರುವ ಸುರಪುರ ಚಿತ್ರಕಲೆ ಎಂಬ ಬಿಡಿಲೇಖನದಲ್ಲಿ ಪ್ರಸ್ತುತ ಸುರಪುರ ಚಿತ್ರಕಲೆಯ ಕುರಿತು ಹೇಳಿದ್ದಾರೆ.[೯]

ಈ ಮೇಲಿನ ಸಾಹಿತ್ಯ, ಸಂಶೋಧನೆ, ಕೃತಿಗಳಲ್ಲದೇ ಅನೇಕ ಲೇಖನಗಳೂ ಸುರಪುರ ಚಿತ್ರಕಲೆಯನ್ನು ಕುರಿತು ನಶಿಸುತ್ತಿರುವ ಗರುಡಾದ್ರಿ ಪರಂಪರೆಯ ಚಿತ್ರಕಲೆ, ಯಾದಗಿರಿ ಜಿಲ್ಲೆಯ ಹಲವು ಪ್ರಕಾರದ ಕಲೆಗಳ ಕುರಿತಾದ ಗ್ರಂಥಗಳು ಬಂದಿರುವುದು ಈ ಕೆಳಗಿನಂತಿವೆ. ಅ.ಸುಂದರ ಅವರ ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ, ಗ್ರಂಥದಲ್ಲಿ ಬಳಿಚಕ್ರದ ಪ್ರಾಗಿತಿಹಾಸ ನೆಲೆಯ ಕುರಿತು ವಿವರಣಾತ್ಮಕ ಚರ್ಚೆ ಮಾಡಿದ್ದಾರೆ.[೧೧] ಕೆ.ವಿ. ಸುಬ್ರಹ್ಮಣ್ಯಂ ಅವರ 'ಶಿಲಾಶ್ರಯ ಕಲೆಯ ದೃಶ್ಯಧ್ಯಾನ' (೨೦೧೧) ಗ್ರಂಥದಲ್ಲಿ ಬಳಿಚಕ್ರ ಪ್ರಾಗಿತಿಹಾಸ ಚಿತ್ರದ ಕುರಿತು ಉಲ್ಲೇಖವಿದೆ.[೧೨] ಮತ್ತು ಯಾದಗಿರಿಯ ಬಳಿಚಕ್ರ ಪ್ರಾಗಿತಿಹಾಸ ನೆಲೆಯ ಕುರಿತು ಕೆ.ವಿ. ಸುಬ್ರಹ್ಮಣ್ಯಂ ಅವರು ಕೆಲವು ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಕಾಕಲವಾರ ದೇಶಮುಖ ಸಂಸ್ಥಾನದ ಪರಿಚಯ ಮತ್ತು ಚಿತ್ರಗಳ ಕುರಿತು ಕಿರುಪರಿಚಯಾತ್ಮಕ ಲೇಖನವನ್ನು ಬಸನಗೌಡ ಪಾಟೀಲ ಹುಣಸಗಿ ಅವರು (೨೦೧೧) 'ಯಾದಗಿರಿ ಸಿರಿ' ಗ್ರಂಥದಲ್ಲಿ ಹೇಳಿದ್ದಾರೆ.[೧೪] (೨೦೧೨) ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ ಸಂಪಾದನೆ ಗ್ರಂಥದಲ್ಲಿ ಬಸವರಾಜ ಎಸ್. ಕಲೆಗಾರ ಅವರು ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಒಂದು ಅವಲೋಕನ ಎಂಬ ಲೇಖನದಲ್ಲಿ ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಪ್ರಕಾರಗಳ ಕುರಿತು ಸಂಕ್ಷಿಪ್ತವಾಗಿ ಹೇಳಿದ್ದಾರೆ.[೧೫]

ಡಿ.ಎನ್. ಅಕ್ಕಿ ಅವರ (೧೯೯೯) ಎಂ.ಟಿ. ಭೋಪಲೆ ಎಂಬ ಕಿರುಗ್ರಂಥದಲ್ಲಿ ಕಲಾವಿದ ಎಂ.ಟಿ. ಭೋಪಲೆ ಅವರ ಕಲೆ ಮತ್ತು ಬದುಕನ್ನು ವಿವರಿಸಿದ್ದಾರೆ.[೧೬] (೨೦೧೨) 'ಸಗರಾದ್ರಿ' ಸ್ಮರಣ ಸಂಚಿಕೆಯಲ್ಲಿ ಬಸವರಾಜ ಎಸ್.ಕಲೆಗಾರ ಅವರು ಶಹಾಪುರ ತಾಲೂಕಿನ ದೃಶ್ಯಕಲಾ ಪರಂಪರೆ ಎಂಬ ಲೇಖನದಲ್ಲಿ ಶಹಾಪುರ ತಾಲೂಕಿನ ದೃಶ್ಯಕಲೆಯನ್ನು ವಿವರಿಸಿದ್ದಾರೆ.[೧೭] ಬಸವರಾಜ ಎಸ್. ಕಲೆಗಾರ ಅವರ (೨೦೧೩) 'ಚಿತ್ರಕಲಾವಿದ ಸಂಗಣ್ಣ ಎಂ. ದೋರನಹಳ್ಳಿ' ಎಂಬ ಗ್ರಂಥದಲ್ಲಿ ಕಲಾವಿದ ಸಂಗಣ್ಣನವರ ಕಲೆ ಮತ್ತು ಬದುಕನ್ನು ವೈಚಾರಿಕವಾಗಿ ಮತ್ತು ವಿಶ್ಲೇಷಣಾತ್ಮಕವಾಗಿ ವಿವರಿಸಿದ್ದಾರೆ.[೧೮] ಗಾಯತ್ರಿ ಮಂತ್ ಅವರ (೨೦೧೩) ಕಲಾವಿದ ಎಸ್.ಡಿ.ಪಾಟೀಲ (ಅಪ್ರಕಟಿತ) ಪ್ರಬಂಧದಲ್ಲಿ ಎಸ್.ಡಿ.ಪಾಟೀಲರ ಕಲೆ ಹಾಗೂ ಬದುಕಿನ ಮಹತ್ವವನ್ನು ತಿಳಿಸಿದ್ದಾರೆ.[೧೯] ಡಾ. ಅಬ್ದುಲ್ ಕರೀಂ ಮತ್ತು ಡಾ. ಎಸ್.ಕೆ.ಅರುಣಿ ಅವರ ಸಂಪಾದನೆಯು (೨೦೧೧) 'ಧವಳ' ಎಂಬ ಅಭಿನಂದನಾ ಗ್ರಂಥ, ಚಿತ್ರಕಲಾವಿದ ಮತ್ತು ಸಂಶೋಧಕರಾಗಿರುವ ಡಿ.ಎನ್.ಅಕ್ಕಿ ಅವರ ಕುರಿತಾಗಿದೆ. ಈ ಗ್ರಂಥದಲ್ಲಿ ಡಿ.ಎನ್.ಅಕ್ಕಿ ಅವರ ಸಾಧನೆಯ ಹಾದಿಯನ್ನು ಪಸರಿಸುತ್ತದೆ.[೨೦] ಎನ್. ವೆಂಕಟೇಶ ಅವರು (೨೦೦೭) ಯಾದಗಿರಿ ಪ್ರದೇಶದ ಲಂಬಾಣಿ ತಾಂಡಾದ ಚಿತ್ರಕಲೆ ಎಂಬ ಕಿರುಸಂಶೋಧನ ವರದಿ ಪ್ರಬಂಧದಲ್ಲಿ ಲಂಬಾಣಿ ಸಮುದಾಯದ ಹಚ್ಚೆಕಲೆ ಮತ್ತು ಕರಕುಶಲ ಕಲೆಗಳ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ವಿವರಿಸಿದ್ದಾರೆ.[೨೧] ಡಾ. ಎಸ್.ಸಿ.ಪಾಟೀಲರು ಕರ್ನಾಟಕದ ಜನಪದ ಚಿತ್ರಕಲೆಯ ಲಕ್ಷಣಗಳನ್ನು ವಿವರಿಸಿದ್ದಾರೆ. ಡಾ. ಎಚ್.ಎನ್. ಚಿತ್ರಗಾರ ಅವರು ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸುರಪುರ ಚಿತ್ರಕಲೆಯ ಕೆಲವು ಅಂಶಗಳನ್ನು ಹೇಳಿದ್ದಾರೆ.[೨೨] ಡಾ. ಪಿ.ಕೆ.ಖಂಡೋಬಾ ಮತ್ತು ಡಾ. ಎಸ್.ಸಿ. ಪಾಟೀಲರು ಸಂಪಾದಿಸಿದ 'ಹೈದ್ರಾಬಾದ ಕರ್ನಾಟಕದ ಸಾಂಸ್ಕೃತಿಕ ವಿಷಯ ಕೋಶ' ಲಲಿತಕಲೆಗಳ ಸಂಪುಟದಲ್ಲಿ ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಕುರಿತು ವಿವರ ನೀಡುತ್ತದೆ.[೨೩] ಡಾ. ಕಾಮಾಕ್ಷಿ ಸೊಪ್ಪಣ್ಣ ಅವರ ಹೈದ್ರಾಬಾದ ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಯಾದಗಿರಿ ಭಾಗದ ಬಟ್ಟೆಯ ಮೇಲಿನ ಚಿತ್ರಕಲಾ ವಿನ್ಯಾಸವನ್ನು ತಿಳಿಸುವ ಪ್ರಬಂಧವಾಗಿದೆ.[೨೪] ಡಾ. ವಿಶ್ವೇಶ್ವರಿ ತಿವಾರಿಯರು ಹೈದ್ರಾಬಾದ ಕರ್ನಾಟಕದ ರಂಗೋಲಿ ಕಲೆಯ ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧದಲ್ಲಿ ಯಾದಗಿರಿ ಜಿಲ್ಲೆಯ ರಂಗೋಲಿ ಕಲೆಯ ಕುರಿತಾದ ಅಧ್ಯಯನವಾಗಿದೆ.[೨೫] ಡಾ. ಯಾದಪ್ಪ ಪರದೇಶಿಯವರು ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸುರಪುರ ಭಿತ್ತಿಚಿತ್ರಗಳ ಮಾಹಿತಿ ವಿವರವನ್ನು ತಿಳಿಸುತ್ತದೆ.[೨೬] ಇವುಗಳನ್ನು ಹೊರತುಪಡಿಸಿ ಯಾದಗಿರಿ ಜಿಲ್ಲೆಯ ಚಿತ್ರಕಲೆ ಕುರಿತಂತೆ ಸಮಗ್ರವಾದ ಅಧ್ಯಯನಗಳು ನಡೆದಿಲ್ಲದಿರುವುದನ್ನು ಗಮನಿಸಿ ಪ್ರಸ್ತುತ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ:**

ಪ್ರಸ್ತುತ ಈ ಸಂಶೋಧನೆಯ ಅಧ್ಯಯನವನ್ನು ಒಂಬತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ೧ – ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ:**

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ಸ್ವರೂಪ, ವ್ಯಾಪ್ತಿ, ವೈಧಾನಿಕತೆಯನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ೨ – ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಿಸರ, ಲಲಿತಕಲೆಗಳು**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಿಸರ, ಲಲಿತಕಲೆಗಳ ಕುರಿತು, ಚಿತ್ರ, ಶಿಲ್ಪ, ಸಂಗೀತ, ಸಾಹಿತ್ಯ, ನಾಟಕ ಹೀಗೆ ಹಲವು ಬಗೆಯ ಕಲೆಗಳ ಸಾಂಸ್ಕೃತಿಕ ಹಿನ್ನೆಲೆಯನ್ನು ಸ್ಥೂಲವಾಗಿ ಗಮನಿಸಿ. ಅಧ್ಯಯನಕ್ಕೆ ಪೂರಕವಾದ ಭೂಮಿಕೆಯನ್ನು ಒದಗಿಸಲಾಗಿದೆ.

**ಅಧ್ಯಾಯ ೩ – ಯಾದಗಿರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ:**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಪ್ರಾಗಿತಿಹಾಸ ಕಾಲದ ನೆಲೆಗಳು. ಪ್ರಾಗಿತಿಹಾಸ ಕಾಲ, ಚಿತ್ರಗಳ ವಿಶ್ಲೇಷಣೆ, ರೇಖೆ, ಬಣ್ಣ, ಚಲನಶೀಲತೆ, ಸೃಜನಶೀಲತೆ, ಭಿನ್ನತೆ, ಸೌಂದರ್ಯ, ಬೇರೆ ಬೇರೆ ನೆಲೆಯ ಚಿತ್ರಗಳೊಂದಿಗೆ ತೌಲನಿಕವಾಗಿ ಚಿತ್ರರಚನೆಯ ಶೈಲಿ ಹಲವು ಚಿತ್ರಗಳ ವರ್ಗೀಕರಣ, ಹೀಗೆ ಹಲವಾರು ದೃಷ್ಟಿಕೋನದಿಂದ ಪ್ರಾಗಿತಿಹಾಸ ಚಿತ್ರಗಳನ್ನು ವಿವರಣಾತ್ಮಕವಾಗಿ ಕಟ್ಟಿಕೊಡಲಾಗಿದೆ.

**ಅಧ್ಯಾಯ ೪ – ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆ:**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆ ಕುರಿತಂತೆ ಚರ್ಚಿಸಲಾಗಿದೆ. ಬಯಲಾಟದ ಮುಖವರ್ಣಿಕೆ ಕಲೆ, ಹಚ್ಚೆಕಲೆ, ಹಸೆಕಲೆ, ರಂಗೋಲಿ ಚಿತ್ರಕಲೆ, ಶೀಗಿ ಚಿತ್ರಕಲೆ, ಕಸೂತಿಕಲೆ, ಮೆಹಂದಿ ಕಲೆ, ಲಂಬಾಣಿ ಜನಾಂಗದ ಕರಕುಶಲ ಕಲೆಗಳು, ಕೌದಿಕಲೆ, ರಂಗೋಲಿ ಕಲೆ ಹೀಗೆ ಜನಪದರು ಹಬ್ಬ ಹರಿದಿನಗಳಲ್ಲಿ ಮಾಡುವ ಕಲೆಗಳನ್ನು ಅಧ್ಯಯನ ಮಾಡಲಾಗಿದೆ. ಆಯಾ ಸಂದರ್ಭದ ಹಿನ್ನೆಲೆಯನ್ನು ಹೊಂದಿದ ಜನಪದ ಚಿತ್ರಕಲೆಯನ್ನು ಸ್ಥೂಲವಾಗಿ ಕಟ್ಟಿಕೊಡಲಾಗಿದೆ.

**ಅಧ್ಯಾಯ ೫ – ಯಾದಗಿರಿ ಜಿಲ್ಲೆಯ ಭಿತ್ತಿಚಿತ್ರಕಲೆ**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಭಿತ್ತಿಚಿತ್ರ ನೆಲೆಯ ವಿವರ.

ಅವುಗಳ ಸ್ಥಿತಿಗತಿ, ವಸ್ತುವಿಷಯ, ಶೈಲಿ, ತಂತ್ರ, ವರ್ಣಲೇಪನ, ಭಿತ್ತಿ ತಯಾರಿಸುವ ಚಿತ್ರ ರಚಿಸುವ ಬಗೆ, ಹೀಗೆ ಹಲವು ರೀತಿಯ ಭಿತ್ತಿಚಿತ್ರಕಲೆಯ ಕುರಿತು ಅಧ್ಯಯನ ನಡೆಸಲಾಗಿದೆ.

**ಅಧ್ಯಾಯ ೬ – ಯಾದಗಿರಿ ಜಿಲ್ಲೆಯ ಹಸ್ತಪ್ರತಿ ಚಿತ್ರಕಲೆ**

ಅಧ್ಯಾಯ ಆರರಲ್ಲಿ ಯಾದಗಿರಿ ಜಿಲ್ಲೆಯ ಹಸ್ತಪ್ರತಿ ಚಿತ್ರಗಳ ನೆಲೆ, ಅವುಗಳ ಸ್ಥಿತಿಗತಿ, ರೇಖೆ, ಬಣ್ಣ, ವಿಷಯ, ಶೈಲಿ, ಇತ್ಯಾದಿ ಸಾಂಪ್ರದಾಯಿಕತೆಯ ಅವಲೋಕನ, ಮುಂತಾದ ಅಂಶಗಳ ದೃಶ್ಯಾತ್ಮಕ ಅಧ್ಯಯನವನ್ನು ಇಲ್ಲಿ ಮಾಡಲಾಗಿದೆ.

**ಅಧ್ಯಾಯ ೭ – ಯಾದಗಿರಿ ಜಿಲ್ಲೆಯ ಸಂಕೀರ್ಣ ಚಿತ್ರಕಲೆ**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಸಂಕೀರ್ಣ ಮಾಧ್ಯಮವಾಗಿ ಗರುಡಾದ್ರಿ ಕಲಾಕೃತಿಗಳು, ಗಾಜಿನ ಮೇಲಿನ ಚಿತ್ರಕಲೆ, ಸುರಪುರ ಪ್ರದೇಶದ ಸಂಸ್ಥಾನಿಕರನ್ನು ಮತ್ತು ಮಠಗಳಲ್ಲಿ ಸಂಗ್ರಹವಿರುವ ಗರುಡಾದ್ರಿಯವರ ಕಲಾಕೃತಿಗಳು ಹಾಗೂ ಮೆಡೋಸ್ ಟೇಲರ್ಸ್ ಕಲಾಕೃತಿ ಮತ್ತು ಡಿ.ಎನ್. ಅಕ್ಕಿಯವರ ಮನೆಯಲ್ಲಿನ ದಶದಿಕ್ಪಾಲಕರ ಚಿತ್ರಿತಗಳು ಹಾಗೂ ಯಾದಗಿರಿ ವೀರಶೈವ ಕಲ್ಯಾಣ ಮಂಟಪದಲ್ಲಿನ ಕಲಾಕೃತಿಗಳ ಕುರಿತಂತೆ ವಿವರಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ೮ – ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ, ಕಲಾಶಿಕ್ಷಣ ಮತ್ತು ಕಲಾವಿದರು**

ಈ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನ ಕೃತಿಗಳ ಕುರಿತು ಸ್ಥೂಲವಾಗಿ ಸಮೀಕ್ಷೆ ಮಾಡಲಾಗಿದೆ. ಚಿತ್ರಕಲಾ ಸಾಹಿತ್ಯದ ಪ್ರಕಾರಗಳನ್ನು ಅಧ್ಯಯನದ ದೃಷ್ಟಿಯಿಂದ ಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಕಲಾಶಿಕ್ಷಣ ಮತ್ತು ಜಿಲ್ಲೆಯ ಹಿರಿಯ ಮತ್ತು ಯುವ ಕಲಾವಿದರ ಜೀವನ, ಕಲಾಕೃತಿ ಹಾಗೂ ಸಮಕಾಲೀನ ಕಲೆಯ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಾಯ ೯ – ಸಮಾರೋಪ**

ಈ ಅಧ್ಯಾಯದಲ್ಲಿ ಒಟ್ಟು ಎಂಟು ಅಧ್ಯಾಯಗಳಿಂದ ಕಂಡುಬಂದ ಫಲಿತಗಳನ್ನು ಇಲ್ಲಿ ಸಮೀಕ್ಷೆ ಮಾಡಿ ದಾಖಲಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವು ಯಾದಗಿರಿ ಜಿಲ್ಲೆಯ ವ್ಯಾಪ್ತಿಯನ್ನು ಒಳಗೊಂಡಿದೆ. ಶಹಾಪುರ, ಯಾದಗಿರಿ, ಸುರಪುರ ಈ ಮೂರು ತಾಲೂಕುಗಳನ್ನೊಳಗೊಂಡಂತೆ ಅಧ್ಯಯನ ಮಾಡಲಾಗುವುದು. ಅಧ್ಯಯನಕ್ಕೆ ಪೂರಕವಾಗಿ ಕರ್ನಾಟಕದ ಇತರ ಜಿಲ್ಲೆ ಮತ್ತು ಕರ್ನಾಟಕೇತರ ಪ್ರದೇಶಗಳ ಚಿತ್ರಕಲೆಯನ್ನು ಸಂದರ್ಭಕ್ಕೆ ಅನುಗುಣವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವಿಧಾನ:**

ಈ ಅಧ್ಯಯನಕ್ಕೆ ಎರಡು ರೀತಿಯ ವಿಧಾನವನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಾಗ್ರಿಗಳು

೨. ಆನುಷಂಗಿಕ ಆಕರ ಸಾಮಗ್ರಿಗಳು

**೧. ಮೂಲ ಆಕರ ಸಾಮಗ್ರಿಗಳು:** ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತ್ಯಂತ ಮುಖ್ಯವಾದದ್ದು. ಅಧ್ಯಯನಕ್ಕೆ ತಕ್ಕಂತೆ ಅಗತ್ಯವಾದಂತಹ ವಿಧಾನ ಇದಾಗಿದೆ. ಯಾವುದೇ ಪ್ರಕಾರದ, ದೇಶದ ಸಂಶೋಧನೆ ಆಗಿರಲಿ, ಅಲ್ಲಿನ ಇತಿಹಾಸ, ಕಲೆ, ಸಂಸ್ಕೃತಿ, ಹೀಗೆ ಹಲವು ಬಗೆಯಲ್ಲಿ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಪ್ರಮುಖವಾದದ್ದು. ಇದು ಮೂಲ ಆಕರ ಸಾಮಗ್ರಿಯಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಸಂಶೋಧನೆಗೆ ಕ್ಷೇತ್ರಕಾರ್ಯದ ಅನುಭವ ಬೇಕೇ ಬೇಕು. ಕ್ಷೇತ್ರಕಾರ್ಯವಿಲ್ಲದ ಸಂಶೋಧನೆ ಉತ್ತಮ ಸಂಶೋಧನೆ ಆಗುವುದಿಲ್ಲ. ಮೂಲಭೂತವಾದ ಅಧ್ಯಯನಕ್ಕೆ ಬೇಕಾಗುವ ಸ್ಥಳಗಳಿಗೆ ಭೇಟಿ ನೀಡಿ ನಮ್ಮ ವಿಷಯಕ್ಕೆ ಪೂರಕವಾದ ಅಂಶಗಳನ್ನು ಗಮನಿಸಿ ಅಲ್ಲಿನ ಸತ್ಯಾಂಶಗಳನ್ನು ಬರೆದುಕೊಂಡು ಅಥವಾ ಛಾಯಾಚಿತ್ರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಸಿದ್ಧತೆಗೊಂಡಿರುತ್ತದೆ. ಶಹಾಪುರ, ಸುರಪುರ, ಯಾದಗಿರಿ, ಸೇರಿದಂತೆ ಎಲ್ಲಾ ತಾಲೂಕುಗಳಲ್ಲಿನ ಕಲೆಯ ನೆಲೆಯಾಗಿರುವ ಹಳ್ಳಿಗಳಿಗೆ ಭೇಟಿ ನೀಡಿ ವಿವರಗಳನ್ನು ಪಡೆದು ಛಾಯಾಚಿತ್ರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಹೀಗೆ ಕ್ಷೇತ್ರಕಾರ್ಯದಿಂದ ದೊರೆತ ಹಲವಾರು ವಿವರಗಳನ್ನು ಅಭ್ಯಾಸಕ್ಕೆ ಮತ್ತು ಬರವಣಿಗೆಗೆ ಬಳಸಿಕೊಂಡು ಪ್ರಸ್ತುತ ಅಧ್ಯಯನ ಮಾಡಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ:** ಸಂಶೋಧನ ಪ್ರಬಂಧ ರಚಿಸುವಲ್ಲಿ ಎರಡನೇ ವಿಧಾನ ಆನುಷಂಗಿಕ ಆಕರ ಸಾಮಗ್ರಿಯಾಗಿದ್ದು, ಇದಕ್ಕೆ ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಹಾಗೂ ಕಲೆಯ ವಿವಿಧ ಗ್ರಂಥಗಳು, ಲೇಖನಗಳು, ಪತ್ರಿಕಾ ವರದಿ, ಸಂಪುಟಗಳು, ಅನುವಾದ ಗ್ರಂಥಗಳು, ವಿಶ್ವಕೋಶಗಳು, ಸಂಶೋಧನ ಮಹಾಪ್ರಬಂಧಗಳು, ಹಿರಿಯ-ಕಿರಿಯ ಕಲಾವಿದರು ಬರೆದಂತಹ ಪುಸ್ತಕ, ವಾರಪತ್ರಿಕೆಯ ಬಿಡಿ ಲೇಖನಗಳು, ದೇಶ-ವಿದೇಶಿಗರು ಬರೆದಂತಹ ಕಲೆಯ ಪ್ರಮುಖ ಅಂಶಾಧಾರಿತ ಪತ್ರ, ಲೇಖನ, ಹೀಗೆ ಹಲವಾರು ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗುವುದು. ಹೀಗೆ ಆನುಷಂಗಿಕ ಆಕರ ಸಾಮಗ್ರಿಗಳನ್ನು ವಿವಿಧ ರೀತಿಯಲ್ಲಿ ಸಂಗ್ರಹಿಸಿಕೊಂಡು ಪ್ರಸ್ತುತ ಈ ಸಂಶೋಧನೆ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಟಿಪ್ಪಣಿಗಳು**

೧. ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಪು. ೫ ರಿಂದ ೬, ೨೦೦೯.

೨. ಅದೇ, ೨೦೦೯.

೩. ಚಿತ್ರಲೇಖ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯.

೪. ಲೇಖಾವರಣ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯.

೫. ಮಹಾದೇವ ಬಾಬಾ ಮೆಡೋಸ್ ಟೆಲರ್ ಸಂ: ದೇವು ಪತ್ತಾರ, ೨೦೦೯

೬. ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ, ಸಂಪಾದಕರು ವೀರಭದ್ರ ಸಿಂಪಿ ಡಾ. ಇಂದುಮತಿ ಪಾಟೀಲ, ಡಾ.ಎಂ.ಎಸ್. ಶಿರವಾಳ, ಪು.೨೬೮, ೨೦೧೧.

೭. ದೃಶ್ಯ ಸಂಸ್ಕೃತಿ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಪು. ೬ ರಿಂದ ೧೦, ೨೦೧೧.

೮. ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ, ಕೆ.ವಿ. ಕಾಳೆ ಪು. ೧೪೬, ೨೦೦೦.

೯. ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, ಡಾ. ಶೈಲಜಾ ಬಾಗೇವಾಡಿ ಪು. ೪೫, ೨೦೧೨.

೧೦. ಸುರಪುರ ಚಿತ್ರಕಲೆ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಪು. ೬, ೨೦೦೯.

೧೧. ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಅ. ಸುಂದರ, ಪು. ೨೯ ರಿಂದ ೩೨, ೧೯೯೪.

೧೨. ಶಿಲಾಶ್ರಯ ಕಲೆಯ ದೃಶ್ಯಧ್ಯಾನ, ಕೆ.ವಿ. ಸುಬ್ರಹ್ಮಣ್ಯ, ೨೦೧೧

೧೩. ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ, ಪು. ೨೬೭, ೨೦೧೧.

೧೪. ಯಾದಗಿರಿ ಸಿರಿ, ಬಸನಗೌಡ ಪಾಟೀಲ, ಪು. ೬೦ ರಿಂದ ೬೩, ೨೦೧೧.

೧೫. ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, ಡಾ. ಶೈಲಜಾ ಬಾಗೇವಾಡಿ ಪು. ೯೯ ರಿಂದ ೧೦೨, ೨೦೧೨.

೧೬. ಎಂ.ಟಿ. ಭೋಪಲೆ, ಡಿ.ಎನ್. ಅಕ್ಕಿ, ೧೯೯೯.

೧೭. 'ಸಗರಾದ್ರಿ' ಸ್ಮರಣ ಸಂಚಿಕೆ, ತಾಲೂಕ ಕನ್ನಡ ಸಾಹಿತ್ಯ ಪರಿಷತ್ತು, ಶಹಾಪುರ, ೨೦೧೨.

೧೮. ಚಿತ್ರಕಲಾವಿದ ಸಂಗಣ್ಣ ಎಂ. ದೋರನಹಳ್ಳಿ, ಬಸವರಾಜ ಎಸ್. ಕಲೆಗಾರ, ೨೦೧೩.

೧೯. ಚಿತ್ರಕಲಾವಿದ ಎಸ್.ಡಿ. ಪಾಟೀಲ, ಗಾಯತ್ರಿ ಮಂತ (ಅಪ್ರಕಟಿತ ಪ್ರಬಂಧ), ೨೦೧೩.

೨೦. ಧವಳ (ಅಭಿನಂದನಾ ಗ್ರಂಥ) ಡಾ. ಅಬ್ದುಲ್ ಕರೀಮ್ ಮತ್ತು ಡಾ. ಎಸ್.ಕೆ. ಅರುಣಿ, ೨೦೧೧.

೨೧. ಯಾದಗಿರಿ ಪ್ರದೇಶದ ಲಂಬಾಣಿ ತಾಂಡದ ಚಿತ್ರಕಲೆ, ಕಿರು ಯೋಜನಾ ವರದಿ (ಅಪ್ರಕಟಿತ ಪ್ರಬಂಧ) ಎನ್. ವೆಂಕಟೇಶ, ೨೦೦೭-೦೮.

೨೨. ಕರ್ನಾಟಕದ ಜನಪದ ಚಿತ್ರಕಲೆ, ಡಾ. ಎಸ್.ಸಿ.ಪಾಟೀಲ, ೧೯೯೩.

೨೩. ಕನಾಟಕದ ಹಸ್ತಪ್ರತಿ ಚಿತ್ರಕಲೆ, ಡಾ. ಎಚ್.ಎನ್. ಚಿತ್ರಗಾರ, ೨೦೦೫.

೨೪. ಹೈದ್ರಾಬಾದ ಕರ್ನಾಟಕದ ಸಾಂಸ್ಕೃತಿಕ ವಿಷಯ ಕೋಶ ಲಲಿತಕಲೆಗಳ ಸಂಪುಟ-ಸಂಪಾದಕರು: ಡಾ. ಪಿ.ಕೆ. ಖಂಡೋಬಾ, ಡಾ. ಎಸ್.ಸಿ.ಪಾಟೀಲ, ೨೦೧೨.

೨೫. ಹೈದ್ರಾಬಾದ್ ಕರ್ನಾಟಕದ ಬಟ್ಟೆಮಾಧ್ಯಮದ ಚಿತ್ರಕಲೆ, ಡಾ. ಕಾಮಾಕ್ಷಿ ಸೊಪ್ಪಣ್ಣ, ೨೦೧೦.

೨೬. ಹೈದ್ರಾಬಾದ್ ಕರ್ನಾಟಕದ ರಂಗೋಲಿ ಕಲೆಯ ಸಾಂಸ್ಕೃತಿಕ ಅಧ್ಯಯನ, ಡಾ. ವಿಶ್ವೇಶ್ವರಿ ತಿವಾರಿ, ೨೦೦೫.

೨೭. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಡಾ. ಯಾದಪ್ಪ ಪರದೇಶಿ, ೨೦೦೧.

## ಅಧ್ಯಾಯ ೨

# ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಿಸರ ಮತ್ತು ಲಲಿತಕಲೆಗಳು

ಕರ್ನಾಟಕದ ಮೂವತ್ತನೇ ಜಿಲ್ಲೆಯಾದ ಯಾದಗಿರಿ ಪರಿಸರ ಸಾಂಸ್ಕೃತಿಕ ಬೀಡಾಗಿದೆ. ಕಲೆ, ಸಾಹಿತ್ಯ, ಸಂಗೀತ, ಶಿಲ್ಪಕಲೆ ಹೀಗೆ ಹಲವು ಸ್ಮಾರಕಗಳಿಂದ ಕಂಗೋಳಿಸುವಂತಹ ಸಾಂಸ್ಕೃತಿಕ ನಗರ ಮತ್ತು ಲಲಿತಕಲೆಗಳ ನೆಲವಿದು. ಇಲ್ಲಿ ಉಗಮಗೊಂಡ ಕಲೆಗಳು ತಾತ್ವಿಕ ನೆಲೆಯಲ್ಲಿ ದರ್ಶನವಾಗುತ್ತವೆ. ರಾಜಾಶ್ರಯ ನೆಲೆಯಿಂದ ಪೌರಾಣಿಕವಾಗಿ, ಧಾರ್ಮಿಕವಾಗಿ ಸೂಫಿಸಂತರು, ಸಾಹಿತಿಗಳು, ಕಲಾವಿದರು, ನೆಲೆಸಿದ ಶ್ರೀಮಂತ ನಾಡು ಯಾದಗಿರಿ ಜಿಲ್ಲೆ. ಯಾದಗಿರಿ, ಸುರಪುರ, ಶಹಾಪುರ ಮೂರು ತಾಲೂಕುಗಳನ್ನು ಹೊಂದಿದ ಕರ್ನಾಟಕದ ಅತಿ ಚಿಕ್ಕ ಜಿಲ್ಲೆಯಾಗಿದೆ.

**ಪರಿಸರ:**

ಯಾದಗಿರಿ ಜಿಲ್ಲೆ ಬಿಸಿಲಿನ ನಾಡೆಂದರೂ ಕೂಡ ಕೃಷ್ಣ, ಭೀಮೆ ಈ ಎರಡು ನದಿಗಳಿಂದ ಕೂಡಿದೆ. ಸಾಲುಬೆಟ್ಟಗಳ ಮೇಲೆ ಬೆಳೆಯುವ ಗಿಡ-ಮರ, ಚಳಿ-ಮಳೆಗಾಲದಲ್ಲಿ ಹಚ್ಚ ಹಸಿರು, ಬೇಸಿಗೆಯಲ್ಲಿ ಬರೀ ಕಲ್ಲು, ಮಣ್ಣುಗಳಿಂದ ಕಾಣುವ ಬೆಟ್ಟದಲ್ಲಿ ಹುಟ್ಟಿಕೊಂಡ ರಾಜಾಶ್ರಯ ನೆಲೆಯ ವಾಸ್ತುಶಿಲ್ಪ ಕಟ್ಟಡ. ಕೋಟೆ-ಕೊತ್ತಲುಗಳು ವಿಶೇಷವಾಗಿ ಕಾಣುತ್ತವೆ ಅಲ್ಲದೆ ಯಾದಗಿರಿ ಜಿಲ್ಲೆ ಕೃಷಿ ಪ್ರಧಾನವಾಗಿದ್ದು, ಜೋಳ, ತೊಗರಿ ಬೆಳೆಗಳು ಪ್ರಮುಖವಾಗಿ ಬೆಳೆಯುತ್ತಾರೆ. ಹಾಗೂ ಹಬ್ಬ ಹರಿದಿನ, ಜಾತ್ರೆ-ಮಹೋತ್ಸವಗಳೊಂದಿಗೆ ಜನಜೀವನದ ಸಾಂಸ್ಕೃತಿಕ ಸಂಭ್ರಮವಾಗಿ ಕಂಡುಬರುತ್ತದೆ. ಮೌರ್ಯರು, ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಾದಾಮಿ ಚಾಲುಕ್ಯರು, ಹೈಹಯರು, ಕಳಚೂರಿ, ಬಹಮನಿ, ವಿಜಯನಗರ, ಹೈದ್ರಾಬಾದ್ ನಿಜಾಮರು, ಯಾದವರು, ವಿಜಾಪುರ ಆದಿಲ್‌ಷಾಹಿ, ಸುರಪುರ ಬೇಡನಾಯಕರು, ಹೀಗೆ ಹಲವಾರು ರಾಜವಂಶಗಳು ಆಳ್ವಿಕೆಯ ನಾಡಾಗಿದೆ. ಅಂತೆಯೇ ಅವರವರ ಕಾಲಾನುಕ್ರಮವಾಗಿ ಹುಟ್ಟಿಕೊಂಡ ದೇವಾಲಯ, ಕೋಟೆ, ಗುಂಬಜ್‌ಗಳು ತಮ್ಮದೇಯಾದ ಸ್ವರೂಪ ಪಡೆದ ವಾಸ್ತುಶಿಲ್ಪ ಕಟ್ಟಡಗಳು ಸಾಕ್ಷಿಯಾಗಿವೆ.

ಪೌರಾಣಿಕ ಹಿನ್ನೆಲೆಯಾಗಿ ನೋಡುವುದಾದರೆ ಯಾದಗಿರಿ ಜಿಲ್ಲಾ ಪರಿಸರಕ್ಕೆ ಸಗರನಾಡು ಪ್ರದೇಶವೆಂದೇ ಪ್ರಸಿದ್ಧಿ ಪಡೆದಿದೆ. ಪುರಾಣದಲ್ಲಿ ಪ್ರಸಿದ್ಧ ಮಹಾಬಲಶಾಲಿಯಾಗಿದ್ದ ಪರಮ ಧಾರ್ಮಿಕನೂ ಆಗಿದ್ದ ಸಗರ ಚಕ್ರವರ್ತಿ 'ಸಗರ'ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇಡೀ ಜಿಲ್ಲಾ ಪರಿಸರವನ್ನು ಆಳ್ವಿಕೆ ಮಾಡಿದವನೆಂದು ಪೌರಾಣಿಕ ಕಥೆಯಿದೆ. ಐತಿಹಾಸಿಕ ಹಿನ್ನೆಲೆಯನ್ನು ನೋಡಿದಾಗ ಸುರಪುರ, ಯಾದಗಿರಿ, ಶಹಾಪುರ, ಪರಿಸರದ ದೇವಪುರ, ಕಕ್ಕೇರಿ, ರಾಜನಕೋಳೂರು, ಹಗರಟಗಿ, ಕೆಂಭಾವಿ, ಐವೂರು, ಶಹಾಪುರ ತಾಲೂಕಿನ ಭೀಮರಾಯನಗುಡಿ, ಸಗರ, ವಿಭೂತಿಹಳ್ಳಿ, ಜೇವರ್ಗಿ ತಾಲೂಕಿನ ಕುಳಗೇರಿ ಮುಂತಾದ ಸ್ಥಳಗಳು ಪ್ರಾಚೀನ ಅವಶೇಷಗಳನ್ನು ಹೊಂದಿವೆ. ಸುರಪುರ ಸಂಸ್ಥಾನದ ಬ್ರಿಟಿಷ್ ಸರಕಾರದ ರಾಜಕೀಯ ಪ್ರತಿನಿಧಿಯಾಗಿ ಬಂದಿದ್ದ ಮೆಡೋಸ್ ಟೇಲರನು ರಾಜನಕೋಳೂರು, ವಿಭೂತಿಹಳ್ಳಿ, ಭೀಮರಾಯನಗುಡಿ, ಮುಂತಾದ ಸ್ಥಳಗಳಲ್ಲಿ ಪ್ರಾಚೀನ ಕುರುಹುಗಳನ್ನು ಸಂಶೋಧನೆ ಮಾಡಿ ಬೆಳಕಿಗೆ ತಂದಿದ್ದಾನೆ. ಖನಿಜ ಸಂಪತ್ತನ್ನು ನೋಡಿದಾಗ ಗೋಗಿ ಗ್ರಾಮದಲ್ಲಿನ ಯುರೇನಿಯಂ, ಮರ್ಕಲ್, ಕೊಳ್ಳೂರು ಗ್ರಾಮಗಳಲ್ಲಿ ವಜ್ರದ ನಿಕ್ಷೇಪವಿದ್ದು, ಕೊಹಿನೂರ್‌ವಜ್ರ, ಶಹಾಪುರ ತಾಲೂಕಿನಲ್ಲಿದೆ ಎಂಬುದಕ್ಕೆ ಹಲವು ಸರಕಾರಿ ದಾಖಲೆಗಳನ್ನು ಹೊಂದಿದೆ. ಶಹಾಪುರ ತಾಲೂಕಿನ ನಾಗನಟಗಿ, ಧರಿಯಾಪುರ, ರಾಜಾಪುರ, ಚಂದಾಪುರ, ಸಿರಿವಾಳ, ಅಣಬಿ, ಕರ್ಕಿಹಳ್ಳಿ, ಹೊಸಕೇರಾ, ದೋರನಹಳ್ಳಿ, ಹೊಸೂರು ಮುಂತಾದ ಗ್ರಾಮಗಳಲ್ಲಿ ಸುಣ್ಣದಕಲ್ಲು (ಸೇದಿಕಲ್ಲು) ಚಪ್ಪಡಿಕಲ್ಲು, ಹಾಸುಕಲ್ಲು, ದೊರೆಯುತ್ತದೆ. ಸುರಪುರ ತಾಲೂಕಿನ ಹಲವಡೆ ಮಂಗಳೂರು, ಮಾವಿನಮಟ್ಟಿ, ಚನಾಪುರ, ನಗನೂರು ಪ್ರದೇಶಗಳಲ್ಲಿ ಚಿನ್ನದ ಗಣಿಗಳಿದ್ದವೆಂದು ಭೂಗರ್ಭ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ತಿಂಥಣಿ ಗ್ರಾಮದಲ್ಲಿ ತಾಮ್ರದ ಅದಿರು, ಹುಣಸಗಿ, ವಜ್ಜಲ, ಚೆನ್ನೂರು ಗ್ರಾಮಗಳಲ್ಲಿ ಸಿಮೆಂಟ್ ತಯಾರಿಕೆಗೆ ಬೇಕಾಗುವ ಸುಣ್ಣದಕಲ್ಲು ದೊರೆಯುತ್ತದೆ. ಹೀಗೆ ಭೂ ಸಂಪತ್ತಿನಲ್ಲೂ ಯಾದಗಿರಿ ಜಿಲ್ಲಾ ಪರಿಸರ ಶ್ರೇಷ್ಠತೆ ಪಡೆದುಕೊಂಡಿದೆ. ತಿಂಥಣಿ ಮೌನೇಶ್ವರ, ಗೋಗಿಯ ಸಂತ ಚಂದಾ ಹುಸೇನಿ, ಸಂಗಮನಾಥ, ಮುದನೂರು ದೇವರದಾಸಿಮಯ್ಯ, ಕೂಡಲೂರು ಬಸವಲಿಂಗ ಶರಣ, ಕೆಂಬಾವಿ ಬೋಗಣ್ಣ, ಇಂತಹ ಶರಣರ ನೆಲೆಯಿಂದ ಹಿಂದೂ-ಮುಸ್ಲಿಂ ಭಾವೈಕ್ಯತೆಗೆ ಪ್ರಸಿದ್ಧಿ ಪಡೆದಿವೆ. ಸಂಕ್ರಾಂತಿ, ಶ್ರಾವಣಮಾಸ, ಯುಗಾದಿ, ಮೋಹರಂ, ಮಹಾಪರ್ವ, ದೀಪಾವಳಿ, ಹಂಪಿ ಹುಣ್ಣಿಮೆ, ನಾಗರ ಅಮವಾಸೆ, ಮಣ್ಣೆತ್ತಿನ ಅಮವಾಸೆ, ಕಾರಹುಣ್ಣಿಮೆ, ಹೀಗೆ ಹಲವು ಹಬ್ಬ ಹರಿದಿನ ಜಾತ್ರೆಗಳು ನಡೆಯುವ ಮೂಲಕ ಸಾಂಸ್ಕೃತಿಕ ಚಟುವಟಿಕೆ ಕಾರ್ಯ ನಡೆಯುತ್ತವೆ.

**ಲಲಿತಕಲೆಗಳು:**

ನೂತನ ಯಾದಗಿರಿ ಜಿಲ್ಲೆಯಲ್ಲಿ ಲಲಿತಕಲೆಗಳ ಉಗಮ ಈ ರೀತಿ ಅಭಿವ್ಯಕ್ತಿಗೊಂಡಿದೆ.

ಪ್ರಮುಖವಾಗಿ ಚಿತ್ರಕಲೆ, ಶಿಲ್ಪಕಲೆ, ನಾಟಕ, ಸಂಗೀತ, ಬಯಲಾಟ, ಹೀಗೆ ಹಲವು ವಿಧಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕರ್ನಾಟಕದಲ್ಲಿ ೧೮೮೦ರ ಸಂದರ್ಭದಲ್ಲಿ ಹೂಬರ್ಟ್‌ನಾಕ್ಸ್ ಕಪಗಲ್‌ನಲ್ಲಿ ಕುಟ್ಟಿದ ಚಿತ್ರಗಳನ್ನು ಶೋಧಿಸಿದ ನಂತರ ೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರು ಹಿರೇಬೆನಕಲ್ ಗುಡ್ಡಗಾಡು ಪ್ರದೇಶದಲ್ಲಿ ಗವಿವರ್ಣ ಚಿತ್ರಗಳನ್ನು ಕಂಡುಹಿಡಿದನು. ನಂತರ ೧೯೪೦ರ ದಶಕದಲ್ಲಿ ಮಸ್ಕಿ, ಕಲ್ಲೂರು, ಆತನೂರು ಕೆಲವು ನೆಲೆಗಳೊಂದಿಗೆ ಯಾದಗಿರಿಯ ಬಳಿಚಕ್ರದಲ್ಲಿರುವ ಪ್ರಾಗಿತಿಹಾಸ ಕಾಲದ ವರ್ಣಚಿತ್ರ ಶೋಧಿಸಿದವರು ಅ. ಸುಂದರ ಅವರು. ಈ ನೆಲೆ ಅಷ್ಟೇ ಅಲ್ಲದೇ ಹಗರಟಗಿ, ಹಿರೇಹೆಬ್ಬಾಳ, ಹುಣಸಗಿ ಪರಿಸರ, ವರ್ಕನಳ್ಳಿ ತಾಂಡಾ, ಮುಂತಾದ ಸ್ಥಳಗಳಲ್ಲಿ ಪ್ರಾಗೈತಿಹಾಸ ಕಾಲದ ವರ್ಣ ರೇಖಾಚಿತ್ರಗಳು ಇವೆ. ಈ ಚಿತ್ರ ನೆಲೆಗಳಿಂದ ಪ್ರಾಗಿತಿಹಾಸ ಕಾಲದ ಚಿತ್ರ ರಚನಾಕಾರ್ಯ, ಉತ್ಸಾಹ, ವಸ್ತು, ವಿಷಯ, ನಮಗೆ ಆಧಾರವಾಗಿವೆ. ಪ್ರಾಗಿತಿಹಾಸ ನೆಲೆಗಳನ್ನು ಹೊರತುಪಡಿಸಿದರೆ ಸುರಪುರ ಸಂಸ್ಥಾನದಲ್ಲಿ ಹುಟ್ಟಿಕೊಂಡು ಬೆಳೆದ ಗರುಡಾದ್ರಿ ಚಿತ್ರಕಲಾ ಶೈಲಿ ಭಾರತೀಯ ಹಲವು ಸಾಂಪ್ರದಾಯಿಕ ಶೈಲಿಗಳಲ್ಲಿ ಸುರಪುರ ಶೈಲಿಯೆಂದೇ ಗುರುತಿಸಿ ಗೌರವಿಸಿಕೊಂಡಿರುವುದು ಯಾದಗಿರಿ ಜಿಲ್ಲೆಯಿಂದ ಚಿತ್ರಕಲಾ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯಾಗಿದೆ. ರಂಗಂಪೇಟೆಯ ರುದ್ರಸ್ವಾಮಿಮಠ, ಅಣ್ಣಯ್ಯನ ಮಠ, ಕಾಕಲವಾರ ದೇಶಮುಖ ಸಂಸ್ಥಾನದ ಅರಮನೆಯ ಭಿತ್ತಿಚಿತ್ರಗಳು ಮಹತ್ವದ ಕಲಾಕೃತಿಗಳಾಗಿವೆ. ಯಾದಗಿರಿ ಜಿಲ್ಲೆಯ ಹಿರಿಯ ಕಲಾವಿದರಾದ ಎಂ.ಟಿ. ಭೋಪಲೆಯವರು ಸಮಕಾಲೀನ ಚಿತ್ರಕಲೆಗೆ ಅವರು ನೀಡಿದ ಕಲಾ ಕೊಡುಗೆ ಅಪಾರವಾದದ್ದು. ಅಂತೆಯೇ ಅವರ ರಚಿಸಿದ ಕಲಾಕೃತಿಗಳು ತಾತ್ವಿಕ ಚರ್ಚೆಗೆ ದಾರಿಮಾಡಿಕೊಂಡಿವೆ. ಪ್ರಸ್ತುತ ಹಿರಿಯ ಕಲಾವಿದರಾದ ಸಂಗಣ್ಣ ಮಲಗೊಂಡ ದೋರನಹಳ್ಳಿ, ಡಿ.ಎನ್.ಅಕ್ಕಿ, ಎಸ್.ಡಿ. ಪಾಟೀಲ, ದಿವಂಗತ ಶಂಕ್ರಪ್ಪ ಶೀಲವಂತ, ಮಹ್ಮದ ತಾಹೀರ್ ಸೇರಿದಂತೆ ಹಲವಾರು ಹಿರಿಯ ಚಿತ್ರಕಲಾವಿದರು ನೆಲೆಸಿದ್ದಾರೆ. ಹಾಗೂ ಜಿಲ್ಲೆಯಲ್ಲಿ ಜನಪದ ಚಿತ್ರಕಲೆ, ಹಸೆಕಲೆ, ಹಚ್ಚೆಕಲೆ, ರಂಗೋಲಿ ಕಲೆ, ಕರಕುಶಲ ಕಲೆ, ಮದರಂಗಿ ಕಲೆ, ಹಸ್ತಪ್ರತಿ ಚಿತ್ರಕಲೆ ಹೀಗೆ ಹಲವಾರು ಕಲೆಗಳು ಸಂಕೀರ್ಣದಿಂದ ಕೂಡಿವೆ. ಪ್ರಸ್ತುತ ಜಿಲ್ಲೆಯಲ್ಲಿ ಯುವ ಚಿತ್ರಕಲಾವಿದರು ಸಮಕಾಲೀನ ಸ್ಪಂದನೆಯ ಕಲಾಕೃತಿಯನ್ನು ರಚಿಸುವುದರೊಂದಿಗೆ, ಕೃಷ್ಣಾ ನದಿಯ ದಡದಲ್ಲಿ ಮರಳಿನ ಶಿಲ್ಪಗಳನ್ನು ಮಾಡುವ ಮೂಲಕ ಕಲಾಕ್ಷೇತ್ರದಲ್ಲಿ ಗಟ್ಟಿ ಹೆಜ್ಜೆಯನ್ನಿಡಲೂ ಪ್ರಯತ್ನಿಸುತ್ತಿದ್ದಾರೆ. ಯಾದಗಿರಿ ಜಿಲ್ಲೆಯಲ್ಲಿ ಚಿತ್ರಕಲೆಯ ಮಹತ್ವ ಪ್ರಮುಖವಾಗಿ ಕಂಡುಬರುತ್ತದೆ. ಚಿತ್ರಕಲೆಯ ಪಾತ್ರ ಅಷ್ಟೇ ಅಲ್ಲದೇ ಜಿಲ್ಲೆಯಲ್ಲಿರುವ ಮಹಲ್-ರೋಜಾ ಗುಮ್ಮಟ, ಸಗರ-ಕೋಟೆ, ಯಾದಗಿರಿ, ಸುರಪುರ ಅರಮನೆ, ಮತ್ತು ವೇಣುಗೋಪಾಲಸ್ವಾಮಿ ದೇವಾಲಯ, ಗೋಗಿಯ ದರ್ಗಾ, ಮಸೀದಿ, ಗುಮ್ಮಟಗಳು, ಕಾಕಲವಾರ ದೇಶಮುಖರ ಅರಮನೆ, ಸಿರಿವಾಳದ ದೇವಾಲಯಗಳು, ಅಣಬಿ, ಮದ್ರಿಕಿ, ಭೀಗುಡಿ, ವನದುರ್ಗ ಕೋಟೆ, ಹೀಗೆ ಹಲವಾರು ರಾಜಾಶ್ರಯ ನೆಲೆಯಲ್ಲಿ ಹುಟ್ಟಿಕೊಂಡ ವಾಸ್ತುಶಿಲ್ಪ ಕಟ್ಟಡಗಳು,

ಶಿಲ್ಪಕಲಾ ಕ್ಷೇತ್ರಕ್ಕೆ ವಿಶೇಷ ಕೊಡುಗೆಯಾಗಿದೆ. ಮತ್ತು ನಾಟಕಕಾರರು, ಬಯಲಾಟಗಳು, ಸಂಗೀತ ಸಾಹಿತ್ಯ, ಹೀಗೆ ಹಲವು ಕಲೆಗಳಿಂದ ಯಾದಗಿರಿ ಜಿಲ್ಲೆ ಲಲಿತಕಲೆಗಳ ಬೀಡಾಗಿದೆ ಎಂಬುದು ಗಮನಾರ್ಹ ಚಿಂತನೆಯಾಗಿದೆ.

# ಅಧ್ಯಾಯ ೩

# ಯಾದಗಿರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ

ಆದಿ ಮಾನವನ ಸಾಂಸ್ಕೃತಿಕ ಬದುಕಿನತ್ತ ನೋಡಿದಾಗ ಅವನ ಅಭಿವ್ಯಕ್ತಿಯ ಕ್ರಮಗಳು ಬೇರೆ ಬೇರೆ ಮೂಕ ವೇದನೆಯ ಅನುಭವಗಳನ್ನು ಪ್ರಪ್ರಥಮವಾಗಿ ಚಿತ್ರ ರಚಿಸುವ ಮೂಲಕ ಹಂಚಿಕೊಂಡಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ. ರಾಗದ ರೂಪದಲ್ಲಿ ಧ್ವನಿಯಾದರೆ ಅದಕ್ಕೆ ಪುಷ್ಟಿಗೊಳ್ಳುವಂತೆ ರೇಖೆ–ವರ್ಣಗಳು ಜೀವ ತುಂಬಿದವು. ತಾನು ವಾಸಿಸುವ ಬೆಟ್ಟ–ಗುಡ್ಡಗಳ, ಗುಹೆಯೊಳಗೆ ತನಗೆ ಇಷ್ಟವಾದಂತೆ ಅನೇಕ ಚಿತ್ರಗಳನ್ನು ರಚಿಸಿದ್ದಾನೆ. ತನ್ನೊಳಗಿನ ಸಂತೋಷ, ದುಃಖ–ದುಮ್ಮಾನಗಳನ್ನು ಹೊರಹಾಕುವುದಕ್ಕೆ ಚಿತ್ರಕಲೆ ಪ್ರಮುಖ ಸಾಧನವನ್ನಾಗಿಸಿಕೊಂಡಿದ್ದನು. ಅಂದು ರಚಿಸಿದ ಆದಿಮಾನವನ ಚಿತ್ರಗಳು ಇವತ್ತಿಗೂ ಜೀವಂತ ಸಾಕ್ಷಿಯಾಗಿವೆ. ಪ್ರಪಂಚದ ವಿವಿಧ ಭಾಗಗಳಲ್ಲಿ ಈ ಚಿತ್ರಗಳು ಕಂಡುಬರುತ್ತವೆ.

## ವಿಶ್ವದಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆ

೧೮೩೭ರಲ್ಲಿ ಸರ್ ಜಾರ್ಜ್‌ಗ್ರೇ ಅವರಿಂದ ಸಿಡ್ನಿ (ಆಸ್ಟ್ರೇಲಿಯಾ) ವರ್ಣಚಿತ್ರಗಳು ಗವಿಗಳ ಶೋಧನೆ ಪ್ರಪ್ರಥಮವಾದರೂ ಬಹುಶಃ ೧೮೭೯ರ ಅಲ್ತಮಿರ್ (ಸ್ಪೇನ್)ದಲ್ಲಿಯ ವರ್ಣಚಿತ್ರಿತ ಗವಿಗಳ ಶೋಧನೆ, ಬಂಡೆ–ಗವಿ ಚಿತ್ರಗಳ ಶೋಧನೆ ಇತಿಹಾಸದಲ್ಲೇ ವಿಶೇಷವಾದದ್ದು. ಸ್ವಾರಸ್ಯಕರವಾದರೂ ೧೮೭೫ರಲ್ಲಿ ಒಬ್ಬ ಹವ್ಯಾಸಿ ಪುರಾತತ್ವ ಶೋಧಕನು ಅಲ್ತಮಿರ ನೆಲೆಯ ಪ್ರದೇಶದ ಭೂ ಒಡೆಯನೂ ಆದ ಡಾಸೆ ಮಾಸೆಲಿನೊದ ಸೌತ್ ಪೊಲನು ಅಲ್ತಮಿರ್ ಗವಿಯಲ್ಲಿ ಕಪ್ಪು ಬಣ್ಣದ ಅಂಚಿನ ಚಿತ್ರಗಳ ಮಹತ್ವದಾಗಿ ಕಾಣಲಿಲ್ಲ. ಪ್ರಾಗೈತಿಹಾಸಿಕ ಕಾಲದ್ದೆಂದೂ ಅನ್ನಿಸಲಿಲ್ಲ. ಅನಂತರ ೧೮೭೮ರಲ್ಲಿ ಪ್ಯಾರಿಸ್‌ನಲ್ಲಿ ಒಂದು ಪುರಾತತ್ವ ಪ್ರದರ್ಶನವನ್ನು ನೋಡಿದನು. ಅಲ್ಲಿ ದೋರ್ದೋಜ್ಞೆ (ಫ್ರಾನ್ಸ್)ದಲ್ಲಿಯ ಒಂದು ಕಲ್ಲಾಸರೆಯಲ್ಲಿ ದೊರೆತ ಪ್ರಾಗೈತಿಹಾಸಿಕ ಕಾಲದ ಬೇಟೆಯಾಡುವ ಜನವರ್ಗದ ಆಯುಧಗಳು ಮತ್ತು ಊರಿ ಬಿಡಿಸಿದ ರೇಖಾಚಿತ್ರಗಳನ್ನುಳ್ಳ ಉಪಕರಣಗಳು ಅವನನ್ನು ಆಕರ್ಷಿಸಿದವು. ತನ್ನ ಪ್ರಾಂತ್ಯಕ್ಕೆ

ಹಿಂದಿರುಗಿಸಿದ ಮೇಲೆ ಅವನು ಹೆಚ್ಚಿನ ಉತ್ಸಾಹದಿಂದ, ತಿಳುವಳಿಕೆಯಿಂದ ತಾನು ಹಿಂದೆ ನೋಡಿದ್ದ ಗವಿಗಳನ್ನು ಮತ್ತೆ ಶೋಧಿಸಲು ಆರಂಭಿಸಿದನು. ಆ ಸಮಯದಲ್ಲಿ ಆ ಅಪರೂಪ ಚಿತ್ರಗಳ ಶೋಧನೆಯು ಒಂದು ಕಥೆಯೇ ಸರಿ. ಅನ್ವೇಷಣೆಯ ಕಾಲದಲ್ಲಿ ಅವನ ಚಿಕ್ಕಮಗಳು ಜೊತೆಗಿದ್ದಳು. ಒಮ್ಮೆ ಅವನು ಗವಿಯ ಪ್ರದೇಶದ ಭಾಗದಲ್ಲಿ ಅಗೆಯುತ್ತಿರುವಾಗ ಆ ಹುಡುಗಿಯು ಸಹಜವಾಗಿ ಹುಡುಗಾಟಿಕೆಯಿಂದ ಬಂಡೆಯ ಮೇಲೆ ಬರೆದ ಗೂಳಿಗಳ ಚಿತ್ರಗಳನ್ನು ನೋಡಿ ಆಶ್ಚರ್ಯದಿಂದ "ತೋರೋ, ತೋರೋ.... (ಗೂಳಿಗಳು) ಎಂದು ಕೂಗಿದಳು. ಕೂಡಲೇ ತಂದೆಯೂ ಗವಿಯೊಳಗೆ ಹೋಗಿ ಆ ಕುತೂಹಲಕಾರಿಯಾದ ದೊಡ್ಡ-ದೊಡ್ಡ ಬಲಿಷ್ಠ ಕೋಣಗಳ ಚಿತ್ರಗಳನ್ನು ನೋಡಿ ಪುಳಕಿತನಾದನು. ತನ್ನ ಅಗೆತದಲ್ಲಿ ದೊರೆತ ಕಲ್ಲಿನ ಉಪಕರಣಗಳನ್ನು ಮಾಡಿದ ಜನರೆ ಆ ಚಿತ್ರಗಳನ್ನು ಬಿಡಿಸಿರುವರೆಂದು ತರ್ಕಿಸಿ, ಅವುಗಳ ಬಗೆಗೆ ೧೮೮೦ರಲ್ಲಿ ಒಂದು ಲೇಖನವನ್ನು (ಬ್ರೀಫ್ ನೋಟ್ಸ್ ಅನ್‌ಸಮ್ ಪ್ರೀ ಹಿಸ್ಟಾರಿಕ್ ಅಬ್ಜಕ್ಟ್ಸ್ ಆಫ್ ದಿ ಪ್ರಾವಿನ್ಸ್ ಆಫ್ ಸಂತದರೆಷಿ) ಪ್ರಕಟಿಸಿದನು. ಆದರೆ ಅವನಿಗೆ ನಿರಾಶೆ ಕಾದಿತ್ತು. ಗತಕಾಲದ ಸಸ್ಯ, ಪ್ರಾಣಿ, ಪಡಿಯಚ್ಚು ಶಾಸ್ತ್ರದಲ್ಲಿ ನಿಷ್ಣಾತನಾದ ಫ್ರೆಂಚ್ ಶಾಸ್ತ್ರಜ್ಞನೊಬ್ಬನು, ಆ ಚಿತ್ರಗಳು ಪ್ರಾಗೈತಿಹಾಸಿಕ ಕಾಲವಲ್ಲವೆಂದು ವಾದಿಸಿದನು. ಇತರ ಪುರಾತತ್ವಶಾಸ್ತ್ರಜ್ಞರೂ ಇವನ ಅಭಿಪ್ರಾಯವನ್ನು ಅನುಮೋದಿಸಿದರು. ಅವೆಲ್ಲ ಯಾರೋ ಕಲಾಭ್ಯಾಸಿ ಹುಡುಗರು ಇಲ್ಲ ರೋಮ್ ದೇಶದ ಸೈನಿಕ ತುಕಡಿಗಳು ಅಲ್ಲೆಲ್ಲಾದರೂ ಬಿಡಾರ ಮಾಡಿದ್ದಾಗ ಈ ಚಿತ್ರಗಳನ್ನು ಬಿಡಿಸಿದ್ದಿರಬೇಕು ಎಂದು ಊಹಿಸಿದರು. ಇದು ಅಷ್ಟಕ್ಕೆ ನಿಲ್ಲಲಿಲ್ಲ. ಮಾರ್ಸೆಲಿನೊ ಅವುಗಳನ್ನು ತಾನೆ ಬಿಡಿಸಿ ಪ್ರಾಗೈತಿಹಾಸಿಕ ಕಾಲದ್ದೆಂದು ಹೇಳಿ ಪಂಡಿತರನ್ನು ಮೋಸಗೊಳಿಸುತ್ತಿರುವನೆಂದು ಸಂಶಯಪಟ್ಟರು. ಬಹುಶಃ ಈ ತಜ್ಞರು ತಮ್ಮ ದೇಶದ ದೋರ್ದೋಜ್ಞಿಯ ಶೋಧನೆಗಳ ಹಿರಿಮೆಯು ಮೇಲುಗೈಯಾಗಿರಬೇಕೆಂದು ಪಕ್ಷಪಾತ ಬುದ್ಧಿಯಿಂದ ಕ್ರಮಬದ್ಧವಾಗಿ ಮಾರ್ಸೆಲಿನೊನ ಶೋಧನೆಗಳನ್ನು ಆ ರೀತಿ ಅವಹೇಳನ ಮಾಡಿದರೆಂಬ ಅಭಿಪ್ರಾಯವಿದೆ. ಆದರೆ ಸತ್ಯವನ್ನು ಬಹುಕಾಲ ಮುಚ್ಚಿಡಲು ಸಾಧ್ಯವಿಲ್ಲ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಫ್ರಾನ್ಸ್‌ನಲ್ಲಿಯೂ ಅಲ್ತಮಿರ್ ತರಹದ ಶಿಲಾಯುಗದ ವರ್ಣಚಿತ್ರಗಳು ಶೋಧಿಸಲ್ಪಟ್ಟವು. ಇವುಗಳಲ್ಲಿ ಕಾಡುಕೋಣ, ದೊಡ್ಡ ಗಾತ್ರದ ಜಿಂಕೆ, ಖಡ್ಗ ಮೃಗಗಳ ಚಿತ್ರಗಳಿದ್ದವು. ಅಲ್ತಿಮಿರ್ ಚಿತ್ರಗಳಿಗೆ ಬಹುಮಟ್ಟಿಗೆ ಹೋಲುತ್ತಿದ್ದವು. ಆದ್ದರಿಂದ ತಜ್ಞರು ಅನಿವಾರ್ಯವಾಗಿ ಅಲ್ತಮಿರ್ ಚಿತ್ರಗಳ ಕಡೆಗೆ ಗಮನ ಹರಿಸಬೇಕಾಯಿತು. ಎಮಿಲೆ ಕಾರ್ಥೈಲ್ಯಾಕ್ ಮತ್ತು ಹೆನ್ರಿ ಬ್ರಾಲ್ ಅವರುಗಳು ೧೯೦೧ರಲ್ಲಿ ಅಲ್ತಮಿರ್ ಚಿತ್ರಗಳನ್ನು ಮತ್ತೇ ಪರಿಶೀಲಿಸಿದರು. ಮಾರ್ಸೆಲಿನೋ ಅಭಿಪ್ರಾಯಗಳು ಸರಿಯೆಂದು ಹೇಳಿದರು. ಆದರೆ ಅಷ್ಟರೊಳಗೆ ಮಾರ್ಸೆಲಿನೋ ತೀರಿಕೊಂಡಿದ್ದರು. ಈ ಅಲ್ತಮಿರ್ ವರ್ಣಚಿತ್ರಗಳು ಜಗತ್ಪ್ರಸಿದ್ಧವಾಗಿವೆ. ನಂತರ ಲ್ಯಾಸ್ಕೊ (ದೋರ್ದೋಜ್ಞೆ ವಿಭಾಗ ಫ್ರಾನ್ಸ್) ಎಂಬಲ್ಲಿಯೂ ಆಕಸ್ಮಿಕವಾಗಿಯೇ ವರ್ಣಚಿತ್ರ ಗವಿಗಳು ಬೆಳಕಿಗೆ ಬಂದವು. ಮೊಂತಿಜ್ಞೆ ನಗರದ ಬಳಿ ವೆಜೆರೆ ನದಿಯ ದಂಡೆಯ ಗವಿ ತುಂಬ ಶುಭ್ರವರ್ಣಚಿತ್ರಗಳು. ಇದರ ಸಮೀಪದಲ್ಲಿಯೇ ಅತ್ಯಂತ ಹಳೆಯ ಶಿಲಾಯುಗದ ಮಾದರಿಯ ನೆಲೆಗಳು ಲ ಮಸ್ತೀರ್, ಕ್ರೊಮ್ಯಾಗ್ನ ಮೊದಲಾದೆಡೆಗಳಲ್ಲಿವೆ.

ಈ ಆಕಸ್ಮಿಕ ಘಟನೆ ನಡೆದದ್ದು ೧೯೪೦ರಲ್ಲಿ, ಇದು ಇಂತಹ ವರ್ಣಚಿತ್ರಗಳ ಶೋಧನೆಗೆ ಪುಟಕೊಟ್ಟಿತು. ಪುರಾತತ್ವಜ್ಞರಲ್ಲಿ ಇವುಗಳ ಬಗೆಗೆ ಆಸಕ್ತಿ ಕುತೂಹಲ ಬಲವಾಯಿತು. ಕ್ರಮಬದ್ಧ ಅನ್ವೇಷಣೆಗೆ ಎಡೆಮಾಡಿಕೊಟ್ಟಿತು. ಹೀಗೆಯೇ ಆಸ್ಟ್ರೇಲಿಯಾ, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ಭಾರತ, ರಷ್ಯಾ, ಜಪಾನ್ ಮೊದಲಾದ ಖಂಡ/ರಾಷ್ಟ್ರಗಳಲ್ಲಿ ಇಂತಹ ವರ್ಣ ಹಾಗೂ ಬಂಡೆಚಿತ್ರಗಳು ಶೋಧನೆಯಾದವು ಮತ್ತು ಆಗುತ್ತಲಿವೆ. ಜೊತೆಗೆ ಇವುಗಳ ವೈಜ್ಞಾನಿಕ ಅಧ್ಯಯನವೂ ನಡೆಯುತ್ತಲಿವೆ. ಅತಿ ಪ್ರಾಚೀನ ಕಾಲದಿಂದಲೂ ಅಂದರೆ ಕನಿಷ್ಠ ಸುಮಾರು ೪೦,೦೦೦ ವರ್ಷಗಳಿಂದ ಇತ್ತೀಚಿನವರೆಗೂ ಉಳಿದುಕೊಂಡು ಬಂದ ಈ ಚಿತ್ರಕಲೆಯು ಪ್ರಪಂಚದ ನಾನಾ ಭಾಗಗಳಲ್ಲಿ ವಿವಿಧ ಜನಾಂಗಗಳ ಕಲೆಯನ್ನಲ್ಲದೆ ಅವರ ವೈವಿಧ್ಯಮಯ ಹಲವಾರು ಭಾವನೆ, ನಂಬಿಕೆ, ಕಟ್ಟಳೆಗಳನ್ನು ಪ್ರತಿಬಿಂಬಿಸುವ ಅಮೂಲ್ಯ 'ದೃಶ್ಯ' ಸ್ಮಾರಕಗಳೆಂದು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಅರಿಯಲಾಗಿದೆ. ಆದ್ದರಿಂದ ಇವುಗಳ ಶೋಧನೆ, ಅಧ್ಯಯನ, ರಕ್ಷಣೆ ಮತ್ತು ಪ್ರಕಟಣೆಗೋಸ್ಕರ ೧೯೬೪ ಅಗಷ್ಟ್ ೩ರಂದು ಇಟಲಿಯ ಕಸದಿಪೊಂತ (ಬ್ರೀಸಿಯಪ್ರಾಂತ್) ಎಂಬಲ್ಲಿ 'ಸೆಂತ್ರೊ ಕಮ್ಯೂನೊ ದಿ ಸ್ಟುಡಿ ಪ್ರಿ ಹಿಸ್ಟಾರಿಚಿ ವಾಲ್ಕಮೊನಿಕ ಎಂಬ ಒಂದು ಅಂತರ್‌ರಾಷ್ಟ್ರೀಯ ಸಂಶೋಧನ ಸಂಸ್ಥೆಯನ್ನು ತೆರೆಯಲಾಯಿತು. ಈ ಸಂಸ್ಥೆಯ ವಾಲ್ಕಮೊನಿಕ ಬೆಟ್ಟದಲ್ಲಿಯ ಸುಮಾರು ೧,೩೦,೦೦೦ ಬಂಡೆಚಿತ್ರಗಳನ್ನು ಶೋಧಿಸಿ, ವಿಶ್ಲೇಷಿಸಿ ಪ್ರಕಟಿಸಿದೆ. ೧೯೮೦ರಲ್ಲಿ ಸಾಂಸ್ಕೃತಿಕ ಸ್ಮಾರಕಗಳು ಮತ್ತು ನೆಲೆಗಳಿಗೆ ಸಂಬಂಧಪಟ್ಟ ಅಂತರ್‌ರಾಷ್ಟ್ರೀಯ ಪರಿಷತ್ತು, ಗವಿ ಮತ್ತು ಬಂಡೆಚಿತ್ರಗಳ ಶೋಧನೆ, ಅಧ್ಯಯನ ರಕ್ಷಣೆಗೆ ಸಂಬಂಧಪಟ್ಟಂತೆ ಒಂದು ಅಂತಾರಾಷ್ಟ್ರೀಯ ಸಮಿತಿಯನ್ನು ರಚಿಸಿದೆ. ಸದ್ಯಕ್ಕೆ ಪ್ರಪಂಚದ ನಾನಾ ಭಾಗಗಳಲ್ಲಿ ಈ ಚಿತ್ರಕಲೆಯ ಅಧ್ಯಯನವನ್ನು ಕೈಗೊಂಡಿರುವ ತಜ್ಞರು ಮತ್ತು ಅವರ ಸಂಶೋಧನೆ ಬಗೆಗೆ ವಿಷಯಗಳನ್ನು ಸಂಗ್ರಹಿಸುತ್ತಿದೆ. ಇದಲ್ಲದೆ ವಿಶ್ವ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ವಿಭಾಗವು ಈ ಚಿತ್ರಕಲೆಯ ಅಧ್ಯಯನ ಹಾಗೂ ರಕ್ಷಣೆ ವಿಷಯದಲ್ಲಿ ಆಸಕ್ತಿ ವಹಿಸಿದೆ. ಆಫ್ರಿಕಾ ಮತ್ತು ಅಮೇರಿಕಾ, ಏಷ್ಯಾ ಮತ್ತು ಯುರೋಪ್ ಖಂಡಗಳಲ್ಲಿಯೂ ಹಲವಾರು ಮಹತ್ವದ ಚಿತ್ರಕಲೆಯ ನೆಲೆಗಳನ್ನು ವಿಶ್ವದ ಆಸ್ತಿಯೆಂದು ಘೋಷಿಸಿ, ಅವುಗಳ ರಕ್ಷಣೆಯ ಹೊಣೆಯನ್ನು ತಾನು ಹೊತ್ತಿದೆ. ಹೀಗೆ ಕಳೆದ ಶತಮಾನದಲ್ಲಿ ಅಲ್ಲೊಂದು-ಇಲ್ಲೊಂದು ಆಕಸ್ಮಿಕ ಶೋಧನೆಗಳಿಂದ ಪ್ರಾರಂಭವಾದ ಈ ಚಿತ್ರಕಲೆಯ ಅಧ್ಯಯನವು ಇಂದು ಅಂತರಾಷ್ಟ್ರೀಯ ಗಮನವನ್ನು ಸೆಳೆದಿದೆ ಮತ್ತು ಮಹತ್ವವನ್ನು ಹೊಂದಿದೆ.[೧]

**ಭಾರತದಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆ ಅಧ್ಯಯನ:**

ನಮ್ಮ ದೇಶದಲ್ಲಿಯೂ ಗವಿ ವರ್ಣ ಮತ್ತು ಬಂಡೆ ಚಿತ್ರಗಳ ಶೋಧನೆ ಆಕಸ್ಮಿಕವಾಗಿ ಅಲ್ಲಲ್ಲಿ ೧೮೮೦ರಿಂದ ಪ್ರಾರಂಭವಾಯಿತೆನ್ನಬಹುದು. ಹೂಬರ್ಟ್‌ನಾಕ್ಸ್ ಬಳ್ಳಾರಿ ಸಮೀಪದಲ್ಲಿರುವ ಕಪ್ಪಗಲ್ಲು ಗ್ರಾಮದಲ್ಲಿಯ ಗುಡ್ಡಗಳಲ್ಲಿ ದೊಡ್ಡ ದೊಡ್ಡ ಗುಂಡುಕಲ್ಲುಗಳ ಮೇಲೆ ಕುಟ್ಟಿ, ಗೀರಿ, ಬಿಡಿಸಿದ ಚಿತ್ರಗಳನ್ನು

ಸುಮಾರು ೧೮೮೦ರ ಸಮಯದಲ್ಲಿ ನೋಡಿ, ಅವುಗಳ ಛಾಯಾಚಿತ್ರವನ್ನು ತೆಗೆದು ರಾಬರ್ಟ್ ಬ್ರೂಸ್ ಫುಟ್ ಅವರಿಗೆ ಕಳುಹಿಸಿಕೊಟ್ಟರು. ಫುಟ್ ಅವರು ೧೯೧೬ರಲ್ಲಿ ಪ್ರಕಟಿಸಿದ 'ದಿ ಫುಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರೀ ಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟೀಸ್' ಪುಸ್ತಕದಲ್ಲಿ ಇವುಗಳ ವರ್ಣನೆಯನ್ನು ಕೊಟ್ಟಿದ್ದಾರೆ. ಈ ಚಿತ್ರಗಳ ಶೋಧನೆಯ ಸಮಯದಲ್ಲಿ ಉತ್ತರ ಭಾರತದಲ್ಲಿ ಆರ್ಚಿಬಾಲ್ಡ್ ಕಾರ್ಲೈಲ್ ಮತ್ತು ಜಾನ್ ಕಾಕ್‌ಬರ್ನ್ ಅವರುಗಳು ಮಿರ್ಜಾಪುರ (ಮಧ್ಯಪ್ರದೇಶ) ಬಳಿಯ ವಿಂಧ್ಯ ಪ್ರದೇಶದ ಕೈಮೂರ ಬೆಟ್ಟದಲ್ಲಿಯ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳನ್ನು ಕಂಡು ೧೮೮೦-೮೩ರಲ್ಲಿ ಅವುಗಳ ಬಗೆಗೆ ಮೂರು ಲೇಖನಗಳನ್ನು ಪ್ರಕಟಿಸಿದನು. ಹೆಚ್ಚಾಗಿ ೧೯೦೧ರಿಂದ ಉತ್ತರ ಭಾರತದಲ್ಲಿ ಅಲ್ಲಲ್ಲಿ ಇಂತಹ ಗವಿ ವರ್ಣಚಿತ್ರಗಳು ಶೋಧವಾಗುತ್ತಲ್ಲಿದ್ದವು. ಕರ್ನಾಟಕದಲ್ಲಿ ೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರು ಹಿರೆ ಬೆನಕಲ್ (ಗಂಗಾವತಿ ತಾಲೂಕು ರಾಯಚೂರು ಜಿಲ್ಲೆ) ಗುಡ್ಡಗಳಲ್ಲಿ ಸ್ವಾರಸ್ಯಕರವಾದ ಮೂರು ಗವಿ ವರ್ಣಚಿತ್ರಗಳನ್ನೂ ಸುಮಾರು ಅದೇ ಸಮಯದಲ್ಲಿ ಭೀಮರಾಯನ ಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ಕಂಡುಹಿಡಿದರು.

ಇಂತಹ ಚಿತ್ರಗಳ ಶೋಧನೆಯಲ್ಲಿ ೧೯೫೭ ಒಂದು ಮಹತ್ವದ ವರ್ಷವೆಂದೇ ಹೇಳಬಹುದು. ಉಜ್ಜಯಿನಿಯ (ಮಧ್ಯಪ್ರದೇಶ) ಡಾ. ವಿಷ್ಣು, ಎಸ್. ವಾಕಣ್‌ಕರ್ ಆಕಸ್ಮಿಕವಾಗಿ ಭೂಪಾಲ್‌ನಿಂದ ಸುಮಾರು ೧೫ ಕಿ.ಮೀ. ಆಗ್ನೇಯಕ್ಕಿರುವ ಭೀಂಬೆಟ್ಕಾ ಗುಡ್ಡಗಾಡಿನಲ್ಲಿ ಅಪರೂಪದ ಗವಿ ವರ್ಣಚಿತ್ರಗಳನ್ನು ನೋಡಿದರು. ಇದಕ್ಕೂ ಮುಂಚೆ ಅವರು ಫ್ರಾನ್ಸ್-ಸ್ಪೇನ್ ದೇಶಗಳಲ್ಲಿ ಇಂತಹ ವರ್ಣಚಿತ್ರಗಳ ಶೋಧನೆಗಳ ಬಗೆಗೆ ತಿಳಿದ್ದಿದ್ದರು. ಆದ್ದರಿಂದ ಭೀಂಬೆಟ್ಕಾದ ಚಿತ್ರಗಳು ಅವರ ವಿಷಯದಲ್ಲಿ ಆಸಕ್ತಿಯನ್ನು ಕೆರಳಿಸಿದವು. ಆ ಪ್ರದೇಶದಲ್ಲಿ ಕೂಲಂಕುಷವಾಗಿ ಅನ್ವೇಷಣೆ ಮಾಡಿದ ಪರಿಣಾಮವಾಗಿ ಅವರು ಪರೀಕ್ಷಿಸಿದ ಸುಮಾರು ೭೫೪ ಕಲ್ಲಾಸರೆ ೫೦೦ ಇಂತಹ ಚಿತ್ರಗಳಿಂದ ತುಂಬಿದ್ದು ಕಂಡುಬಂದಿತು. ಅನಂತರ ಅದೇ ಗೀಳಿನಿಂದ ಇಂತಹ ಚಿತ್ರಗಳನ್ನು ಅರಸುತ್ತಾ ಭಾರತದ ಪ್ರದೇಶಗಳಲ್ಲಿ ತಿರುಗಾಡಿದರು.

ಕರ್ನಾಟಕದ ಬಾದಾಮಿ ಮತ್ತು ಅದರ ಸಮೀಪದಲ್ಲಿಯ ಕೆಲವು ಮಹತ್ವದ ಚಿತ್ರಗಳನ್ನು ಶೋಧಿಸಿದರು. ಇವುಗಳ ಬಗೆಗೆ ಪೆಂಟೆಡ್ ರಾಕ್‌ಶೆಲ್ಟರ್ಸ್ ಆಫ್ ಇಂಡಿಯಾ ಎಂಬ ಒಂದು ಪಿಎಚ್.ಡಿ. ಮಹಾಪ್ರಬಂಧವನ್ನು ಬರೆದನು. ಈ ಕ್ಷೇತ್ರದಲ್ಲಿಯ ಇವರ ಸೇವೆಯನ್ನು ಗಮನಿಸಿ ಭಾರತ ಸರಕಾರವು "ಪದ್ಮಶ್ರೀ' ಪ್ರಶಸ್ತಿಯನ್ನು ಇವರಿಗೆ ದಯಪಾಲಿಸಿದರು. ಇತ್ತೀಚಿಗೆ ಮಧ್ಯ ಪ್ರದೇಶದಲ್ಲಿಯ ಇತರೆಡೆಗಳಲ್ಲಿ, ಉತ್ತರಪ್ರದೇಶ, ಗುಜರಾತ್, ರಾಜಸ್ಥಾನ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಕರ್ನಾಟಕ ಹಾಗೂ ಕೇರಳ ಪ್ರದೇಶಗಳಲ್ಲಿ ನೂರಾರು ಇಂತಹ ಚಿತ್ರಗಳು ಬೆಳಕಿಗೆ ಬಂದಿವೆ. ಉತ್ತರ ಭಾರತದಲ್ಲಿ ಸುಮಾರು ೫೦೦೦ಕ್ಕೂ ಮಿಕ್ಕಿ ಇಂತಹ ನೆಲೆಗಳನ್ನು ಕಂಡುಹಿಡಿಯಲಾಗಿದೆ.[೨] ಇವುಗಳು ಅಷ್ಟೇ ಅಲ್ಲದೇ ರಾಯಘರ್, ಪಾಚಮಾರಿ, ಹೊಷಂಗಾಬಾದ, ಸಾಗರ್, ರೇವಾ, ಪನ್ನಾ ಮತ್ತು ಛತ್ತರಪುರ, ಕತ್ನಿ ಮತ್ತು ನರಸಿಂಹಪುರ,

ಗ್ವಾಲಿಯರ್, ಚಂಬಲ್ ಕಣಿವೆ, ಮಿರ್ಜಾಪುರ, ಅಹಕೌರ್, ರಾಬರ್ಟ್ಸ್‌ಗಂಜ್, ಮೊರ್ಹನ್, ಬಂದಾ, ಬೈನ್‌ಸೌರ್, ಅಲಹಬಾದ್, ವಾರಣಾಸಿ, ಆಗ್ರಾ, ಬಿಹಾರ್, ಓರಿಸ್ಸಾ, ಕೇರಳ, ಗೋವಾ ಸೇರಿದಂತೆ ದೇಶದ ವಿವಿಧಡೆ ಪ್ರಾಗೈತಿಹಾಸ ಚಿತ್ರಕಲೆಯ ನೆಲೆಗಳಾಗಿವೆ.[೩]

ಅಂತ್ಯ ಹಳೆ ಶಿಲಾಯುಗ (ಸುಮಾರು ಕ್ರಿ.ಪೂ. ೪೦೦೦೦-೧೦೦೦೦) ನೂತನ ಶಿಲಾಯುಗ (ಸು. ಕ್ರಿ.ಪೂ. ೨೦೦೦-೮೦೦) ಹಾಗೂ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿ (ಸು.ಕ್ರಿ.ಪೂ. ೧೨೦೦-೧೦೦) ಜನ ವಾಸ್ತವ್ಯದ ನೆಲೆಗಳ ಉತ್ಖನನಗಳಲ್ಲಿ ಈ ಸಂಸ್ಕೃತಿಗಳ ಅವಶೇಷಗಳೊಡನೆ ಅಪರೂಪವಾಗಿ ಕೊರೆದ ರೇಖಾಚಿತ್ರಗಳುಳ್ಳ ಉತ್ತಮ ಜಾತಿಯ ಕಲ್ಲುತುಂಡು ಅಥವಾ ಆಸ್ಟ್ರಿಚ್ ಪಕ್ಷಿಯ ಮೊಟ್ಟೆ, ಸುಡಾವೆ, ಮಣ್ಣಿನ ದಂತದ, ಎಲುಬಿನ ಗೊಂಬೆಗಳೂ ದೊರೆತಿವೆ. ಅಲಹಾಬಾದ (ಪ್ರಯಾಗ) ಸಮೀಪ ಬೇಲಾನ ನದಿ ಪ್ರದೇಶ, ಅಂತ್ಯ ಹಳೆಶಿಲಾಯುಗದ ಎಲುಬಿನ ಮನುಷ್ಯಾಕೃತಿ (ಸ್ತ್ರೀ) (ಇದು ಮೀನು ಹಿಡಿಯುವ ಎರಡು ಬದಿಗಳಲ್ಲಿ ಹುಲ್ಲುಗಳಿರುವ ಗಾಳವಿರಬಹುದೆಂದು ಅಭಿಪ್ರಾಯವೂ ಇದೆ) ಪಾಟ್ನೆ (ಧುಳೆ ಜಿಲ್ಲೆ, ಮಹಾರಾಷ್ಟ್ರ)ಯ ಇದೇ ಕಾಲದ ಆಸ್ಟ್ರಿಚ್ ಪಕ್ಷಿ ಮೊಟ್ಟೆಯ ಮೇಲಿನ ಗೀರಿನ ರೇಖಾ ಪಟ್ಟಿಕೆ, ಚಂದ್ರಾವತಿ (ರಾಜಸ್ಥಾನ)ಯ ಸೂಕ್ಷ್ಮ ಶಿಲಾಯುಗದ ಸಮನಾಂತರವಾಗಿ ನೀಳ ಚುಕ್ಕೆಗಳನ್ನು ಎಬ್ಬಿಸಿದ ಉತ್ತಮ ಜಾತಿ ಕಲ್ಲಿನ ತಿರುಳಿನ ಮೇಲೆ ಕೊರೆದ ವಜ್ರಾಕೃತಿಯ ರೇಖಾ ಸುರುಳಿ, ಇನಾಂಗಾವ್‌ನಲ್ಲಿ (ಪುಣೆ ಜಿಲ್ಲೆ, ಮಹಾರಾಷ್ಟ್ರ) ಶಿಲಾ-ತಾಮ್ರಯುಗ (ಕ್ರಿ.ಪೂ. ೧೭೦೦-೮೦೦) ನೆಲೆಯ ಅತ್ಯಂತ ಚೆಲುವಾದ ಸುಡಾವೆ ಮಣ್ಣಿನ ಸ್ತ್ರೀ ವಿಗ್ರಹವು ಆದಿ ಇತಿಹಾಸ ಕಾಲದ (ದೇವಿ ವಿಗ್ರಹಕ್ಕೆ ಹೋಲುತ್ತದೆ.) ಮುಖ್ಯವಾಗಿ ಗಮನಾರ್ಹವಾಗಿದೆ.

**ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆ**

ಕರ್ನಾಟಕದಲ್ಲಿ ೧೮೮೦ರ ಸಂದರ್ಭದಲ್ಲಿ ಹ್ಯೂಬರ್ಟ್ ನಾಕ್ಸ್ ಕಪಗಲ್‌ನಲ್ಲಿ ಕುಟ್ಟಿದ ಚಿತ್ರಗಳನ್ನು ಶೋಧಿಸಿದ ನಂತರ ೧೯೩೫ರಲ್ಲಿ ಲಿಯೋನಾರ್ಡ್‌ಮನ್ ಅವರು ಹಿರೇಬೆನಕಲ್ (ಗಂಗಾವತಿ ತಾಲೂಕು, ಕೊಪ್ಪಳ ಜಿಲ್ಲೆ) ಗುಡ್ಡದಲ್ಲಿ ಮೂರು ಗವಿವರ್ಣ ಚಿತ್ರಗಳನ್ನು, ಸುಮಾರು ಅದೇ ಸಮಯದಲ್ಲಿ ಭಿಲ್ಲಮರಾಯನ ಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ಕಂಡುಹಿಡಿದರು.[೪] ಲಿಯೋನಾರ್ಡ್‌ಮನ್ ಅವರ ಶೋಧನೆಯ ನಂತರ ೧೯೪೦ರ ದಶಕದಲ್ಲಿ ಮಸ್ಕಿ, ಕಲ್ಲೂರು, (ರಾಯಚೂರು ತಾಲೂಕು) ಬಳಿಚಕ್ರ (ಯಾದಗಿರಿ ತಾ.ಜಿ.) ಮತ್ತು ಆತನೂರು ಎಂಬಲ್ಲಿ ಹಿಂದಿನ ಹೈದ್ರಾಬಾದ್ ಸಂಸ್ಥಾನದ ಪುರಾತತ್ವ ಸರ್ವೇಕ್ಷಣ ಮತ್ತು ಭೂವಿಜ್ಞಾನ ವಿಭಾಗಗಳು ಕ್ರಮವಾಗಿ ಕುಟ್ಟಿದ ಮತ್ತು ಗವಿವರ್ಣ ಚಿತ್ರಗಳನ್ನು ಶೋಧಿಸಿ ತಮ್ಮ ಶಾಖೆಗಳನ್ನು ವಾರ್ಷಿಕ ವರದಿಗಳಲ್ಲಿ ಪ್ರಕಟಿಸಿವೆ. ಆಗಿನ ಮುಂಬೈ ಸರಕಾರದ ಕನ್ನಡ ಸಂಶೋಧನ ಸಂಸ್ಥೆಯು (೧೯೫೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸೇರಿಸಲ್ಪಟ್ಟಿತು.) ಕುಳ್ಳೊಳ್ಳಿ, (ಜಮಖಂಡಿ ತಾಲೂಕು, ಬಿಜಾಪುರ ಜಿಲ್ಲೆ)ಯಲ್ಲಿಯ ಗೀರಿದ ಕುಟ್ಟಿದ ಚಿತ್ರಗಳನ್ನು ೧೯೫೧ರಲ್ಲಿ

ಪ್ರಕಟಿಸಿತು. ಅಲ್ಲಿನ ದಂಪತಿಗಳು ಪಿಕ್ಲಿಹಾಳ್ (ಲಿಂಗಸೂರು ತಾ. ರಾಯಚೂರು ಜಿಲ್ಲೆ)ದಲ್ಲಿ ತಾವು ಶೋಧಿಸಿದ ಪ್ರಾಚೀನ ನೆಲೆಯ ಉತ್ಖನನ ಕಾಲದಲ್ಲಿ ಇವೆರಡೂ ತರಹದ ಚಿತ್ರಗಳನ್ನು ಕಂಡುಹಿಡಿದು ಅಧ್ಯಯನ ಮಾಡಿದ್ದಾರೆ.[೫]

ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ (ಶಿರಗುಪ್ಪ ತಾಲೂಕು) ಸಂಗನಕಲ್ಲು, ಬೆಳಗಲ್ಲು ಮತ್ತು ಕುರುಗೋಡು (ಬಳ್ಳಾರಿ ತಾಲೂಕು) ಅಪ್ಪಯ್ಯನಹಳ್ಳಿಗಳಲ್ಲಿ ಇಂತಹ ಚಿತ್ರಗಳನ್ನು ಎಂ.ಎಸ್. ನಾಗರಾಜ್‌ರಾವ್ ರು.ಮ., ಷಡಕ್ಷರಯ್ಯ ಮೊದಲಾದವರು ಶೋಧಿಸಿದರು.

ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆಯ ಶೋಧನೆ ಮತ್ತು ಅಧ್ಯಯನ ಕ್ಷೇತ್ರದಲ್ಲಿ ಡಾ. ಅ.ಸುಂದರ ಅವರ ಕೊಡುಗೆ ಅಪೂರ್ವವಾದದ್ದು. ಆ ಬಗೆಗೆ ಇಲ್ಲಿ ವ್ಯವಸ್ಥಿತ ಅಧ್ಯಯನ ನಡೆಸಿದವರಲ್ಲಿ ಅವರೇ ಮೊದಲಿಗರಾಗಿದ್ದಾರೆ. ೧೯೬೮ರಲ್ಲಿ ಡಾ. ಅ.ಸುಂದರ ಅವರು ಲಿಯೋನಾರ್ಡ್ ಮನ್ ಅವರು ಹಿಂದೆ ಹಿರೆಬೆನಕಲ್‌ನಲ್ಲಿ ಶೋಧಿಸಿದ ಚಿತ್ರಗಳ ನೆಲೆಯನ್ನು ಗುರುತಿಸುವ ಸಂದರ್ಭದಲ್ಲಿ ಇನ್ನೂ ಒಂಭತ್ತು ಕಡೆ ಚಿತ್ರಗಳನ್ನು ಶೋಧಿಸಿ ಆ ಬಗೆಗೆ ಲೇಖನ ಪ್ರಕಟಿಸಿದರು. ತದನಂತರ ಅವರು ೧೯೭೪ರಿಂದ ಕರ್ನಾಟಕದ ಹಲವಾರು ಭಾಗಗಳಲ್ಲಿ ಅನ್ವೇಷಣೆ ಕಾರ್ಯವನ್ನು ಕೈಗೊಂಡು ರಾಮದುರ್ಗ, ಬಾದಾಮಿ, ಹೊಸ ಮಹಾಕೂಟ, ಐಹೊಳೆ, ಕೊಪ್ಪಳ ಜಿಲ್ಲೆಯ ಬಿಳೆಬಾವಿ, ನಾರಾಯಣಪೇಟೆ, ಬಂಡಿ ಹರ್ಲಾಪುರ (ಎಲ್ಲವೂ ಕೊಪ್ಪಳ ತಾಲೂಕು) ಮಲ್ಲಾಪುರ, ಆನೆಗುಂದಿ, ತಿರುಮಲಾಪುರ (ಗಂಗಾವತಿ ತಾಲೂಕು) ಮಾನ್ವಿ, ಬೈಲಮರ್ಚೇಡ್, (ಮಾನ್ವಿ ತಾಲೂಕು) ಮುಂತಾದೆಡೆಗಳಲ್ಲಿ ವರ್ಣ ಚಿತ್ರಗಳನ್ನು ಹಾಗೂ ತಾವರೆಗೆರೆ (ಕೊಪ್ಪಳ ಜಿಲ್ಲೆ) ಕುರುಗೋಡು, ಹಳಕುಂದಿ (ಬಳ್ಳಾರಿ ಜಿಲ್ಲೆ), ಬ್ರಹ್ಮಗಿರಿ, ಜಟ್ಟಂಗ ರಾಮೇಶ್ವರ, ಚಿತ್ರದುರ್ಗ, ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆ) ಬೋಳೆ (ಅಂಕೋಲಾ ಹತ್ತಿರ ಉತ್ತರ ಕನ್ನಡ ಜಿಲ್ಲೆ)ಗಳಲ್ಲಿ ಹಾಗೂ ಇತ್ತೀಚೆಗೆ ಹೊಳಲೂರು, ಮುತ್ತನಹಳ್ಳಿ (ಶಿವಮೊಗ್ಗ ತಾಲೂಕು) ಹಿರೆಮಾದಾಪುರ (ಧಾರವಾಡ ಜಿಲ್ಲೆ)ನಲ್ಲಿ ಕುಟ್ಟಿದ ಹಾಗೂ ಗೀರಿದ ಚಿತ್ರಗಳನ್ನು ಶೋಧಿಸಿದ್ದಾರೆ. ಇವುಗಳ ಜೊತೆಗೆ ಶೋಧನವಾದದ್ದನ್ನೆಲ್ಲಾ ಅಧ್ಯಯನ ಮಾಡಿ ಅನೇಕ ಲೇಖನಗಳನ್ನು ಮತ್ತು ಎರಡು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇತ್ತೀಚೆಗೆ ಅವರು ಸಂಪಾದಿಸಿರುವ ಕರ್ನಾಟಕ ಚರಿತ್ರೆ ಸಂ. ೧ರಲ್ಲಿ ಪ್ರಾಗೈತಿಹಾಸ ಕಾಲದ ಸಂಸ್ಕೃತಿ ಹಾಗೂ ಕಲೆಯ ಬಗೆಗೆ ವಿವರ ಪೂರ್ಣವಾಗಿ ವಿವೇಚಿಸಿದ್ದಾರೆ. ಕುರುಗೋಡಿನಲ್ಲಿ ಒಟ್ಟು ೧೫ ನೆಲೆಗಳಿವೆ. ಇಲ್ಲಿಯ ಗವಿಚಿತ್ರಗಳನ್ನು ಮೊದಲಿಗೆ ಡಾ. ಎಂ.ಎಸ್. ಕೃಷ್ಣಮೂರ್ತಿ, ಡಾ. ಅ.ಸುಂದರ, ಡಾ. ಡಬ್ಲ್ಯೂವಿ.ಎಸ್. ನರಸಿಂಹ ಮತ್ತು ನಂತರ ಡಾ. ಶರಣಬಸಪ್ಪ ಕೋಲ್ಕಾರ ಶೋಧಿಸಿ ಹಲವು ಲೇಖನಗಳನ್ನು ಪ್ರಕಟಿಸಿದ್ದಾರೆ. ಚಿತ್ರದುರ್ಗದ ಎಚ್.ಎಲ್. ಶ್ರೀಶೈಲ ಆರಾಧ್ಯರು, ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಯಲ್ಲಿ ಮತ್ತೆ ಸುಮಾರು ೨೫–೩೦ ವರ್ಣಚಿತ್ರಗಳನ್ನು ಕೆಲವು ಬಯಲು ಬಂಡೆ ಚಿತ್ರಗಳನ್ನು ತಮ್ಮ 'ಸಂಶೋಧನೆಯ ಹಾದಿಯಲ್ಲಿ' ಎಂಬ ಹೊತ್ತಿಗೆಯಲ್ಲಿ ಪ್ರಕಟಿಸಿದ್ದಾರೆ.[೬]

ಪ್ರೊ. ಲಕ್ಷ್ಮಣ್ ತೆಲಗಾವಿ, ವಸಂತಶೆಟ್ಟಿ, ಎಚ್.ಆರ್.ರಘುನಾಥ್ ಭಟ್ಟರು, ರು.ಮ. ಷಡಕ್ಷರಯ್ಯ ಸ್ವಿಡ್ಜರ್‌ಲ್ಯಾಂಡಿನ ಈ.ಓ. ಟೆಲ್ನರ್, ಜಿ. ವಿಶ್ವನಾಥ, ಎಂ.ಜಿ. ಮಂಜುನಾಥ ಹೀಗೆ ಅನೇಕರು ತಮ್ಮ ತಮ್ಮ ಸಂಶೋಧನೆ ಕಾರ್ಯದಲ್ಲಿ ಪ್ರಾಗೈತಿಹಾಸ ಕಲೆಯನ್ನು ಗುರುತಿಸಿ ತೋರಿಸಿದ್ದಾರೆ.

ಕರ್ನಾಟಕದಲ್ಲಿ ಸ್ವಲ್ಪಮಟ್ಟಿಗೆ ಚಂದ್ರಾವತಿಯದಕ್ಕೆ ಹೋಲುವ ಸಿದ್ದನ ಕೊಳ್ಳದ ಚರ್ಟ್‌ಕಲ್ಲಿನ ಮೇಲೆ ಕೊರೆದ ಸೂಕ್ಷ್ಮ ಶಿಲಾಯುಗದ ರೇಖಾಕೃತಿ. ಡಾ. ವಿ.ಎಸ್.ವಿ. ಪಾಡಿಗಾರರ ಒಂದು ಮಹತ್ವದ ಶೋಧನೆ. ಕರ್ನಾಟಕದಲ್ಲಿ ಕಂಡುಬರುವ ಪ್ರಾಗೈತಿಹಾಸ ನೆಲೆಯ ಚಿತ್ರಗಳನ್ನು ಸಂಶೋಧಕರು ತಮ್ಮ ತಮ್ಮ ಆಲೋಚನಾ ಕ್ರಮದಲ್ಲಿ ಅಭಿವ್ಯಕ್ತಿಸಿದ್ದಾರೆ. ಅನೇಕ ವಿಷಯಗಳನ್ನು ವೈವಿಧ್ಯಮಯವಾಗಿ ತಿಳಿಸಿದ್ದಾರೆ.

**ಪ್ರಾಗೈತಿಹಾಸಿಕ ಚಿತ್ರಕಲೆಯ ಅಭಿವ್ಯಕ್ತಿ ಕ್ರಮಗಳು:**

೧. ಗವಿವರ್ಣ ಚಿತ್ರಗಳು

೨. ಬಯಲು ಬಂಡೆ ಚಿತ್ರಗಳು

೩. ಸುಡಾವೆ ಮಣ್ಣಿನ ಗೊಂಬೆಗಳು ಮತ್ತು ಮಡಕೆ ಮೇಲೆ ಚಿತ್ರಗಳು

ಗವಿಯೊಳಗೆ ವರ್ಣದಿಂದ ಚಿತ್ರರಚನೆ ಮಾಡಿದರೆ ಬಯಲು ಬಂಡೆಗಳಿಗೆ ರೇಖಾಚಿತ್ರ ರಚನೆಯಾಗಿರುತ್ತವೆ. ಅದರಲ್ಲಿ ಚಿತ್ರರಚನಾ ತಂತ್ರಗಾರಿಕೆಯು ಬೇರೆ.

*. ಪ್ರಾಣಿಗಳ ಕೂದಲುಗಳಿಂದ ತಯಾರಿಸಿದ ಕುಂಚದಿಂದ ದಪ್ಪನೆಯ ಮತ್ತು ತೆಳ್ಳನೆಯ ವರ್ಣರೇಖೆಗಳ ಸೃಷ್ಟಿಗೊಂಡಿವೆ.

* ಚೂಪಾದ ಕಲ್ಲುಗಳಿಂದ ಕುಟ್ಟುವ ಮೂಲಕ ಚಿತ್ರ ರಚನೆಯಾಗಿರುತ್ತವೆ.

* ಕಬ್ಬಿಣದ ಆಯುಧ, ಚೂರುಗಳಿಂದ ಕೊರೆದ ರೇಖಾಚಿತ್ರ

* ಸುಡಾವೆ ಮಣ್ಣಿನ ಗೊಂಬೆಗಳ ಮತ್ತು ಮಡಕೆಯ ಮೇಲೆ ಹೂಸುರುಳಿಗಳ ರೇಖೆ, ವರ್ಣ, ಸಂಯೋಜನೆ ಆಕರ್ಷಕ. ಗವಿಯೊಳಗೆ ಆದಿಮಾನವನ ಚಿತ್ರ ರಚಿಸುವ ಮೂಲ ಉದ್ದೇಶ. ಮಳೆ, ಬಿಸಿಲು, ಗಾಳಿಗೆ ಮೈ ತೆರೆದುಕೊಳ್ಳುವ ಮುನ್ನ ಚಿತ್ರಕಲೆ, ಸದಾ ತಾನು ವಾಸಿಸುವ ನೆಲೆಯನ್ನಾಗಿ ಮಾಡಿಕೊಂಡು ಸಂಭ್ರಮಿಸುತ್ತಿದ್ದ. ರಚಿಸಿದ ಚಿತ್ರಗಳ ಮೂಲಕ ತನ್ನ ಬದುಕಿನ ಪ್ರಗತಿಯನ್ನು ನಿರೀಕ್ಷಿಸುತ್ತಿದ್ದ. ಅಲ್ಲಿ–ಇಲ್ಲಿ ಬಿದ್ದ ಹಸಿರು, ಕೆಂಪು, ಹಳದಿ, ಬಿಳಿ ಮಣ್ಣಿನ ಗಟ್ಟಿಗಳಿಂದ ಬಣ್ಣ ದ್ರವಗಳನ್ನು ಪ್ರಾಣಿಯ ರಕ್ತ ಹಾಗೂ ಹಲವು ಗಿಡದ ಎಲೆ, ಕೊಂಬೆಗಳಿಂದ ಬಣ್ಣವನ್ನು ತಯಾರಿಸಿಕೊಳ್ಳುತ್ತಿದ್ದ. ಗಿಡದ ಚಕ್ಕೆಗಳನ್ನು ಹಲ್ಲಿನಿಂದ ಮತ್ತು ಕಲ್ಲುಗಳಿಂದ ಜಜ್ಜಿ, ಅದೇ ಕುಂಚವನ್ನಾಗಿ ಮಾಡಿಕೊಂಡು ವರ್ಣ ಸಂಯೋಜನೆ ಮಾಡುತ್ತಿದ್ದನು.

ಕಲ್ಲಿನ ತುಕುಡಿ ಮತ್ತು ಕಬ್ಬಿಣದ ಚೂರುಗಳಿಂದ ಕುಟ್ಟುವ, ಗೀರುವ ಚಿತ್ರಗಳನ್ನು ರಚಿಸಿದ್ದಾನೆ. ಅಂದಿನ ಜೀವನದ ಪ್ರಸ್ತುತತೆಗೆ ಅನುಗುಣವಾಗಿ ಚಿತ್ರಗಳು ರಚನೆಗೊಂಡಿವೆ.

**ಯಾದಗಿರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆಯ ನೆಲೆಗಳು:**

ಕರ್ನಾಟಕದ ಮೂವತ್ತನೆಯ ಜಿಲ್ಲೆಯಾದ ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಪ್ರಾಗೈತಿಹಾಸ ಚಿತ್ರನೆಲೆಗಳು ಈ ಕೆಳಗಿನಂತಿವೆ.

೧. ಬಳಿಚಕ್ರ (ಯಾದಗಿರಿ ತಾಲೂಕು)

೨. ವರ್ಕನಳ್ಳಿ ತಾಂಡಾ (ಯಾದಗಿರಿ ತಾಲೂಕು)

೩. ಹಿರೆಹೆಬ್ಬಾಳ (ಸುರಪುರ ತಾಲೂಕು)

೪. ಹುಣಸಗಿ (ಸುರಪುರ ತಾಲೂಕು)

೫. ಹಗರಟಗಿ (ಸುರಪುರ ತಾಲೂಕು)

* **ಬಳಿಚಕ್ರದ ಪ್ರಾಗೈತಿಹಾಸ ಚಿತ್ರಗಳು:** ನೂತನ ಯಾದಗಿರಿ ಜಿಲ್ಲೆ ಮತ್ತು ಅದೇ ತಾಲೂಕಿನೊಳಗೆ ಬರುವಂತ ಬಳಿಚಕ್ರ ಗ್ರಾಮ ಯಾದಗಿರಿ ನಗರದಿಂದ ೨೪ ಕಿ.ಮೀ. ದೂರದಲ್ಲಿದೆ. ಈ ಊರಿಗೆ ಐತಿಹಾಸಿಕವಾಗಿ, ಧಾರ್ಮಿಕವಾಗಿ, ಮಹತ್ವದ ಸ್ಥಳ. ಆ ಊರಿನ ಹೆಸರು ಆಂಗ್ಲ ಭಾಷೆಯಲ್ಲಿ ಬಲಿಚಕ್ರ ಎಂದು. ಮುಂದೆ ಜನರ ಆಡುವ ಮಾತಿನಲ್ಲಿ ಬಳಿಚಕ್ರ ಅಂತ ಬದಲಾವಣೆಗೊಂಡು ಪ್ರಸ್ತುತ ಹಾಗೆಯೆ ಕರೆಯುತ್ತಾರೆ. ಈ ಗ್ರಾಮದಲ್ಲಿ ಮಶೆಮ್ಮ ದೇವಸ್ಥಾನ ಅತ್ಯಂತ ಪುರಾತನ ದೇವಾಲಯ. ಆಕಾಶಕ್ಕೆ ಮುತ್ತಿಡಲು ನಿಂತಿರುವ ಸುತ್ತ ಸಾಲು ಬೆಟ್ಟ ಆ ಬೆಟ್ಟದ ಮೇಲೆ ತಿರುಗಾಡಿದರೆ ಶಿಲಾಶ್ರಯ ನೆಲೆಯ ತಾಣವಿದೆ. ಆದಿ ಕಾಲದ ಮಾನವರ ಸಂಸಾರಿಕ ಬದುಕನ್ನು ಸಾಗಿಸಿದ್ದರು ಎನ್ನುವುದಕ್ಕೆ ಮಡಿಕೆ ಚೂರು. ಆಯುಧದಂತಹ ಕಲ್ಲು ಖಡ್ಗಗಳು ದೊರೆಯುತ್ತವೆ. ಅಂದಿನ ಆದಿಮಾನವರು ವಾಸವಾಗಿರಲು ಅವರಿಗೆ ಬೇಕಾಗುವ ಪ್ರಾಕೃತಿಕ ಒಳ್ಳುಗಳು, ಕಾಳು ಹಸನ ಮಾಡುವ ಮರದ ಆಕಾರ, ಕಲಾತ್ಮಕ ಕಲ್ಲುಗುಂಡುಗಳು, ಬೆಟ್ಟದ ಮೇಲೆ ವಿಶಾಲವಾದ ಆವರಣ, ಅಂದಿನ ಜನ ಜೀವನ ಬದುಕು ಸಾಗಿಸಲು ಅನುಕೂಲವಾಗುವಂತೆ ಬೆಟ್ಟದ ಮೇಲೆ ಜಲಭಾವಿಯು ಲಭ್ಯ. ಅದರ ಆಳವನ್ನು ಅಳೆಯಲು ಕಷ್ಟವು ಕೂಡ. ಅಂತೆಯೇ ಆ ಬೆಟ್ಟವನ್ನು ಬಳಸಿಕೊಂಡು ಹಲವು ರಾಜಮನೆತನದವರು ಆಳ್ವಿಕೆ ನಡೆಸಿದ್ದಾರೆ ಎನ್ನುವುದಕ್ಕೆ ಬೆಟ್ಟದ ಸುತ್ತ ಆವರಿಸಿಕೊಂಡ ಕೋಟೆ ಕಾವಲು ಕಟ್ಟಡ ಇವತ್ತಿಗೂ ಸಾಕ್ಷಿಯಿದೆ. ಅಂತೆಯೇ ಆ ಊರಿನ ಜನಸಾಮಾನ್ಯರು ಊರಲ್ಲಿ ಬಲಿ ಚಕ್ರವರ್ತಿ ಆಳಿದನೆಂದು ಹೇಳುತ್ತಾರೆ. ಅದರ ಕುರುಹುಗಳನ್ನು ಪರಿಶೀಲಿಸಬೇಕಾಗಿದೆ. ಹಾಗೂ ಸುತ್ತಲಿರುವ ಮೂರು ಬೆಟ್ಟಗಳಲ್ಲಿ ಕೋಟೆಯ ಗೋಡೆ ಕಾಣುತ್ತದೆ. ಬಳಿಚಕ್ರದಿಂದ ಮುಂದೆ ಕಾಳಬೆಳಗುಂದಿ ಮಾರ್ಗವಾಗಿ ನಡೆದರೆ

ನಮಗೆ ಎತ್ತರದ ಗುಡ್ಡದ ಮೇಲೆ ಬಿಳಿಬಣ್ಣದ ಗುಡಿ ಕಾಣುತ್ತದೆ. ಈ ದೇವಸ್ಥಾನಕ್ಕೆ ಅನೇಕ ಐತಿಹ್ಯಗಳಿವೆ. ಸಿದ್ದೇಶ್ವರ ದೇವಸ್ಥಾನವೆಂದು ಕರೆಯುತ್ತಾರೆ. ಅಂದಿನ ಕಾಲದಲ್ಲಿ ಬಳಿಚಕ್ರದಲ್ಲಿ ಸಿದ್ಧರು ತಪಸ್ಸು ಮಾಡಿದರಂತೆ, ತಪಸ್ಸಿನ ಫಲವಾಗಿ ಸಿದ್ಧರು ಮೇಧಾವಿ ಶರಣನಾಗುತ್ತಾನೆ. ಇಂತಹ ಶರಣರಲ್ಲಿ ಕೂಡ್ಲೂರು ಬಸವಲಿಂಗ ಶರಣರು ಇವರ ಗುರುದೀಕ್ಷೆ ಪಡೆದರಂತೆ. ಹೀಗೆ ಅನೇಕ ರೀತಿಯ ಮಾತುಗಳನ್ನು ಅಲ್ಲಿನ ಜನರು ನಂಬಿ ಆರಾಧಿಸುತ್ತಾರೆ. ಈ ಸಿದ್ಧೇಶ್ವರ ದೇವಸ್ಥಾನ ಬೆಟ್ಟದ ಮೇಲೆ ಸಾಂಕೇತಿಕವಾಗಿ ಚಿಕ್ಕಗುಡಿಯನ್ನು ಕಟ್ಟಿದ್ದಾರೆ. ಆದರೆ ಸಿದ್ದೇಶ್ವರ ವಾಸವಾಗಿದ್ದು ಕೆಳಗಡೆಯಿರುವ ಗುಹೆಯಲ್ಲಿ, ಗುಹೆಯೊಳಗಿಂದ ಪ್ರವೇಶಿಸಿ ಮೇಲೆ ನಡೆದು ಮತ್ತೊಂದು ಎತ್ತರವಾದ ಮತ್ತು ಮುಂದಕ್ಕೆ ಚಾಚಿಕೊಂಡಿರುವ ಬೃಹತ್ತಾದ ಬಂಡೆಯ ಮೇಲೆ ವರ್ಣಚಿತ್ರಗಳನ್ನು ಕರ್ನಾಟಕದಲ್ಲಿ ಲಿಯೋನಾರ್ಡೊಮನ್ ಅವರ ಶೋಧನೆಯ ನಂತರ ೧೯೪೦ರಲ್ಲಿ ರಾಯಚೂರು ಜಿಲ್ಲೆಯ ಮಸ್ಕಿ, ಕಲ್ಲೂರು ಹಾಗೂ ಈ ಬಳಿಚಕ್ರದ ನೆಲೆಯನ್ನು ಸಂಶೋಧಕ ಅ.ಸುಂದರ ಅವರ ಆಸಕ್ತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಅಂದಿನಿಂದ ಅನೇಕ ಪುಸ್ತಕಗಳಲ್ಲಿ, ಲೇಖನಗಳಲ್ಲಿ ಬಳಿಚಕ್ರದ ಪ್ರಾಗೈತಿಹಾಸ ಕಾಲದ ಕಲೆಯ ಕುರಿತು ವರದಿ ಪ್ರಕಟವಾಗುತ್ತವೆ. ಅಧ್ಯಯನ ಮಾಡುವ ಸಂಶೋಧಕರಿಗೆ, ವಿದ್ಯಾರ್ಥಿಗಳಿಗೆ ಬಳಿಚಕ್ರದ ಪ್ರಾಗೈತಿಹಾಸ ಚಿತ್ರಕಲೆ ಅನುಕೂಲವಾಗುತ್ತದೆ. ನಂತರ ಕಲಾವಿಮರ್ಶಕರಾದ ಕೆ.ವಿ. ಸುಬ್ರಹ್ಮಣ್ಯಂ ಅವರು ಶಿಲಾಶ್ರಯ ಕಲೆಯ ದೃಶ್ಯಧ್ಯಾನ ಎನ್ನುವ ಪುಸ್ತಕದಲ್ಲಿ ಈ ಚಿತ್ರನೆಲೆಯ ಕುರಿತು ದಕ್ಷಿಣ ಭಾರತದ ಗ್ರಾನೈಟ್ ಹಾಗೂ ಮರಳುಗಲ್ಲಿನ ಶಿಲಾಶ್ರಯ ಚಿತ್ರ ನೆಲೆಯಲ್ಲಿ ಬಳಿಚಕ್ರದ ಪ್ರಾಗೈತಿಹಾಸ ಕಲೆಯು ಮಹತ್ವದ್ದಾಗಿದೆ ಎಂದು ಆ ಪಟ್ಟಿಗೆ ಸೇರಿಸಿದ್ದಾರೆ. ಅಂತೆಯೇ ಹಲವಾರು ಈ ನೆಲೆಯ ಕುರಿತು ಲೇಖನಗಳನ್ನು ಪ್ರಕಟಿಸಿದ್ದಾರೆ. ನಾಲ್ಕು ಭಾರಿ ಭೇಟಿಕೊಟ್ಟ ನನಗೆ ವಿಶಿಷ್ಟ ಅನುಭವಗಳನ್ನು ನೀಡಿದೆ ಎಂದು 'ಬಳಿಚಕ್ರದಲ್ಲೊಂದು ಇತಿಹಾಸ ಪೂರ್ವ ಉಬ್ಬುಶಿಲ್ಪ' ಎಂಬ ಲೇಖನದಲ್ಲಿ ಶಿಲಾಶ್ರಯದ ಸೂಕ್ಷ್ಮ ಸಂವೇದನಾನುಭಾವವನ್ನು ಅಭಿವ್ಯಕ್ತಿ ಪಡಿಸಿದ್ದಾರೆ. ಹಾಗೂ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರು ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ಎನ್ನುವ ಕೃತಿಯಲ್ಲಿ ಚಿತ್ರಕಲೆಗೆ ಕಲಬುರ್ಗಿ ಜಿಲ್ಲೆಯ ಕೊಡುಗೆ ಎಂಬ ಲೇಖನದಲ್ಲಿ ಬಳಿಚಕ್ರದ ಪ್ರಾಗೈತಿಹಾಸ ಚಿತ್ರನೆಲೆಯನ್ನು ಸ್ಮರಿಸಿದ್ದಾರೆ. ಮತ್ತು ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ ಎಂಬ ಪುಸ್ತಕದಲ್ಲಿ ಬಸವರಾಜ ಎಸ್. ಕಲೆಗಾರ ಅವರು ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಒಂದು ಅವಲೋಕನ, ಅನ್ನುವ ಲೇಖನದಲ್ಲಿ ಈ ಚಿತ್ರನೆಲೆಯ ಕುರಿತು ಸಂಕ್ಷಿಪ್ತವಾಗಿ ವಿವರಣೆಯನ್ನು ನೀಡಿದ್ದಾರೆ. ಅಂತೆಯೇ ಹಲವು ಬಾರಿ ಪತ್ರಿಕಾ ಲೇಖನಗಳಲ್ಲಿ ಈ ಪ್ರಾಗೈತಿಹಾಸ ಚಿತ್ರಕಲೆಯ ಕುರಿತು ಪರಿಚಯ ಮತ್ತು ಮಹತ್ವವನ್ನು ತಿಳಿಸಿದ್ದಾರೆ. ಹೀಗೆ ಅನೇಕರು ಈ ಸ್ಥಳಕ್ಕೆ ಭೇಟಿ ನೀಡಿ ಅಧ್ಯಯನ ಕೈಗೊಂಡಿದ್ದಾರೆ.

ಬಳಿಚಕ್ರದ ಬೃಹತ್ತಾದ ಬೆಟ್ಟದ ಮೇಲೆ ಮುಂದಕ್ಕೆ ಚಾಚಿಕೊಂಡಿರುವ ಬಂಡೆ ಈ ಚಿತ್ರಗಳಿಗೆ ರಕ್ಷಣೆ ನೀಡುತ್ತದೆ. ಬೃಹತ್ತಾದ ಕ್ಯಾನ್‌ವಾಸ್‌ನಂತಿರುವ ಕಲ್ಲಾಸರೆ ಚಿತ್ರ ರಚನಾಕಾರರಿಗೆ ಸಂಭ್ರಮ

ನೀಡಿದೆ ಎಂದು ಅನಿಸುತ್ತದೆ. ಸುಮಾರು ೧೫ x ೩ ಅಡಿ ಉದ್ದಗಲ ಹೊಂದಿದ ಪಟ್ಟಿಯಂತಿರುವ ಬಂಡೆಯ ಮೇಲೆ ಚಿತ್ರಗಳು ರಚನೆಯಾಗಿವೆ. ಪ್ರಾಣಿ, ಪಕ್ಷಿ, ಮನುಷ್ಯನ ಚಿತ್ರಗಳಿಂದ ಅಲಂಕಾರಿಕವಾಗಿ ಬಂಡೆ ಕಂಗೋಳಿಸುತ್ತದೆ. ಕಂದು ಬಣ್ಣದಲ್ಲಿ ಬರೆದ ದೊಡ್ಡ-ದೊಡ್ಡ ಅಕ್ಷರಗಳಿಂದ ಬರೆದ ಶಾಸನವೊಂದಿದೆ. ಈ ಶಾಸನವು ೭ನೇ ಶತಮಾನದ ಐದು ಅಕ್ಷರಗಳ ಒಂದು ಸಾಲಿನ ಶಾಸನವಿದು. ಇದು ಒಬ್ಬ ವ್ಯಕ್ತಿಯ ಹೆಸರು 'ಶ್ರೀ ಉಗ್ರಮಿಟ್ಟ' ಪ್ರಾಯಶಃ ಬಾದಾಮಿ ಚಾಲುಕ್ಯರ ಆ ಭಾಗದ ಅಧಿಕಾರಿಯೇನೋ ಎಂಬುದನ್ನು ಪರಿಶೀಲಿಸಬೇಕಾಗಿದೆ ಎಂದು ಸಂಶೋಧಕರಾದ ಅ. ಸುಂದರ ಅವರು ಹೇಳುತ್ತಾರೆ.

**ರಚನೆಯಾದ ಚಿತ್ರಗಳು:**

ಬೃಹತ್ತಾದ ಬಂಡೆಗೆ ರಚನೆಯಾದ ಚಿತ್ರಗಳನ್ನು ಗಮನಿಸಿದಾಗ ಪ್ರಥಮವಾಗಿ ಆಕರ್ಷಿಸುವುದು ಗಬ್ಬಾದ ಹಸು, ಜಿಂಕೆ, ಹಂದಿ, ಹಸುವಿನ ಮುಂದೆ ನಿಂತಿರುವ ಮನುಷ್ಯ ಚೌಕಾಕಾರದ ಪಟ್ಟಿಯಂತಿವೆ. ಮೇಕೆ ವ್ಯವಸಾಯಕ್ಕೆ ಬಳಸುವ ಸಾಮಗ್ರಿಗಳು, ಕುರಿಗೆ, ಕುಂಟಿ, ನೇಗಿಲು, ಪಕ್ಷಿಗಳು, ಗೂಬೆ, ನವಿಲು ಕುಣಿಯುತ್ತಿರುವ ಮಾನವನ ಸರಣಿ ಚಿತ್ರಗಳು. ಓಡುತ್ತಿರುವ ಕವಲು ಕೋಡಿನ ಜಿಂಕೆ, ಮೀನು, ನೃತ್ಯ ಭಂಗಿಯ ರೂಪದ ಹಲವು ಮಾನವರು ಹೂವಿನ ಸಾಲು, ಗಿಡ, ಮರ, ಎಲೆಗಳ ವಿನ್ಯಾಸ, ಉದ್ದನೆಯ ಗೆರೆಗಳಿಂದ ಗೋಚರಿಸುವ ಸೃಜನಶೀಲ ಆಕಾರಗಳು, ಎಲೆಗಳ ಮಧ್ಯೆ ಅರಳಿದಂತೆ ಹೂವಿನ ಚೆಲುವು, ಜಾಮಿತಿಕ ಆಕಾರದ ಮಾನವರ ಸರಣಿ ಚಿತ್ರಗಳು, ಬಿಸಿಗಾಳಿಗೆ ಮುದುಡಿಕೊಂಡ ಗಿಡದೆಲೆಯ ಆಕಾರ, ಸ್ಪಷ್ಟವಾಗಿ ಕಾಣದ ಚಿತ್ರಗಳ ವಿವಿಧ ರೂಪ ಪಡೆಯುವಿಕೆ, ಎತ್ತುಗಳು, ಕೊಕ್ಕರೆ, ಕಾಡೆಮ್ಮೆ, ಮಾನವನ ಹಸ್ತಗಳು, ಚಿಕ್ಕ ಚಿಕ್ಕ ಗಾತ್ರದ ಹಲವು ಪ್ರಾಣಿಗಳು ನೋಡಲು ಸುಂದರವಾಗಿ ಮನಸೆಳೆಯುತ್ತವೆ. ಇಡೀ ಚಿತ್ರಪಟ್ಟಿಯ ಸುತ್ತ ಹಲವು ಚಿತ್ರ ರಚನೆಗೊಂಡು ಕ್ಯಾನವಾಸ್‌ಗೆ ಸುಂದರ ಫ್ರೇಮ್‌ನ್ನು ಹಾಕಿ ಪ್ರದರ್ಶನಕ್ಕೆ ಇಟ್ಟಂತಿದೆ.

**ರಚನೆಗೊಂಡ ಚಿತ್ರಗಳು ಎರಡು ರೀತಿಯಾಗಿವೆ.**

೧. ದಪ್ಪ ವರ್ಣ ಸಂಯೋಜನಾ ಚಿತ್ರಗಳು.

೨. ರೇಖಾ ಪ್ರಧಾನ ಕೇಂದ್ರಿತ ವರ್ಣಚಿತ್ರಗಳು.

**೧. ದಪ್ಪ ವರ್ಣ ಸಂಯೋಜನಾ ಚಿತ್ರಗಳು** ಚಿತ್ರಗಳಲ್ಲಿ ಹಲವು ಪ್ರಾಣಿಗಳು ರೂಪುಗೊಂಡು ಅಲಂಕರಿಸುತ್ತಿವೆ. ಅಗಲ ಕುಂಚದ ಸೆಳೆತ ಹಿಡಿದು ನಿಲ್ಲಿಸಿದಂತಿದೆ. ಗಬ್ಬಾದ ಹಸುವಿನ ಹೊಟ್ಟೆ ದಪ್ಪ ವರ್ಣದಿಂದ ರೂಪುಗೊಂಡು ನೋಡುಗನನ್ನು ಆಕರ್ಷಿಸುತ್ತದೆ. ಹಸು ಅಲ್ಲದೇ ಮತ್ತು ಹಲವು ಪ್ರಾಣಿಗಳಿವೆ. ಉದಾ: ಗಬ್ಬಾದ ಹಸುವಿನ ಮುಂದಿರುವ ಮನುಷ್ಯನ ಚಿತ್ರ, ಹಂದಿಯ ಚಿತ್ರ, ಮೀನು ಗೂಬೆ, ಹಸ್ತಗಳು ಸೇರಿದಂತೆ ಹಲವು ಚಿತ್ರಗಳು ದಪ್ಪ ವರ್ಣ ಸಂಯೋಜನೆಯಿಂದ ರೂಪಗೊಂಡಿವೆ.

೨. ರೇಖಾ ಪ್ರಧಾನ ಕೇಂದ್ರಿತ ವರ್ಣಚಿತ್ರಗಳು; ಕಲ್ಲಾಸರೆಗೆ ರಚನೆಗೊಂಡ ವರ್ಣಚಿತ್ರಗಳಲ್ಲಿ ಹೆಚ್ಚು ಚಿತ್ರಗಳು ರೇಖಾ ಪ್ರಧಾನವಾಗಿವೆ. ದಪ್ಪನೆಯ ರೇಖೆಗಳಿಗಿಂತ ತೆಳ್ಳನೆಯ ಕಡ್ಡಿಯಂತ ರೇಖೆಗಳು ಚಿತ್ರಗಳ ಸೌಂದರ್ಯ ಹೆಚ್ಚಿಸಿವೆ. ಕಂದು ಬಣ್ಣದ ರೇಖೆಗಳು ಸಾಮಾನ್ಯರ ಮನಸ್ಸನ್ನು ಸೆಳೆಯುತ್ತವೆ.

**ಹಲವು ಚಿತ್ರಗಳ ವಿಶ್ಲೇಷಣೆ:**

ವರ್ಣದಿಂದ ರಚನೆಯಾದ ಚಿತ್ರಗಳಲ್ಲಿ ಕೆಲವು ವಿಧ–ವಿಧದ ರೀತಿ–ನೀತಿಯನ್ನು ತಿಳಿಸುತ್ತವೆ. ನೈಜತೆಗೆ ಸಾಕ್ಷಿಯಾದ ಚಿತ್ರಗಳಲ್ಲಿ ಸೃಜನಾತ್ಮಕ ಆಕಾರ ಹೊಂದಿ ಮತ್ತಲವು ರೂಪ ಪಡೆದ ವಿಧಾನ ಈ ಚಿತ್ರಗಳಲ್ಲಿವೆ. ಸಂಕೀರ್ಣತೆಯ ಚಿತ್ರದಲ್ಲಿ ಹಲವು ತನ್ನದೇಯಾದ ಮೌಲ್ಯವನ್ನು ಹೊಂದಿವೆ. ಚಿತ್ರ ರಚಿಸುವ ತಂತ್ರಶೈಲಿ ಹಲವು ವಿವಿಧತೆಯನ್ನು ಸಾರುತ್ತವೆ. ಅಂತಹ ಸಾಮೂಹಿಕ ಪ್ರದರ್ಶನದಂತಿರುವ ಪ್ರಾಗೈತಿಹಾಸ ಚಿತ್ರಗಳಲ್ಲಿ ಕೆಲವು ಚಿತ್ರಗಳ ವಿಶ್ಲೇಷಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಗಬ್ಬಾದ ಹಸು:** ಈ ಚಿತ್ರನೆಲೆಗೆ ಪ್ರವೇಶಿಸಿದ ಮೇಲೆ ಅತ್ಯಂತ ಆಕರ್ಷಿಸುವ ಮೊದಲ ವರ್ಣಚಿತ್ರ ಗಬ್ಬಾದ ಹಸುವಿನ ಚಿತ್ರ, ದೇಹದ ಆಕಾರ, ಹೊಟ್ಟೆ, ತನ್ನ ಕರುವಿಗೆ ಜನ್ಮ ನೀಡಲು ಕೆಲವು ಕ್ಷಣಗಳಿಗಾಗಿ ಕಾಯುತ್ತಿರುವಂತಿದೆ. ಹೊಟ್ಟೆ ಬ್ಯಾನಿಯ ತಡೆಯಲಾರದೇ ಮತ್ತಲವು ಪ್ರಾಣಿಗಳ ಕಡೆ ಮುಖ ತಿರುವಿ ಕರೆಯುವಂತಿದೆ. ಹಸುವಿನ ಆಕಾರ, ವಿಕಾರ ರೂಪದಲ್ಲಿದ್ದರೂ ಸಹ ಗಬ್ಬಾದ ಹಸುವಿನ ಲಕ್ಷಣಗಳು ಯಥಾವತ್ತಾಗಿ ತುಂಬಿಕೊಂಡಿವೆ. ಅದರ ಕೊಂಬುಗಳ ಬಾಗುವಿಕೆ ಒಂದಕ್ಕೊಂದು ಅಪ್ಪಿಕೊಳ್ಳಲು ಸಿದ್ಧವಾದಂತಿದೆ. ದೇಹದ ತುಂಬೆಲ್ಲಾ ವಿವಿಧ ಪಟ್ಟಿಕೆಗಳಿಂದ ಹಲವು ಹೂವಿನ ಅಂಕುಡೊಂಕಿನ ಗೆರೆಗಳೊಂದಿಗೆ ಅಲಂಕಾರಿಕವಾಗಿದೆ. ಮೈಗೆ ಅಂಟಿಕೊಂಡ ಜಾಮಿತಿಕ ಆಕಾರದ ಪಟ್ಟಿಯೊಳಗೆ ಕೆಲವು ರೇಖೆಗಳ ಸಮೂಹದಿಂದ ಮತ್ತಲವು ಸೃಜನಾತ್ಮಕ ಆಕಾರ ಪಡೆದುಕೊಂಡಿವೆ. ದೊಡ್ಡದಾಗಿ ಇಳಿದು ಬಿದ್ದ ಹೊಟ್ಟೆಗೆ ತಕ್ಕ ಬಿರುಸಾದ ಕಾಲುಗಳಿಲ್ಲ. ಅದರ ಕಾಲುಗಳು ಕೆಳಗೆ ಬಂದಂತೆ ಸೂಜಿ ಆಕಾರ ರೂಪಗೊಂಡಿವೆ. ಮೊಳಕಾಲು, ತೊಡೆಯ ಬದಿಯಲ್ಲಿ ತುಂಬಿಕೊಂಡ ಮಾಂಸದ ಶಕ್ತಿ ಪಾದದಲ್ಲಿ ಪುಷ್ಟಿ ಇಲ್ಲ. ಆದರೆ ಹಸು ಪ್ರಾಣಿಯ ಸಾಮಾನ್ಯ ಆಕಾರ ನೋಡುಗನಲ್ಲಿ ಗಬ್ಬಾದ ಹಸು ಎಂದು ಗುರುತಿಸಿಕೊಳ್ಳುವ ಸಾಮರ್ಥ್ಯ ಈ ಚಿತ್ರ ಪಡೆದುಕೊಂಡಿದೆ. ದೇಹದ ಹೊರ ಮೈ ಮತ್ತು ಹೊಟ್ಟೆ ತುಂಬಾ ರಚನೆಯಾದ ಚಿತ್ರಗಳನ್ನು ಗಮನಿಸಿದಾಗ ದಪ್ಪ ಹಾಗೂ ತೆಳ್ಳನೆಯ ರೇಖೆಗಳು ಸೃಷ್ಟಿಗೊಂಡಿವೆ.

**ಕವಲು ಕೋಡಿನ ಜಿಂಕೆ:** ಎಲ್ಲಾ ಚಿತ್ರಗಳ ಸಾಲಿನ ಮೇಲ್ಭೈ ಇರುವ ಕವಲು ಕೋಡಿನ ಜಿಂಕೆ ಆಕರ್ಷಿಸುತ್ತದೆ. ಗಬ್ಬಾದ ಹಸುವಿಗಿಂತ ಸ್ವಲ್ಪ ಸಣ್ಣದಿದ್ದರೂ ಸಹ ಅದರ ನೈಜತೆ ಮಾತ್ರ ಹಾಗೆಯೇ ಇದೆ. ತುಂಬಿದ ಮೈ ತೆಳ್ಳನೆಯ ಕತ್ತು, ನೆಲಕ್ಕೆ ಮುಖ ಮಾಡಿ ಹೊರಟ ಭಂಗಿ ಕವಲೊಡೆದ ಕೋಡಿನ ಸೆಳೆತ, ದೇಹದ ತುಂಬ ಹತ್ತಾರು ರೇಖೆಗಳಿಂದ ಚೌಕಾಕಾರ ಪಟ್ಟಿಗಳಿಂದ ಅಲಂಕಾರಿಕವಾಗಿದೆ.

ಕಾಲುಗಳ ಚಲನಶೀಲತೆಯನ್ನು ನೋಡಿದಾಗ ಹಸುವಿನ ದಾಹವನ್ನು ತೀರಿಸಿಕೊಳ್ಳಲು ಹೊರಟಂತೆ ಕಾಣುತ್ತದೆ. ಈ ಚಿತ್ರ ಸಂಪೂರ್ಣ ವರ್ಣ ರೇಖಾಪ್ರಧಾನವಾಗಿದೆ. ರೇಖೆಗಳ ಚಲನ-ವಲನ ಕ್ರಿಯಾಶೀಲತೆಯಿಂದ ಕೂಡಿದೆ. ಆದರೆ ಜಿಂಕೆಯ ಕಾಲುಗಳ ಪಾದ ಕಾಣಿಸುವುದಿಲ್ಲ. ನೆಲದೊಳಗೆ ಅವಿತುಕೊಂಡು ಕಡ್ಡಿಯ ಹಾಗೆ ಕಾಣುತ್ತವೆ. ಅದರ ಸುತ್ತ ರಚನೆಗೊಂಡ ಹಲವು ಚಿತ್ರಗಳು ಈ ಜಿಂಕೆಯಿಂದ ಬೆನ್ನತ್ತಿ ಹೊರಟಂತಿದೆ. ಜಿಂಕೆಯ ರೂಪ ನೈಜತೆಗೆ ಸಾಕ್ಷಿಯಾಗಿದೆ.

**ಹಂದಿಯ ಚಿತ್ರ:** ಹಂದಿಯ ವರ್ಣಚಿತ್ರ, ದಪ್ಪಾದ ವರ್ಣ ಲೇಪನದಿಂದ ರೂಪ ಪಡೆದಿದೆ. ಹಂದಿಯು ಜಿಂಕೆಯಿಂದ ಓಡುತ್ತಿರುವಂತೆ ಕಾಣುತ್ತದೆ. ಅದರ ಹೊಟ್ಟೆ, ಮುಖ, ಕಿವಿ, ನೆಟ್ಟಗೆ ಸೆಟೆದ ಬಾಲ, ದಷ್ಟಪುಷ್ಟವಾಗಿ ದೇಹ ಹೊಂದಿದ ಹಂದಿಯನ್ನು ಬೇಟೆಯಾಡುವ ಸಂದರ್ಭವನ್ನು ಸೂಚಿಸುತ್ತದೆ. ಅದರ ಸುತ್ತ ಮನುಷ್ಯನ ಹಸ್ತಗಳು ರೂಪಗೊಂಡಿವೆ. ಹಲವು ಮಾನವರು ಬೆನ್ನಟ್ಟಿದಂತೆ ಸಾಂಕೇತಿಕವಾಗಿ ಪಟ್ಟಿಕೆಯ ರೂಪದ ಮನುಷ್ಯರ ಚಿತ್ರಗಳು ರಚನೆಯಾಗಿವೆ. ಹಂದಿಯ ಮೈಮೇಲೆ ತ್ರಿದಳ ಹೂವ ರಚನೆಗೊಂಡು ಮತ್ತು ಹಲವು ಅಂಕುಡೊಂಕಿನ ಸರಳ ರೇಖೆಗಳು ಅಲಂಕಾರಿಕವಾಗಿವೆ. ಚಪ್ಪಟ್ಟೆ ಆಕಾರದ ಸಲಕರಣೆಗಳಿಂದ ಬಣ್ಣ ಲೇಪನ ಮಾಡಿದಂತಿದೆ. ಸಮೂಹ ಚಿತ್ರಗಳ ನಡುವೆ ಹಂದಿ ಚಿತ್ರವು ಎದ್ದು ಕಾಣುತ್ತದೆ. ಇಂತಹ ಹಂದಿ ಚಿತ್ರಗಳು ಕಂಡುಬರುವುದನ್ನು ನೋಡಿದರೆ ಬಾದಾಮಿ ಚಾಲುಕ್ಯರ ಕಾಲದ ನೆನಪನ್ನು ಮರುಕಳಿಸುತ್ತದೆ. ಮನುಷ್ಯನ ಹಲವಾರು ಹಸ್ತಗಳ ಕ್ರಿಯಾಶೀಲತೆಯನ್ನು ನೋಡಿದಾಗ ಅಂದಿನ ಆದಿಮಾನವನು ಪ್ರಾಣಿಗಳನ್ನು ಹೇಗೆ ಬೇಟೆಯಾಡುತ್ತಿದ್ದನು ಎಂಬುದು ಪರಿಕಲ್ಪನೆಯಾಗಿ ಕಾಣುತ್ತದೆ.

**ಗೂಬೆಯ ಚಿತ್ರ:** ಬೃಹತ್ತಾದ ಬಂಡೆಗೆ ರಚನೆಯಾದ ಈ ಚಿತ್ರಗಳಲ್ಲಿ ಗೂಬೆಯ ಚಿತ್ರಗಳು ಅಲ್ಲಲ್ಲಿ ರಚನೆಯಾಗಿವೆ. ಬಂಡೆಯ ತಳಹದಿಯಲ್ಲಿ ಮತ್ತೊಂದು ಜಿಂಕೆಯ ತಲೆಯ ಮೇಲೆ ಇರುವುದು. ಹಾಗೆಯೇ ಪಟ್ಟಿಯಾಕಾರ ಮನುಷ್ಯನ ಪಕ್ಕದಲ್ಲೇ ಇನ್ನೊಂದು ಗೂಬೆಯ ಚಿತ್ರವಿದೆ. ಒಂದಕ್ಕೊಂದು ವರ್ಣಲೇಪನ ಕ್ರಿಯೆ ಭಿನ್ನವಾಗಿವೆ. ಜಿಂಕೆಯ ಮೇಲಿರುವ ಗೂಬೆಯ ದೇಹದ ಮೇಲೆ ಮೂರು ತ್ರಿಭುಜ ಆಕಾರದಲ್ಲಿ ಹೂ ದಳಗಳಿವೆ. ಮನುಷ್ಯನ ಪಕ್ಕದಲ್ಲಿರುವ ಗೂಬೆಯ ಚಿತ್ರದಲ್ಲಿ ಕುತ್ತಿಗೆಯ ಭಾಗದಲ್ಲಿ ಎರಡು ರೇಖೆಗಳಿಂದ ಮುಖದ ಸ್ಪಷ್ಟತೆ ತೋರಿಸುತ್ತದೆ. ಕಣ್ಣುಗಳು ಬಣ್ಣಗಳಲ್ಲಿ ಸ್ಪಷ್ಟ ಕಾಣದಿದ್ದರೂ ಕಣ್ಣಿನ ಭಾಗದಲ್ಲಿ ಕಲ್ಲಿನ ನೈಜ ಛಾಯೆಯ ಎರಡು ಚುಕ್ಕೆಗಳಿಂದ ಕಣ್ಣಿನ ನೈಜತೆ ಅರಿವಾಗುತ್ತದೆ. ಗೂಬೆಯ ಕೆಳಗಡೆಯಿರುವ ಜಿಂಕೆ ಓಡುವ ಕ್ರಿಯೆಯಲ್ಲಿದೆ. ದೇಹದ ಆಕಾರ, ರೇಖೆಗಳಿಂದ ಕೂಡಿದೆ. ಒಂದು ರೀತಿಯಲ್ಲಿ ಜಿಂಕೆ ಗೂಬೆಗೆ ಮುತ್ತಿಡುವ ರೀತಿಯಲ್ಲಿ ಕಂಡರೆ ಮತ್ತೊಂದೆಡೆ ಜಿಗಿದು ಕುಪ್ಪಳಿಸುವ ಸಾಂದರ್ಭಿಕ ಸಂಗತಿಗಳನ್ನು ಸಾರುತ್ತದೆ. ಗೂಬೆಯ ವರ್ಣಾಕಾರ ದಪ್ಪದಾಗಿ ರಚನೆಯಾದ ಕಾರಣದಿಂದಾಗಿ ಜಿಂಕೆಯ ಚಿತ್ರರಚನೆ ಬಯಲು ರೂಪಗೊಂಡಂತಿವೆ.

**ಮಾನವನ ಚಿತ್ರಗಳು:** ಬಂಡೆಯ ತುಂಬಾ ರಚನೆಗೊಂಡ ಹಲವು ಪ್ರಾಣಿಗಳ ಜೊತೆಯಲ್ಲಿ ಮನುಷ್ಯರ ಚಿತ್ರಗಳ ರಚನೆಗೊಂಡಿರುವುದು ಕಾಣುತ್ತದೆ. ಮನುಷ್ಯನ ಚಿತ್ರಗಳು ರೂಪಗೊಂಡ ಕ್ರಿಯೆ ಪಟ್ಟಿಯಾಕಾರ, ಜಾಮಿತಿಕ ನಕ್ಷೆಗಳ ಆಕಾರದಲ್ಲಿ ಉದ್ದನೆಯ ಪಟ್ಟಿಯನ್ನು ರಚಿಸಿ ಕಾಲು-ಕೈಗಳನ್ನು ರಚನೆ ಮಾಡಲಾಗಿದೆ. ಮೈಮೇಲೆ ಮೂರು ಹಂತದ ಪಟ್ಟಿಕೆಗಳಿಂದ ವಿವಿಧ ವಿನ್ಯಾಸ ಮಾಡಿದೆ. ದೇಹದ ತುಂಬಾ ಅಲಂಕಾರಿಕ ನಾಲ್ಕೈದು ನೇರ ರೇಖೆಗಳಿಂದ ಮಾನವನ ಚಿತ್ರರಚನೆಯಾಗಿವೆ. ಸರಣಿಯ ಸಾಂಕೇತಿಕ ನೃತ್ಯಭಂಗಿ, ಸಂಭ್ರಮಿಸುವ, ಕೂಗುವ, ಹಲವು ವಿಧಗಳಲ್ಲಿ ಚಿತ್ರಗಳು ಕಾಣುತ್ತವೆ. 'ಉಗ್ರಮಿಟ್ಟ' ಎನ್ನುವ ಹೆಸರಿನ, ಸಾಲಿನ ಕೆಳಗೆ ಇರುವ ಮನುಷ್ಯನ ಚಿತ್ರ ಐದು ನೇರ ರೇಖೆ, ಎರಡು ಮೇಲೆ ಮತ್ತು ಕೆಳ ಮುಖವಾದ ಕವಲು ರೇಖೆಗಳಂತೆ ರಚನೆಯಾಗಿವೆ. ಅಕ್ಷರಗಳ ಕೊನೆ ತುದಿಯ ಒಳಗೆ ಸಿಕ್ಕಿಕೊಂಡಿರುವ ಮನುಷ್ಯನ ರೇಖಾಚಿತ್ರಗಳ ವರ್ಣ ಅಕ್ಷರಗಳಿಗಿಂತ ಸ್ವಲ್ಪ ಗಾಢವಾಗಿ ಕಾಣುತ್ತವೆ. ಅವರವರು ಕಂಡುಕೊಳ್ಳುವ ರೀತಿಯಲ್ಲಿ ಮನುಷ್ಯರ ಚಿತ್ರದ ಆಕಾರ ನಿಲ್ಲುತ್ತವೆ.

* **ಒಟ್ಟಾರೆಯಾಗಿ** ಎತ್ತರದ ಬೆಟ್ಟಕ್ಕೆ ಅವಿತುಕೊಂಡಿರುವ ಈ ಪ್ರಾಗೈತಿಹಾಸ ಚಿತ್ರನೆಲೆ ಕರ್ನಾಟಕದ ಹಲವು ನೆಲೆಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಪ್ರಾಗೈತಿಹಾಸ ಕಾಲದ ಚಿತ್ರಕಲೆಯ ಬೃಹತ್ (ಮ್ಯೂಸಿಯಂ) ಆರ್ಟ್ ಗ್ಯಾಲರಿ ಕಂಡಂತೆ ಕಾಣುತ್ತದೆ. ಅಲ್ಲಲ್ಲಿ ಕಾಣುವ ನೆಲೆಗಳಲ್ಲಿ ಒಂದೆರಡು ಹತ್ತಾರು ಚಿತ್ರಗಳು ರಚನೆಯಾದದ್ದು ಕಂಡರೆ ಈ ನೆಲೆಯಲ್ಲಿ ನೂರಾರು ರೀತಿಯ ಆಕಾರಗಳು ಕಾಣುತ್ತವೆ. ದೃಶ್ಯ ಸೂಕ್ಷ್ಮಜ್ಞನ ಮನದಲ್ಲಿ ಚಿತ್ರಗಳ ವಿಶ್ಲೇಷಣಾತ್ಮಕ ಕೆಲಸ ನಡೆಯುತ್ತದೆ. ಪ್ರಾಣಿ, ಪಕ್ಷಿ, ಸಸ್ಯಗಳು ಮಾನವಾಕೃತಿ ಹೀಗೆ ಹಲವಾರು ಬಗೆಯ ವರ್ಣ ರೇಖಾಚಿತ್ರಗಳು ಕಲಾವಿದನ ಆಂತರಿಕ ಜ್ಞಾನವನ್ನು ಹೆಚ್ಚಿಸುತ್ತವೆ.

**ಚಿತ್ರಗಳ ಲಕ್ಷಣಗಳು:**

೧. ಈ ಚಿತ್ರಗಳನ್ನು ನೋಡಿದಾಗ ಅಂದಿನ ಆದಿಮಾನವನ ಬದುಕಿನ ತಲ್ಲಣಗಳ ಅರಿವು ಮೂಡಿಸುತ್ತದೆ.

೨. ವರ್ಣ ತಯಾರಿಕೆ ಬೇರೆ-ಬೇರೆ ರೀತಿಯ ಮಣ್ಣು ಮತ್ತು ಇಟ್ಟಿಗೆಗಳು ಹಾಗೂ ಕಲ್ಲುಪುಡಿ, ಪ್ರಾಣಿಗಳ ರಕ್ತ ಹಿಂಡಿ, ಸಸ್ಯ ಮೂಲದ ದ್ರವವನ್ನು ಬಳಸಿ ತಯಾರಿಸಿದ ವರ್ಣ ಇದಾಗಿದೆ ಎಂದು ಅನಿಸುತ್ತದೆ.

೩. ಚಿತ್ರರಚನಾ ಕ್ರಿಯೆಯನ್ನು ನೋಡಿದಾಗ ಚಿಕ್ಕ ಗಾತ್ರದ ಚಿತ್ರಗಳನ್ನು ಕರಡು ಚಿತ್ರವನ್ನಾಗಿ ಮಾಡಿಕೊಂಡು ನಂತರ ಮುಂದೆ ಅಂತಹ ಚಿತ್ರಗಳನ್ನು ದೊಡ್ಡ ಗಾತ್ರದಲ್ಲಿ ರಚಿಸಿರುವಿರುವರೆಂದು ಕಾಣುತ್ತದೆ.

೪. ಪ್ರಾಣಿಗಳ ಕೂದಲುಗಳನ್ನು ಕಟ್ಟಿ, ತಮಗೆ ಬೇಕಾಗುವ ಕುಂಚವನ್ನು ತಯಾರಿಸಿಕೊಂಡು ವರ್ಣ ಲೇಪನ ಮಾಡಿದ್ದಾರೆಂದು ಅನಿಸುತ್ತದೆ.

೫. ಅಂದಿನ ಮಾನವನ ವಂಶವೃಕ್ಷ ಬೆಳವಣಿಗೆಯ ಹಂತವನ್ನು ಈ ಚಿತ್ರಗಳಿಂದ ತಿಳಿಯಬಹುದು.

೬. ಆದಿಕಾಲದ ಸಾಂಸ್ಕೃತಿಕ ಬದುಕನ್ನು ಚಿತ್ರರಚನೆಯ ಹಂತದಲ್ಲಿ ಅಭಿವ್ಯಕ್ತಿಗೊಂಡಿದೆ.

೭. ಮನುಷ್ಯನ ಚಿತ್ರಗಳನ್ನು ನೋಡಿದಾಗ ಅವನ ಬೌದ್ಧಿಕ ಸಾಮರ್ಥ್ಯ ಗಟ್ಟಿಗೊಂಡಿಲ್ಲ ಎಂದು ಒಂದು ಹಂತದಲ್ಲಿ ಅನಿಸಿದರೂ ಸಹ ನಂತರ ರಚಿಸಿದ ಹಲವು ಪ್ರಾಣಿಗಳ ಚಿತ್ರಗಳು ಬುದ್ದಿ ವಿಕಾಸನಗೊಂಡ ಕ್ರೀಯೆ ಎಂಬುದು  ತಿಳಿಸುತ್ತದೆ.

೮. ವರ್ಣ ಸಂಯೋಜನೆ ರೂಪಿತವಾದ ಚಿತ್ರನೆಲೆಯಾದರೂ ಸಹ ವರ್ಣ ರೇಖಾತ್ಮಕ ಕೌಶಲ್ಯ ಮೆರೆದಿದೆ.

೯. ಸಮೂಹ ಚಿತ್ರಕಲಾ ಪ್ರದರ್ಶನವೆಂದರೂ ಕೂಡ ಅವುಗಳಲ್ಲಿನ ವಸ್ತು ವಿಷಯ ಅಂದಿನ ಸ್ಥಿತಿ ಗತಿಯನ್ನು ಸಾರುತ್ತದೆ.

೧೦. ಶ್ರೀ ಉಗ್ರಮಿಟ್ಟ ಎಂಬ ಹೆಸರನ್ನು ಹೊಂದಿದ ವ್ಯಕ್ತಿಯಿಂದ ಈ ಚಿತ್ರನಲೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ತದನಂತರ ೭, ೮ನೇ ಶತಮಾನವೆಂದು ಸಂಶೋಧಕ ಅ. ಸುಂದರ ಅವರು ಹೇಳುತ್ತಾರೆ.

**ವರ್ಕನಳ್ಳಿ ತಾಂಡಾದ ಪ್ರಾಗೈತಿಹಾಸಿಕ ಚಿತ್ರಕಲೆ (ಯಾದಗಿರಿ ತಾಲೂಕು)**

ನೂತನ ಯಾದಗಿರಿ ಜಿಲ್ಲೆಯಿಂದ ೧೦ ಕಿ.ಮೀ. ದೂರದಲ್ಲಿರುವ ವರ್ಕನಳ್ಳಿ ತಾಂಡಾ ಇದೆ. ಈ ತಾಂಡಾದ ಕಿಶನ್‌ರಾವ್ ತಂದೆ ಸಕ್ರಪ್ಪ ಎನ್ನುವವರ ಹೊಲದ ಪಕ್ಕದಲ್ಲಿರುವ ಮುಂಡರಗಿ ತಾಂಡಾದ ಅಶೋಕನಗರ ಬನ್ನಪ್ಪ ರಾಠೋಡ ಎಂಬುವವರ ಹೊಲದಲ್ಲಿ ಈ ಪ್ರಾಗೈತಿಹಾಸಿಕ ಚಿತ್ರನೆಲೆ ಇದೆ. ವರ್ಕನಳ್ಳಿ ತಾಂಡಾದಿಂದ ಎರಡು–ಮೂರು ಹೊಲ ದಾಟಬೇಕಷ್ಟೇ, ಬಂಡೆಯ ಮೇಲೆ ಮತ್ತೊಂದು ಹೆಬ್ಬಂಡೆ ಮುಂದಕ್ಕೆ ಚಾಚಿಕೊಂಡಿದೆ. ಚಾಚಿಕೊಂಡ ಬಂಡೆಯ ಮೇಲ್ಛಾವಣಿ ಮತ್ತು ಕೆಳಗಿನ ಗುಂಡಾಕಾರ ಕಲ್ಲಿಗೆ ವರ್ಣಚಿತ್ರಗಳು ರಚನೆಯಾಗಿವೆ. ಈ ನೆಲೆಯ ಕುರಿತು ಯಾವುದೇ ಅಧ್ಯಯನಗಳು ನಡೆದಿಲ್ಲ. ನಡೆದರೂ ಗಂಭೀರ ಚಿಂತನೆಗೆ ಒಳಪಟ್ಟಿರುವುದಿಲ್ಲ. ಈ ನೆಲೆಗೆ ಅಲ್ಲಿನ ಸ್ಥಳೀಯರು ರಕ್ತದ ಗುಂಡು ಎಂದು ಕರೆಯುತ್ತಾರೆ. ಹಳೆ ಕಾಲದ ಚಿತ್ರಗಳೆಂದು ಹೇಳುತ್ತಾರೆ. ಹಾಗೂ ಈ ನೆಲೆಯಲ್ಲಿ ಅನೇಕ ಸಾಧು–ಸಂತರು ನೆಲೆಸಿದ ಕಾರಣ ಒಂದು ಶಕ್ತಿಯ ರೂಪವಾಗಿದೆಯೆಂದು ಹೇಳುವ ನಂಬಿಕೆಯಿದೆ. ಪಕ್ಕದಲ್ಲೇ ಇರುವ ಮೈಲಾಪುರ ಮಲ್ಲಯ್ಯ ಮೊದಲಿಗೆ ಇದೇ ಸ್ಥಳದಲ್ಲಿ ನೆಲೆಸಿದನೆಂದು ಹಲವರು ಹೇಳುತ್ತಾರೆ. ಪಕ್ಕದಲ್ಲೇ ತಾಯಮ್ಮನ ಗುಡಿಯು ಇದೆ. ಹೀಗೆ ಅನೇಕ ನಂಬಿಕೆಗಳಿಂದ ಸುತ್ತಮುತ್ತಲಿನ ಜನರು ದೇವರನ್ನು ಪೂಜಿಸಿ ನಂತರ ಈ ನೆಲೆಗೆ ಭೇಟಿ ನೀಡಿ ಹೋಗುತ್ತಾರೆ. ಈ ನೆಲೆಯ ನೆಲದಲ್ಲಿ ನಿಧಿ ಇದೆ ಎಂಬ ನಂಬಿಕೆಯಿಂದ ಅನೇಕ ಸಾಧುಗಳಿಗೆ ಈ ಗುಂಡಿನ ಹತ್ತಿರ ಬಿಟ್ಟಿರುವುದಿಲ್ಲವೆಂಬುದು ಸ್ಥಳೀಯ ಜನರ ಮಾತಾಗಿದೆ. ಸುತ್ತ ಹಚ್ಚು ಹಸಿರಿನ ಹೊಲಗಳ ಮಧ್ಯೆ ಮುಳ್ಳು ಕಂಟಿಯ ಗುಂಪಿನಲ್ಲಿ ಎರಡು ಕಲ್ಲುಗಳು ಕಾಣುತ್ತವೆ. ಮುಂದಕ್ಕೆ

ಚಾಚಿಕೊಂಡಿರುವ ಹೆಬ್ಬಂಡೆ ತಳ ಸಂಪೂರ್ಣ ವರ್ಣ ಚಿತ್ರಗಳಿಂದ ಅಲಂಕಾರಿಕವಾಗಿದೆ. ಹತ್ತಾರು ಕಿ.ಮೀ. ದೂರದಲ್ಲಿರುವ ಬಳಿಚಕ್ರದ ಪ್ರಾಗೈತಿಹಾಸ ಚಿತ್ರನೆಲೆಗೆ ಈ ನೆಲೆಯನ್ನು ತೌಲನಿಕವಾಗಿ ನೋಡಿದಾಗ ಆ ವರ್ಣಚಿತ್ರಗಳಿಗಿಂತ ವರ್ಕನಳ್ಳಿ ತಾಂಡಾದ ಚಿತ್ರಗಳು ಅತ್ಯಂತ ಆಕರ್ಷಕ ಹೊಳಪು ಹೊಂದಿವೆ. ಕಾರಣ ಬಳಿಚಕ್ರ ಪ್ರಾಗೈತಿಹಾಸ ಚಿತ್ರಗಳು ರಚನೆಯಾದ ತದ ನಂತರ ಈ ನೆಲೆ ರೂಪುಗೊಂಡಿರಬಹುದಲ್ಲ ಎಂದು ಅನಿಸುತ್ತದೆ. ಅಲ್ಲದೇ ವರ್ಕನಳ್ಳಿ ತಾಂಡಾದ ವರ್ಣಚಿತ್ರಗಳು ವಿವಿಧ ಕಾಲಗಳನ್ನು ಸೂಚಿಸುತ್ತವೆ. ಈ ಚಿತ್ರರಚನಾ ವಿಧಾನವನ್ನು ನೋಡಿದರೆ ನಾಗಹರಕೆಯ ರೂಪದಲ್ಲಿ ರಚನೆಯಾದಂತಿವೆ. ನಾಗಮಂಡಲದ ಚಿತ್ರರಚನಾ ಶೈಲಿ ಇಲ್ಲಿ ರೂಪ ಪಡೆದಿವೆ.

**ಬಿಡಿಯಾಗಿ ಕಾಣುವ ಹಲವು ಚಿತ್ರಗಳು :** ಈ ಹೆಬ್ಬಂಡೆಗೆ ರಚನೆಯಾದ ಚಿತ್ರಗಳನ್ನು ಗಮನಿಸಿದಾಗ ಹೆಚ್ಚಾಗಿ ಹಾವಿನ ಚಿತ್ರಗಳು (ನಾಗರಹಾವು) ಬಂಡೆತುಂಬ ಬಿಡಿ-ಬಿಡಿಯಾಗಿ ಸುಳಿ ಸುತ್ತಿಕೊಂಡ ರೀತಿಯ ಹಾವುಗಳು ರಚನೆಯಾಗಿವೆ. ಅಲ್ಲದೆ ಶಿವನ ತ್ರಿಶೂಲ, ಗುಬ್ಬಿ, ನವಿಲು, ಗಿಡಮರಗಳು, ಹೂ, ಎಲೆ, ಬಳ್ಳಿಗಳ ತೊಡಕು, ಗುಂಪಾಗಿ ಕೂಡಿಕೊಂಡ ಚಿತ್ರಗಳು ಒಂದು ದೃಷ್ಟಿಯಿಂದ ನೋಡುಗನಿಗೆ ಹಲವು ರೀತಿಯ ಸೃಜನಾತ್ಮಕ ಕಲ್ಪನಾ ಚಿತ್ರಗಳು ಕಾಣುತ್ತವೆ. ಕೆಂಪು ವರ್ಣದ ದಪ್ಪಳತೆಯ ಚಿತ್ರಗಳು ನೋಡಲು ಆಕರ್ಷಕ. ಶಿವನ ಕೈಯಲ್ಲಿನ ಡಮರು ರೂಪದ ಹಲವು ಚಿತ್ರಗಳು ಭಾಸವಾಗುತ್ತವೆ. ನೇರ, ವಕ್ರ, ಸರಳ, ಸುಂದರ ರೇಖಾವರ್ಣ ಚಿತ್ರಕಲಾ ನೆಲೆಯಾಗಿದೆ.

**ಚಿತ್ರ ಲಕ್ಷಣಗಳು:**

೧. ವರ್ಕನಳ್ಳಿ ತಾಂಡಾದ ಚಿತ್ರನೆಲೆಯಿಂದ ನಾಗಹರಕೆಯ ಸಾಂದರ್ಭಿಕ ಮಹತ್ವವನ್ನು ತಿಳಿಸುತ್ತದೆ.

೨. ವರ್ಣಚಿತ್ರ ರಚನಾ ವಿಧಾನದಲ್ಲಿ ದಪ್ಪ ಮತ್ತು ತೆಳುವಾದ ರೇಖೆಗಳು ರಚನೆಯಾಗಿವೆ.

೩. ಬಳಿಚಕ್ರದ ಪ್ರಾಗೈತಿಹಾಸ ನೆಲೆಗಿಂತ ಭಿನ್ನವಾಗಿ ಕಾಣುತ್ತದೆ. ಅಲ್ಲಿ ಮಾನವ, ಪ್ರಾಣಿ, ಪಕ್ಷಿಗಳ ಸಮೂಹ ಚಿತ್ರಗಳು ರಚನೆಯಾದರೆ ಇಲ್ಲಿ ನಾಗರಹಾವುಗಳ ಮಂಡಲ ಚಿತ್ರ ನೆಲೆ ಇದಾಗಿದೆ.

೪. ಗುಂಪು-ಗುಂಪಾಗಿ ವರ್ಣ ಸಂಯೋಜನಾ ಕ್ರಮದಲ್ಲಿ ಹಾವಿನ ಎಡೆ ಹೆಚ್ಚು ರೂಪಗೊಂಡಿರುತ್ತದೆ.

೫. ಕೆಂಪು ವರ್ಣದ ಚಿತ್ರಗಳು ಅಲ್ಲಲ್ಲಿ ನಶಿಸಿಹೋದಂತಿವೆ. ಆದರೂ ಕೆಲ ಚಿತ್ರಗಳ ಬಣ್ಣ ಹಾಗೆಯೇ ಕಣ್ಣ ಸೆಳೆಯುತ್ತದೆ.

೬. ಈ ಸ್ಥಳ ಸಾಧು-ಸಂತರ ನೆಲೆ ಎಂದು ಹೇಳಿದರೆ ಅಲ್ಲಿ ಶಿವನ ಧ್ಯಾನದ ರೂಪವಾಗಿ ಹಾವಿನ ಸಾಂಕೇತಿಕ ಚಿತ್ರಗಳು, ಡಮರು, ತ್ರಿಶೂಲ ಚಿತ್ರಗಳು ರಚನೆಯಾಗಿರಬಹುದೆಂದು ಅನಿಸುತ್ತದೆ.

೭. ಹೂಬಳ್ಳಿಗಳ ಸುರುಳಿ ಸುತ್ತಿಕೊಂಡು ವಿವಿಧ ವಿನ್ಯಾಸದಿಂದ ಆಕರ್ಷಿಸುವ ಚಿತ್ರ ನೆಲೆ ಇದಾಗಿದೆ.

೮. ಪ್ರಾಣಿಯ ರಕ್ತ ಬೆರೆಸಿ ಹಲವು ಗಿಡಮೂಲಿಕೆಗಳನ್ನು ಕುಟ್ಟಿ ವರ್ಣ ತಯಾರಿಸಿಕೊಂಡಂತಿದೆ.
ಮತ್ತು ನಾಗದೇವತೆಯ ಆರಾಧನಾ ಕೇಂದ್ರವಾಗಿ ಈ ಚಿತ್ರಗಳು ರಚನೆಗೊಂಡಂತಿವೆ.

**೨. ಹಿರೆಹೆಬ್ಬಾಳ (೧೫೬೭)**

ತಾಲೂಕು ಕೇಂದ್ರವಾದ ಸುರಪುರದಿಂದ ನೈರುತ್ಯಕ್ಕೆ ೨೫ ಕಿ.ಮೀ. ದೂರದಲ್ಲಿರುವ ಮತ್ತು ಹುಣಸಗಿ ರಸ್ತೆಯ ಹಿರೇಹಳ್ಳದ ದಂಡೆ ಮೇಲಿರುವ ಈ ಹಿರೆಹೆಬ್ಬಾಳ ಗ್ರಾಮದಲ್ಲಿ ಒಂದು ಮೈಲಿ ದೂರದಲ್ಲಿರುವ ಕತ್ತೆ ಬಂಡೆ ಪ್ರದೇಶದಲ್ಲಿ ಸಂಶೋಧಕ ಡಾ. ಪದ್ದಯ್ಯನವರು ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ಗೂಳಿಗಳನುಳ್ಳ ವರ್ಣಚಿತ್ರಗಳನ್ನು ಪತ್ತೆ ಹಚ್ಚಿದ್ದಾರೆ.[೮]

ಸುರಪುರ ಪ್ರದೇಶದ ಹೆಬ್ಬಾಳ ಬುರುಜು ಮತ್ತು ಇತರೆಡೆ ಆದಿಮಾನವರು ಕೊರೆದು ನಿರ್ಮಿಸಿದ ಚಿತ್ರಗಳು ಕಂಡುಬಂದಿವೆ. ಡಾ. ಎಸ್.ಕೆ. ಅರುಣಿಯವರು ತಮ್ಮ ಇತ್ತೀಚಿನ ಸಂಶೋಧನೆಯಲ್ಲಿ ಈ ಚಿತ್ರಗಳನ್ನು ಕಂಡುಕೊಂಡಿದ್ದಾರೆ.[೯]

ಪ್ರಾಗೈತಿಹಾಸಿಕ ಕಾಲದ ಗುಹಾ ಅಥವಾ ಕಲ್ಲಾಸರೆಯ ಚಿತ್ರಗಳು ನೆರೆಯ ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಅಧಿಕವಾಗಿ ಕಂಡುಬರುತ್ತವೆ. ವಿಭಜಿತ ಯಾದಗಿರಿ ಜಿಲ್ಲೆಯ ಬಳಿಚಕ್ರ ಹಾಗೂ ಸುರಪುರ ಪರಿಸರದ ಹಿರೆಹೆಬ್ಬಾಳ ಪ್ರದೇಶದಲ್ಲಿ ಆದಿಮರು ಚಿತ್ರಿಸಿದ ಚಿತ್ರಗಳು ಕಂಡುಬರುತ್ತವೆ.

ಹಿರೆಹೆಬ್ಬಾಳದಲ್ಲಿ ದೊಡ್ಡ ಬಂಡೆಯ ಮೇಲೆ ಪ್ರಾಣಿಯ ಕೊರೆದ ಚಿತ್ರವಿದ್ದು[೧೦] ಎಂದು ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರು 'ಚಿತ್ರಕಲೆಗೆ ಕಲಬುರ್ಗಿ ಜಿಲ್ಲೆಯ ಕೊಡುಗೆ' ಎನ್ನುವ ಲೇಖನದಲ್ಲಿ ಹೇಳುತ್ತಾರೆ. ಹೀಗೆ ಹಲವರು ಸೂಚಿಸಿದ ನೆಲೆಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಈ ಅಧ್ಯಯನಕ್ಕೆ ಮೂಲಚಿತ್ರಗಳು ದೊರೆಯಲಿಲ್ಲ. ಕಾರಣ ಹಲವು ಪ್ರಕೃತಿ ವಿಕೋಪ ಮತ್ತು ವೈಪರಿತ್ಯದಿಂದಾಗಿ ನಶಿಸಿ ಹೋಗಿರುವ ಸಾಧ್ಯತೆಗಳಿವೆ. ಮತ್ತು ಹಿರೆಹೆಬ್ಬಾಳ ಗ್ರಾಮದ ನಟ್ಟ ನಡುವೆ ಇರುವ ಬುರೂಜ (ಹುಡೆ) ಬಿದ್ದು ಹಾಳಾಗಿದೆ. ಕಲ್ಲು, ಮಣ್ಣಿನ ರಾಶಿಯಲ್ಲಿ ಚಿತ್ರಗಳು ಅಧ್ಯಯನಕ್ಕೆ ಸಿಗಲಿಲ್ಲ. ಹಲವು ಪುಸ್ತಕಗಳ ಮಾಹಿತಿಯಿಂದ ಪ್ರಸ್ತುತ ಪರಿಚಯಾತ್ಮಕ ನೆಲೆಗಳನ್ನು ಗುರುತಿಸಲಾಗಿದೆ.

**ಹುಣಸಗಿ ಮತ್ತು ಹಗರಟಗಿ:**

ಹಿರೆಹೆಬ್ಬಾಳದಲ್ಲಿ ದೊಡ್ಡ ಬಂಡೆಯ ಮೇಲೆ ಪ್ರಾಣಿಯ ಕೊರೆದ ಚಿತ್ರವಿದ್ದು, ಇಂಥದೇ ಹತ್ತಿರವಿರುವ ಬೆಟ್ಟವೊಂದರ ಬಂಡೆಯ ಮೇಲಿದೆ.[೧೧] ಅಲ್ಲದೇ ಹಗರಟಗಿ ಪರಿಸರದಲ್ಲಿ ಪ್ರಾಗೈತಿಹಾಸ ಚಿತ್ರಕಲೆ ರೂಪಿಸಿದ್ದು ಕಂಡುಬರುತ್ತದೆ. ರಾಜನ ಕೋಳೂರು, ಜೇವರ್ಗಿ ತಾಲೂಕಿನ ಅಂದೋಲಾ ಸೇರಿದಂತೆ ಹಲವು ಸ್ಥಳಗಳು ಆದಿಶಿಲಾಯುಗ, ಮಧ್ಯಶಿಲಾಯುಗ, ನೂತನಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತಿವೆ.[೧೨]

## ವಿವಿಧ ನೆಲೆಗಳ ತೌಲನಿಕ ವಿಶ್ಲೇಷಣೆ

* ಬಳಿಚಕ್ರದ ಪ್ರಾಗೈತಿಹಾಸ ಚಿತ್ರನೆಲೆಯಲ್ಲಿ ಇರುವ ಹಂದಿ ಚಿತ್ರ ಅದರ ನೈಜತೆಗೆ ಸಾಕ್ಷಿಯಾಗಿದ್ದರೆ ಬಾಗಲಕೋಟ ಜಿಲ್ಲೆಯ ಬಾದಾಮಿ (ಹಿರೇಗುಡ್ಡ) ದಲ್ಲಿರುವ ಹಂದಿ ಚಿತ್ರಗಳು ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ. ಕಾರಣ ಬಾದಾಮಿ (ಹಿರೇಗುಡ್ಡದ ಹಂದಿಚಿತ್ರದಲ್ಲಿ ಹಂದಿಯು ಬೆನ್ನಮೇಲೆ ನೆಟ್ಟಗೆ ನಿಗುರಿದ (ಸೆಡೆದ) ಕೂದಲುಗಳು ಹೊಂದಿವೆ. ಹೆಚ್ಚು ರೇಖೆಗಳಿಂದಲೇ ರಚನೆಗೊಂಡರೆ) ಬಳಿಚಕ್ರದ ಚಿತ್ರಗಳಲ್ಲಿ ಗಾಢವಾದ ಬಣ್ಣಲೇಪನ ಹಂದಿ ಮೈತುಂಬ ಸವರಿಕೊಂಡಂತಿದೆ. ಬಳಿಚಕ್ರದ ಚಿತ್ರಗಳನ್ನು ನೋಡಿದಾಗ ಬಾದಾಮಿ ಚಿತ್ರನೆಲೆ ನೆನಪಾಗಿ ಪೂರಕವಾದಂತೆ ಕಂಡರೂ ಸಹ ಚಿತ್ರ ರಚನಾ ಶೈಲಿ, ತಂತ್ರ ಭಿನ್ನವಾಗಿದೆ.

* ಮಲ್ಲಾಪುರದ ಬೃಹತ್ ಯುಗದ ಮನುಷ್ಯನ ಚಿತ್ರಗಳಲ್ಲಿ ಉಬ್ಬಿದ ದೇಹಕ್ಕೆ ದುಂಡಾದ ಮೈವಳಿಕೆ, ದೇಹದ ತುಂಬ ರೇಖೆಗಳಿಂದ ಅಲಂಕಾರಗೊಂಡರೆ ಬಳಿಚಕ್ರದ ಪ್ರಾಗೈತಿಹಾಸ ನೆಲೆಯ ಮನುಷ್ಯನ ಚಿತ್ರಗಳು ಜಾಮಿತಿಕ ಆಕಾರ ಹೊಂದಿ (ಚಪ್ಪಟೆ) ಚೌಕ, ಲಂಬ ಪಟ್ಟಿಯಲ್ಲಿ ಮಾನವನ ಚಿತ್ರ ರಚನೆಗೊಂಡಿವೆ.[೧೩]

* ಬೇರೆ ನೆಲೆಗಳಲ್ಲಿ ಗೂಳಿಚಿತ್ರಗಳು ಕಂಡುಬರುತ್ತವೆ ಮತ್ತು ಕುಟ್ಟಿದ, ಕೊರೆದ ಚಿತ್ರಗಳು ಕಾಣಿಸಿವೆ. ಆದರೆ ಯಾದಗಿರಿ ಪರಿಸರದ ಬಳಿಚಕ್ರ ಹಾಗೂ ವರ್ಕನಳ್ಳಿ ತಾಂಡಾದ ನೆಲೆಗಳಲ್ಲಿ ಗೂಳಿ ಮತ್ತು ಕುಟ್ಟಿದ, ಗೀರಿದ ಚಿತ್ರಗಳು ಕಂಡುಬರುವುದಿಲ್ಲ.

* ಪಟ್ಟದಕಲ್ಲು ಹತ್ತಿರವಿರುವ ಅರೆಗುಡ್ಡದಲ್ಲಿರುವ ಜಿಂಕೆಯ ಚಿತ್ರ ಮೈಮುದುಡಿಕೊಂಡು ನಿಂತಂತೆ ಕಂಡರೆ ಬಳಿಚಕ್ರದಲ್ಲಿ ರಚನೆಯಾಗಿರುವ ಜಿಂಕೆ ಚಿತ್ರ ಕ್ರಿಯಾಶೀಲತೆಯಿಂದ ಕೂಡಿವೆ.

* ಚಿತ್ರದುರ್ಗ ಪ್ರದೇಶದಲ್ಲಿ ಕಲ್ಲಿನ ಮೇಲೆ ಕುಟ್ಟಿರುವ ನಾಗಮಂಡಲ ರೂಪದ ಚಿತ್ರಗಳನ್ನು ನೋಡಿದರೆ ವರ್ಕನಳ್ಳಿ ತಾಂಡಾದ ವರ್ಣಚಿತ್ರಕಲೆ ಸಮ-ಸಮ ಎಂದು ಅನಿಸುತ್ತದೆ. ಮತ್ತು ಚಿತ್ರದುರ್ಗ ಪರಿಸರದ ಕುಟ್ಟು ಚಿತ್ರಗಳಂತೆ ಬಳಿಚಕ್ರದ ಮತ್ತೊಂದು ಬೆಟ್ಟದ ಮೇಲೆ ಕುಟ್ಟಿದ ಮಂಡಲ ಚಿತ್ರದ ರೇಖಾವಿನ್ಯಾಸವಿದೆ. ಇವೆರಡು ಒಂದೇ ಎಂಬ ನಂಬಿಕೆ ಕಟ್ಟಬಹುದು.

* ಹಿರೆಹೆಬ್ಬಾಳ, ಹಗರಟಗಿ, ಹುಣಸಗಿ ಪರಿಸರದ ಪ್ರಾಗೈತಿಹಾಸ ಚಿತ್ರನೆಲೆ ಚಿತ್ರಗಳನ್ನು ಗಮನಿಸಿದಾಗ ಹಲವಾರು ನೆಲೆಗಳಿಗೆ ಪೂರಕ ಮತ್ತು ವ್ಯತ್ಯಾಸ ಕಂಡುಬಂದರೂ ಅಂದಿನ ಅಭಿವ್ಯಕ್ತಿ ಕ್ರಮದಲ್ಲಿ ವಿಷಯಾನುಸಾರ ಬೇರೆ ಬೇರೆ ಕಾಲ ನಿರ್ಣಯಗಳು ಅವರವರು ಊಹಿಸಿಕೊಂಡ ಕಾಲಗಳು ಎಂದು ಹೇಳಬಹುದು.ಆದರೆ ಚಿತ್ರಗಳನ್ನು ನೋಡಿದಾಗ ತಟ್ಟನೆ ನೆನಪಾಗುವುದು ಆದಿಮ ಜನಾಂಗದ ಬದುಕಿನ ಚಹರೆಗಳು.

**ಟಿಪ್ಪಣಿಗಳು:**

೧. ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಲೇಖಕರು: ಅ.ಸುಂದರ, ಪು. ೫, ೬, ೭, ೧೯೯೪.

೨. ಅದೇ, ನೋಡಿ, ಪು. ೮-೯.

೩. ಅದೇ, ನೋಡಿ, ಪು. ೧೦.

೪. ಶಿಲಾಯುಗದ ಗವಿಚಿತ್ರಗಳು, ಲೇಖಕರು: ಡಾ. ಶರಣಬಸಪ್ಪ ಕೋಲ್ಕಾರ, ಪು.೨೫, ೨೦೧೦,

೫. ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಲೇಖಕರು: ಅ.ಸುಂದರ, ಪು. ೧೧, ೧೯೯೪.

೬. ಶಿಲಾಯುಗದ ಗವಿಚಿತ್ರಗಳು, ಲೇಖಕರು: ಡಾ. ಶರಣಬಸಪ್ಪ ಕೋಲ್ಕಾರ, ಪು.೨೫-೨೬, ೨೦೧೦.

೭. ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಲೇಖಕರು: ಅ.ಸುಂದರ, ಪು. ೧೨, ೧೯೯೪.

೮. ಗುಲಬರ್ಗಾ ಜಿಲ್ಲಾ ಗೆಜೆಟಿಯರ್.

೯. ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಪು. ೧೩, ೨೦೦೯.

೧೦. ಕಲಬುರ್ಗಿ ಜಿಲ್ಲಾ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ, ಸಂಪಾದಕರು: ವೀರಭದ್ರ ಸಿಂಪಿ, ಡಾ. ಇಂದುಮತಿ ಪಾಟೀಲ, ಡಾ. ಎಂ.ಎಸ್. ಸಿರವಾಳ, ಪು. ೨೬೭, ೨೦೧೧.

೧೧, ಅದೇ, ನೋಡಿ, ಪು. ೨೬೭.

೧೨. ಅದೇ ನೋಡಿ, ಪು. ೩೮.

೧೩. ಶಿಲಾಶ್ರಯ ಕಲೆಯ ದೃಶ್ಯಧ್ಯಾನ, ಲೇ: ಕೆ.ವಿ. ಸುಬ್ರಹ್ಮಣ್ಯಂ, ಪು. ೨೮, ೨೦೧೧.



ಗಬ್ಬದ ಹಸುವಿನ ಮುಂದೆ ಮಾನವ



ಹಂದಿ ಮತ್ತು ಮಾನವನ ಹಸ್ತ



ಕಾಡೆಮ್ಮೆ ಮತ್ತು ಮಾನವನ ಹಸ್ತ



ಉಗ್ರಮಿಟ್ಟ ಶಾಸನ



ಕಾಡು ಹಂದಿಯ ಚಿತ್ರ



ಮೀನು ಮತ್ತು ವಿವಿಧ
ವಿನ್ಯಾಸದ ಚಿತ್ರ

# ಬಳಚಕ್ರದ ಪ್ರಾಗೈತಿಹಾಸಿಕ ಚಿತ್ರಗಳು



ಆಕಳನ ಚಿತ್ರ



ಮಾನವನ ಚಿತ್ರ



ಸಮೂಹ ಚಿತ್ರ ಮತ್ತು
ಸಂಶೋಧಕರು

# ವರ್ಕನಹಳ್ಳಿ ತಾಂಡಾದ ಪ್ರಾಗೈತಿಹಾಸಿಕ ಚಿತ್ರಗಳು







ನಾಗಹರಕೆ ಸಂಬಂಧಿಸಿದ ಪ್ರಾಗೈತಿಹಾಸಿಕ ಚಿತ್ರಗಳನ್ನು ಹೊಂದಿದ ನೆಲೆ



ನಾಗಹರಕೆ ಸಂಬಂಧಿಸಿದ
ಪ್ರಾಗೈತಿಹಾಸಿಕ ಚಿತ್ರಗಳು





## ಅಧ್ಯಾಯ ೪

# ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆ

ಜನಪದ ಚಿತ್ರಕಲೆಯ ಪ್ರಾಚೀನತೆಯನ್ನು ನೋಡುತ್ತ ಹೊದಂತೆಲ್ಲ ಆದಿಮಾನವನು ತನ್ನ ಸಾಂಸ್ಕೃತಿಕ ಬದುಕಿನ ವಿವಿಧ ಆಯಾಮಗಳನ್ನು ಚಿತ್ರಗಳ ಮೂಲಕ ಅಭಿವ್ಯಕ್ತಿಸಿದ್ದು, ಭಾತರದಾದ್ಯಂತ ಅನೇಕ ಗುಹೆ ಮತ್ತು ಕಲ್ಲಾಸರೆಗಳಲ್ಲಿ ಕಂಡುಬರುತ್ತವೆ. ಆದಿ ಮಾನವನ ಮೊದಲ ಮಾತು ಚಿತ್ರವೆಂದು ಹೇಳಬಹುದು. ಚಿತ್ರ ರಚನೆಯ ಮೂಲಕ ತನ್ನೊಳಗಿನ ಭಾವನೆಗಳನ್ನು ಹಂಚಿಕೊಂಡಿದ್ದಾನೆ. ಆ ಚಿತ್ರಗಳನ್ನು ನೋಡಿದಾಗ ಅವನ ಬದುಕಿದ ರೀತಿ ನೀತಿಯನ್ನು ಅರಿಯಬಹುದು. ಮಾನವನು ಹುಟ್ಟು ಮತ್ತು ಸಾವಿನ ಮಧ್ಯೆ ಚಿತ್ರಕಲೆ ಗಾಳಿ, ನೀರು, ಆಹಾರದಷ್ಟೇ ಪ್ರಮುಖವಾದದ್ದು, ಅಂತೆಯೇ ಚಿತ್ರಕಲೆಯ ಕುರಿತು ಪ್ರಾಚೀನರು ಮಹತ್ವದ ದಾಖಲೆಗಳನ್ನು ನೀಡಿದ್ದು ಮರೆಯುವಂತಿಲ್ಲ. ಅರವತ್ತು ನಾಲ್ಕು ಕಲೆಗಳಲ್ಲಿ ಚಿತ್ರಕಲೆ ಒಂದು ಪ್ರಮುಖ ಕಲೆಯಾಗಿದೆ. ಪ್ರಾಚೀನ ಕಾವ್ಯ, ಪುರಾಣಗಳಲ್ಲಿ ಚಿತ್ರಕಲೆಯು ಕುರಿತು ಬೇರೆ ಬೇರೆ ಹೆಸರಿನಿಂದ ಕರೆದಿರುವುದು ಕಂಡುಬರುತ್ತದೆ.

ಚಿತ್ರಕಲೆಯನ್ನು ಕಲ್ಯಾಣ ಚಾಲುಕ್ಯ ಮೂರನೇಯ ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿ ಮತ್ತು ವಾತ್ಸಾಯನ ಕಾಮಸೂತ್ರ 'ಆಲೇಖ್ಯ' ಕಲೆ ಎಂದು ಶಿವತತ್ವ ರತ್ನಾಕರ 'ಚಿತ್ರರೋಹಕ್ರೀಯೆ ಎಂದೂ ಹೆಸರಿಸಿವೆ. ಕಾಮಸೂತ್ರದ ವ್ಯಾಖ್ಯಾನಕಾರ ಯಶೋಧರನು ಚಿತ್ರವಿಧಿ' ಎಂದು ಕರೆದರೆ ಕ್ರಿ.ಶ.೧೧೧೬ರ ಶಾಸನವೊಂದರಲ್ಲಿ 'ಚಿತ್ರಕರ್ಮ'ವೆಂದು ಉಲ್ಲೇಖವಿದೆ. ರಾಷ್ಟ್ರಕೂಟರೊಟ್ಟಿಗೆ, ತ್ರೈತೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಯನ್ನು 'ಚಿತ್ರವೆಡಂಗ'ನೆಂದು ಶಾಸನಗಳು ವರ್ಣಿಸುತ್ತವೆ. ದಕ್ಷಿಣದ ಬೆಳ್ಗೊಳದಲ್ಲಿ ಉತ್ತರದ ಕೊಪ್ಪಳದಲ್ಲಿ ಬಹು ಚಿತ್ರಭಿತ್ತಿಯಂ ನೋಡಿದರಂ ಮನಂಗೊಳಿಸುವ ಬಸದಿಗಳನ್ನು ಕಟ್ಟಿಸಿದಂತೆ ಶಾಸನಗಳು ಹೇಳುತ್ತವೆ. ಹಬ್ಬ, ಹುಣ್ಣಿಮೆಗಳಲ್ಲಿ ಮೆನಯ ಗೋಡೆಗಳನ್ನು ಸುಣ್ಣ, ಬಣ್ಣ, ಕಾವಿಗಳಿಂದ ಈಗಲೂ ಅಲಂಕರಿಸುತ್ತಾರೆ.[೧]

ಗ್ರಾಮೀಣ ಪ್ರದೇಶದ ಜನರು ತಮ್ಮ ಅನುಭವದ ಹಿನ್ನೆಲೆಯಾಗಿ ತಮಗೆ ಸಿಕ್ಕ ಕಾಲಾವಧಿಯಲ್ಲಿ ತನ್ನಾಲೋಚನೆಯಂತೆ ಚಿತ್ರಿಸುವ ವಿಧಾನ ಹಬ್ಬ ಹರಿದಿನಗಳಲ್ಲಿ ತಮಗೆ ಇಷ್ಟವಾದಂತೇ ಅಂದ ಚೆಂದ ಕಂಡಂತೆ ರಚಿಸಿಕೊಂಡಿರುವ ಚಿತ್ರಕಲೆಯೇ ಜನಪದ ಚಿತ್ರಕಲೆ ಎಂದು ಕರೆಯಲಾಗಿದೆ. ಜನಪದರ ಸಾಂಸ್ಕೃತಿಕ ಸಮಯದಲ್ಲಿ ಹುಟ್ಟಿಕೊಂಡ ಚಿತ್ರಗಳು ಜನಪದ ಚಿತ್ರಕಲೆಯ ವಿಧಾನವಾಗಿದೆ. ದೇಶಿ ವಿದೇಶಿ ಎಂಬ ಮಾತುಗಳು ಗ್ರಾಮೀಣ ಮನುಷ್ಯನನ್ನು ಕುರಿತು ಬಳಸಿದ ಮಾತುಗಳು ಅಂಥ 'ದೇಶಿ' ಚಿತ್ರಗಳು ಜನಪದ ಚಿತ್ರಗಳೂ ನಾಗರೀಕ ವರ್ಗದವರ ಪ್ರಮಾಣ ಬದ್ಧ, ಲಕ್ಷಣಯುಕ್ತ ಚಿತ್ರಕಲೆ ಶಿಷ್ಟಪದ ಚಿತ್ರಕಲೆಯಾಗುತ್ತದೆ.[೨] ಹೀಗೆ ಜನಪದ ಚಿತ್ರಕಲೆಯಲ್ಲೂ ಹಲವು ವಿಧಾನಗಳನ್ನು ನೋಡಬಹುದು.

ಜನಪದ ಚಿತ್ರಕಲೆಯಲ್ಲಿ ಪ್ರಾಥಮಿಕ ವರ್ಣಗಳೆಂದು ಹೆಸರಾದ ನೀಲಿ, ಕೆಂಪು, ಹಳದಿ ವರ್ಣವಲ್ಲದೆ ಕಪ್ಪು, ಬಿಳೀವರ್ಣಗಳ ಬಳಕೆಯಲ್ಲೂ ಅಧಿಕವಾಗಿರುತ್ತದೆ. ಶಿಷ್ಟಪದ ಚಿತ್ರಕಲೆಯಲ್ಲಿ ಸಂದರ್ಭಕ್ಕೆ ಅನುಗುಣವಾಗಿ ಪ್ರಾಥಮಿಕ ವರ್ಣಗಳ ಸಮ್ಮಿಶ್ರ ಬಣ್ಣಗಳಾದ ಜಾಂಬಳಿ, ಕೇಸರಿ ಹಸಿರೆಂಬ ದ್ವಿತೀಯ ದರ್ಜೆದ ವರ್ಣಗಳನ್ನೂ ಕೆಲವು ಸಲ ಕಂದುಗೆಂಪು ಇಪ್ಪೆ ಎಲೆ ಬಣ್ಣ, ಪಾಡೀ ಬಣ್ಣ ಮುಂತಾದ ಸಮ್ಮೀಶ್ರಣದ ತೃತೀಯ ದರ್ಜೆಯ ಬಣ್ಣಗಳನ್ನು ಹೆಚ್ಚಾಗಿ ಬಳಸಲಾಗಿದೆ.[೩]

ಯಾದಗಿರಿ ಜಿಲ್ಲೆಯು ಜನಪದ ಚಿತ್ರಕಲೆಯನ್ನು ಅವಲೋಕನ ಮಾಡಿದಾಗ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಕಂಡುಬರುವ ಜನಪದ ಚಿತ್ರಕಲೆಯ ಅಂಶಗಳಂತೆ ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆಯು ಅಂಶಗಳು ಅಷ್ಟೇ ಪ್ರಮುಖವಾದುದ್ದು, ಆದರೆ ಅಭಿವ್ಯಕ್ತಿಗೊಳ್ಳುವ ಕ್ರೀಯೆ ಬೇರೆ ಬೇರೆ ಆಗಿರಬಹುದು. ಆಚರಣೆ ಕ್ರಮಗಳ ಅನೇಕ ವಿಧಾನಗಳಿರಬಹುದು. ಮೂಲ ಅಭಿವ್ಯಕ್ತಿಗೊಂಡ ಕ್ರೀಯೆ ಅದು ಜನಪದ ಚಿತ್ರಕಲೆಯೇ ಆಗಿರುತ್ತದೆ. ಯಾದಗಿರಿ ಸುರಪುರ ಶಹಾಪುರ, ಮೂರು ತಾಲೂಕಗಳನ್ನು ಹೊಂದಿದ ಈ ಯಾದಗಿರಿ ಜಿಲ್ಲೆಯಲ್ಲಿ ಹಲವು ಆಚರಣೆ ಹಬ್ಬ ಹರಿದಿನಗಳಲ್ಲಿ ಬಿಡುವಿನ ವೇಳೆ ದುಡಿಯುವ ಸಂದರ್ಭದಲ್ಲಿ ಹೀಗೆ ಅನೇಕ ಸಂದರ್ಭಗಳಲ್ಲಿ ಜನಸಾಮಾನ್ಯರು ಬಿಡಿಸಿದ ಜನಪದ ಚಿತ್ರಕಲೆಯ ಪ್ರಕಾರ ಶೈಲಿ ತಂತ್ರಗಾರಿಕೆಯನ್ನು ಕುರಿತು ಈ ಕೆಳಗಿನಂತೆ ವಿವರಿಸಲಾಗಿದೆ.

* ಯಾದಗಿರಿ ಜಿಲ್ಲೆಯಲ್ಲಿ ಪ್ರಮುಖವಾಗಿ ಕಂಡುಬರುವ ಜನಪದ ಚಿತ್ರಕಲೆಯ ಅಭಿವ್ಯಕ್ತಿ ಬಯಲಾಟದ ಮುಖವರ್ಣಿಕೆ ಕಲೆ, ಮದರಂಗಿ, ಲಂಬಾಣಿ ಚಿತ್ರಕಲೆ ಕೌದಿ ಚಿತ್ರಕಲೆ ಹೀಗೆ ಹಲವಾರು ಪ್ರಕಾರಗಳಲ್ಲಿ ಕಂಡುಬರುತ್ತದೆ. ಅವುಗಳಲ್ಲಿ (ಕೆಲವು ವಿಶ್ಲೇಷಣೆ) ಕೆಲವನ್ನು ಮಾತ್ರ ವಿಶ್ಲೇಷಿಸಲಾಗಿದೆ.

* **ಬಯಲಾಟದ ಮುಖವರ್ಣಿಕೆ ಕಲೆ:** ಯಾದಗಿರಿ ಜಿಲ್ಲೆಯ ಹಲವಾರು ಗ್ರಾಮಗಳಲ್ಲಿ ಬಯಲಾಟವನ್ನು ಆಡುತ್ತಾರೆ. ಬಯಲಾಟವನ್ನು ಆಡುವ ಮುನ್ನ ಪಾತ್ರಕ್ಕೆ ಬೇಕಾಗುವ ಅಲಂಕಾರಿಕ ಸಾಮಾಗ್ರಿಗಳನ್ನು ಸ್ವತಃ ತಾವೇ ತಯಾರಿಸಿಕೊಳ್ಳುವುದು ಹಲವಡೆ ಕಂಡುಬರುತ್ತದೆ. ಉದಾ:- ತಲೆಯ ಮೇಲಿನ ಕೀರಿಟ ಭುಜದ ರಕ್ಕೆ ಸಾಮಾಗ್ರಿ ಚಟ್ಟ ಪಾತ್ರಧಾರಿಗಳನ್ನು ಅತಿ ಹೆಚ್ಚು ಶೋಭಿಸುವ ಅಲಂಕಾರಿಕ ಸಾಮಾಗ್ರಿಗಳನ್ನು ರಚಿಸಿಕೊಳ್ಳುತ್ತಾರೆ. ಅಲ್ಲದೇ ಆಚದ ದಿವಸ ಪಾತ್ರಧಾರಿಗಳಿಗೆ ಬಹುಮುಖವಾಗಿ ಮುಖವಾರ್ಣಿಕೆ ಬಹಳ ಪ್ರಮುಖವಾದದ್ದು, ಮುಖಕ್ಕೆ ವರ್ಣಸಂಯೋಜನೆ ಮಾಡದೇ ಇದ್ದಲ್ಲಿ ಪಾತ್ರಕ್ಕೆ ಜೀವ (ಕಳೆ) ಬರುವುದಿಲ್ಲ. ಅದಕ್ಕಾಗಿ ಬಯಲಾಟಗಳಲ್ಲಿ ಮುಖವರ್ಣಿಕೆ ಕಲೆ ಪ್ರಮುಖವಾದದ್ದು.

* **ಮುಖಕ್ಕೆ ಬಣ್ಣ ಲೇಪಿಸುವ ವಿಧಾನ:** ಪಾತ್ರಧಾರಿ ಮುಖಕ್ಕೆ ಬಣ್ಣವನ್ನು ಬಳಿದುಕೊಳ್ಳುವ ಮುನ್ನ ಯಾವ ಪಾತ್ರವನ್ನೂ ಮಾಡಿದ್ದೇನೆ ಅನ್ನುವ ರೀತಿ ನೀತಿಯ ಮೇಲೆ ಸಿದ್ಧತೆಯಾಗಬೇಕು. ಮೊದಲಿಗೆ ಬಣ್ಣ ಹಚ್ಚುವ ಕಾರ್ಯದಲ್ಲಿ ತಲೆಯ ಕೂದಲುಗಳ ಅಡ್ಡಡ ಬರದಂತೆ ಒಟ್ಟುಗೂಡಿಸಿ ಬಿಳಿ ಬಟ್ಟೆಯ ವಸ್ತ್ರವನ್ನು ತಲೆಗೆ ಗಟ್ಟಿಯಾಗಿ ಬಿಗಿದಿರುತ್ತಾರೆ. ಮುಖವನ್ನು ಸ್ವಚ್ಛವಾಗಿ ನೀರಿನಲ್ಲಿ ತೊಳೆದು ಮುಖ ಹದವಾದಂತೆ ಮಾಡಲಾಗುತ್ತದೆ. ನಂತರ ತಿಳಿವರ್ಣದ ರೂಪದಲ್ಲಿ ಹಂತ ಹಂತವಾಗಿ ಮುಖಕ್ಕೆ ಬಣ್ಣ ಬಳಿಯುತ್ತಾರೆ. ಕಲ್ಲಿನ ಸುಣ್ಣದಂತಿರುವ ಹರಳನ್ನು ಕೈಯಲ್ಲಿ ನೀರನೊಂದಿಗೆ ಹದವಾಗಿ ಮಿಶ್ರಣ ಮಾಡಲಾಗುತ್ತದೆ. ಮುಖಕ್ಕೆ ಹಚ್ಚಿದ ಮೇಲೆ ಜೋರಾಗಿ ಬಡಿಯುತ್ತಾರೆ. ಕಾರಣ ಆ ವರ್ಣ ಬೆವರಿನ ಹಾನಿಗೆ ಹೋಗದಿರಲಿ ಎಂಬ ಉದ್ದೇಶದಿಂದ ಪಾತ್ರಧಾರಿಗೆ ಹೆಚ್ಚಾಗಿ ಬಣ್ಣ ಬಳಕೆ ಮಾಡುವುದು ಮುಖ ಎರಡು ಕೈ ಮುಂಭಾಗ ಕಾಲು, ಕುತ್ತಿಗೆ, ಭಾಗ, ಕೃಷ್ಣ ಇನ್ನಿತರೆ ಅರೆದೇಹ ಕಾಣಿಸಿಕೊಳ್ಳುವ ಪಾತ್ರವಿದ್ದರೆ ಪೂರ್ತಿ ವರ್ಣ ಲೇಪನ ಮಾಡಿರುತ್ತಾರೆ. ಇನ್ನುಳಿದ ಭಾಗವೆಲ್ಲ ವಸ್ತ್ರಾಲಂಕಾರದಿಂದ ಸಿದ್ಧತೆ ಮಾಡಿರುತ್ತಾರೆ. ಮುಖ ವರ್ಣಿಕೆಯ ಸಂದರ್ಭದಲ್ಲಿ ಹಲವು ಚುಕ್ಕಿ ರೇಖೆಗಳೊಂದಿಗೆ ಪಾತ್ರಧಾರಿಯ ಮುಖ ವರ್ಣಮಯವಾಗಿರುತ್ತದೆ.

* **ಮುಖವರ್ಣಿಕೆಯ ಕಲಾವಿದರು:** ಆಯಾ ಊರಿನಲ್ಲಿ ವಾಸವಿರುವ ಕಲಾವಿದರ ಮನೆತನದ ಕಲಾವಿದರು ಮುಖಕ್ಕೆ ಬಣ್ಣವನ್ನು ಬಳಿಯುತ್ತಾರೆ. ಅಥವಾ ನಗರ ಪ್ರದೇಶವಾದ ಶಹಾಪುರ, ಸುರಪುರ, ಯಾದಗಿರಿಯಲ್ಲಿರುವ ಬಯಲಾಟ ಸಾಮಗ್ರಿಗಳ ಅಂಗಡಿಯು ಕಲಾವಿದರು ಬಣ್ಣವನ್ನು ಹಚ್ಚುವ ಕ್ರೀಯೆಯಲ್ಲಿ ಕ್ರೀಯಾಶೀಲರು ಮತ್ತು ತಜ್ಞರಿರುತ್ತಾರೆ. ಅಥವಾ ಬಯಲಾಟವನ್ನು ಸದಾ ವಿಕ್ಷಿಸುವ ಚಿತ್ರಕಲಾವಿದ ಮುಖವರ್ಣಿಕೆ ಕಲೆಯಲ್ಲಿ ಭಾಗಿಯಾಗುವನು.

* **ಮುಖವರ್ಣಿಕೆ ಕಲೆಯ ಸಾಮಾಗ್ರಿಗಳು:** ಸಣ್ಣ ಮತ್ತು ದೊಡ್ಡ ಪ್ರಮಾಣದ ಕೆಲವು ಬ್ರೇಶ್‌ಗಳು ಬಣ್ಣಗಳು ಮಿಂಚು ಹೊಳಪಿನ ಕಾಗದಗಳು ಕಾಟನ್ ಬಟ್ಟೆ (ಖಾದಿ) ಉರಿ ಮೀಸೆ

ಮಾಡಲು ನಾಜೂಕಿನ ಕುಂಚ (ಕುರಿತ ಕೂದಲುಗಳು) ಕೊಬ್ಬರಿ ಎಣ್ಣೆ, ನೀರು (ಗಮ್ಮು) ಅಂಟು ದ್ರಾವಕ, ಮಸಿ, ವಿಭೂತಿ, ಕುಂಕುಮ ವಿವಿಧ ನಮೂನೆಯ ಕಡ್ಡಿಗಳು (ಚುಕ್ಕೆ, ನಾಮ, ಎಳೆಯುವ ಕ್ರೀಯೆಗಾಗಿ ಹೀಗೆ ಹಲವಾರು ಸಾಮಾಗ್ರಿಗಳು ಬಳಕೆಯಾಗುತ್ತವೆ.

*** ವಿವಿಧ ಬಗೆಯ ಬಯಲಾಟ ಕಥೆಗಳು:**

೧. ಕೃಷ್ಣಾರ್ಜುನ ಕಾಳಗ (೨) ದೇವಿ ಆಟ (೩) ಕನಕಾಂಗಿ (೪) ವೀರಬಬ್ರು ವಾಹನ. (೫) ಭಕ್ತ ಮಾರ್ಕಂಡೇಯ (೬) ತ್ರಿಪುರ ಸಂಹಾರ ಹೀಗೆ ಅನೇಕ ಕಥೆಯಾಧಾರಿತ ಬಯಲಾಟಗಳನ್ನು ನಮ್ಮ ಗ್ರಾಮೀಣ ಜನರು ಆಡುತ್ತಾರೆ.

*** ಬಯಲಾಟ ಆಡುವ ಸಂದರ್ಭಗಳು:**

೧. ಆ ಊರಿನ ದೇವತೆಯ ಮತ್ತು ದೇವರ ಜಾತ್ರೆಯ ಅಂಗವಾಗಿ

೨. ಪ್ರಮುಖ ಹಬ್ಬದ ಪ್ರಯುಕ್ತ

೩. ಊರಿನ ಪ್ರಮುಖರ ಕಾಳಜಿ ಮತ್ತು ಅವರ ವಿಶೇಷ ಆಹ್ವಾನದ ಮೇರೆಗೆ

೪. ಶುಭ ಸಂದರ್ಭದ ಸಮಯದಲ್ಲಿ

೫. ಶ್ರಾವಣ ಮಾಸ, ಬಸವಜಯಂತಿ, ಹಂಪಿ ಹುಣ್ಣಿಮೆಗಳಲ್ಲಿ ಹೀಗೆ ಹಲವು ಸಾಂದರ್ಭಿಕ ಸನ್ನಿವೇಶದಲ್ಲಿ ಬಯಲಾಟಗಳನ್ನು ಆಡುತ್ತಾರೆ.

*** ಬಯಲಾಟ ಆಡುವ ಗ್ರಾಮಗಳು:**

ಯಾದಗಿರಿ ಜಿಲ್ಲೆಯಲ್ಲಿ ಯಾದಗಿರಿ ಸುರಪುರ ತಾಲುಕುಗಳಲ್ಲಿ ಸಾಮಾನ್ಯವಾಗಿ ಅಲಲ್ಲಿ ಕೆಲವು ಗ್ರಾಮಗಳಲ್ಲಿ ಬಯಲಾಟಗಳನ್ನು ಆಡುತ್ತಾರೆ. ಆದರೆ ಶಹಾಪುರ ತಾಲೂಕಿನ ಬಹುತೇಕ ಹಳ್ಳಿಗಳಲ್ಲಿ ಬಯಲಾಟಗಳನ್ನು ಪ್ರತಿವರ್ಷ ಆಡುತ್ತಾರೆ. ಉದಾ: ದೋರನಹಳ್ಳಿ ರಸ್ತಾಪುರ, ಐಕೂರು, ಅನಕಸೂರು, ಕಾಡಮಗೇರ, ಕುರಿಹಾಳ, ಕೊಂಕಲ್, ಗೊಂದೆನೂರು, ಚೆನ್ನೂರು, ತುಮಕೂರು ವಡಗೇರ, ಮಾಚನೂರು, ಸೇರಿದಂತೆ ಹಲವು ಹಳ್ಳಿಗಳ್ಳಿ ಪ್ರತಿ ವರ್ಷ ಬಯಲಾಟಗಳನ್ನು ಆಡುತ್ತಾರೆ.

*** ಬಯಲಾಟಗಳನ್ನು ಆಡುವ ಉದ್ದೇಶ ತಂತ್ರ ಮತ್ತು ಶೈಲಿ:**

ಪ್ರದೇಶಗಳಲ್ಲಿ ಬಯಲಾಟಗಳನ್ನು ಆಡುವ ಮೂಲ ಉದ್ದೇಶ ಊರಿನ ಜಾತ್ರೆಯ ನಿಮಿತ್ತ ಜನರಿಗೆ ಮನರಂಜನೆ ನೀಡುವುದು ಎಂದು ಹೇಳುವುದು. ಒಂದಡೆಯಾದರೆ ಉತ್ತಮ ಕಥೆಯನ್ನು ಆಡುವುದರ ಮೂಲಕ ಜನರಿಗೆ ಉತ್ತಮ ಸಂಸ್ಕಾರ ತಿಳಿಸುವ ಕೆಲಸ ಬಯಲಾಟಗಳು ಮಾಡುತ್ತವೆ.

ಈ ಆಟಗಳನ್ನು ಆಡುವ ತಂತ್ರಗಾರಿಕೆ ಹಲವು ದಿನಗಳಿಂದ ಕೂಡಿಟ್ಟ ಹಣವನ್ನು ಸ್ನೇಹಿತ ವರ್ಗದಿಂದ ಕೂಡಿಸಿ ಯಾರಿಗೂ ಆರ್ಥಿಕ ಹೊರೆ ಬಿಳದಂತೆ ಸಮಾನ ಹಣದಿಂದ ಒಗ್ಗೂಡಿಸಿ ಆಡುವ ಸುಲಭ ತಂತ್ರಗಾರಿಕೆ ಕಾಣಬಹುದು. ಎಲ್ಲಾ ಆಡುವ ಬಯಲಾಟ ಕಥೆಗಳು ಧಾರ್ಮಿಕ ಹಿನ್ನೆಲೆಯ ಶೈಲಿಯನ್ನು ಪ್ರತಿಬಿಂಬಿಸುತ್ತವೆ.

* **ಬಯಲಾಟಗಳಲ್ಲಿ ಚಿತ್ರಕಲೆಯ ಪಾತ್ರ:** ಮೊದಲೇ ತಿಳಿಸಿದ ಹಾಗೆ ಬಯಲಾಟಗಳಲ್ಲಿ ಚಿತ್ರಕಲೆಯ ಪಾತ್ರ ಮುಖವರ್ಣಿಕೆ ಮತ್ತು ಹಲವು ಸಾಮಾಗ್ರಿಗಳಲ್ಲಿ ಅಡಕವಾಗಿರುತ್ತದೆ. ಸುಂದರ ಪಾತ್ರಧಾರಿಯಾಗಿ ಜನರ ಮನಸ್ಸನ್ನು ಸೆಳೆಯಲು ಚಿತ್ರಕಲೆ ಪಾತ್ರ ಬಹುಮುಖ್ಯವಾದದ್ದು. ಪಾತ್ರಧಾರಿಯು ಮುಖಕ್ಕೆ ಲೇಪಿಸಿದ ವರ್ಣದಿಂದ ಅವನ ಸೌಂದರ್ಯವನ್ನು ಹೆಚ್ಚಿಸುತ್ತದೆ. ಮೈ ತುಂಬ ಧರಿಸಿದ ವಸ್ತ್ರಗಳಲ್ಲಿ ಚಿತ್ರಕಲಾವಿದನ ಕಲೆ ಶ್ರಮ, ವಿವಿಧ ಸುರುಳಿಗಳಲ್ಲಿ ಕಾಣುತ್ತದೆ. ಉತ್ತಮ ಪಾತ್ರಧಾರಿಯ ರೂಪುರೇಶೆಗಳಿಗೆ ಚಿತ್ರಕಲೆ ಮತ್ತು ಕಲಾವಿದನ ಕಾರ್ಯ ಮರೆಯುವಂತಿಲ್ಲ. ನಟನೆಯ ಮಾತುಗಳ ಅರ್ಭಟದಂತೆ, ಸೂಕ್ಷ್ಮಗ್ರಹಿಕೆಯ ಕೆಲವು ಸಂಗತಿಗಳು ಚಿತ್ರಕಲೆಯ ಪ್ರಕಾರವಾಗಿ ಕಾಣಿಸಿಕೊಳ್ಳುತ್ತವೆ. ಹಾಗಾಗಿ ಬಯಲಾಟಗಳಲ್ಲಿ ಚಿತ್ರಕಲೆಯ ಪಾತ್ರ ಬಹುಮುಖ್ಯವಾದುದ್ದು.

* **ಹಚ್ಚೆ ಚಿತ್ರಕಲೆ:** ಚರ್ಮದ ಮೇಲೆ ಚಿತ್ರವಾಗಿ ಸ್ಥಾನ ಪಡೆದ ಹಚ್ಚೆ ಕಲೆಯಾಗಿ ಪ್ರಪಂಚವ್ಯಾಪ್ತಿ ದೀರ್ಘ ಇತಿಹಾಸವನ್ನು ಹೊಂದಿದೆ. ಹಲವಾರು ವಿದ್ವಾಂಸರು ಈ ಹಚ್ಚೆ ಕಲೆಯ ಪ್ರಾಚೀನತೆ ಕುರಿತು ಚರ್ಚಿಸಿದ್ದಾರೆ. ಅದರ ವಿಕಾಸ ಪ್ರಸಾರ ಕುರಿತು ಆಲೋಚನೆಗಳನ್ನು ಹರಿಯ ಬಿಟ್ಟಿದ್ದಾರೆ. ಕನ್ನಡದಲ್ಲಿ ಹಚ್ಚೆ ಪದವು 'ಪಚ್ಚೆ' ಮೂಲದಿಂದ ಬಂದಿದೆ. 'ಪಚ್ಚೆ' ಎಂದರೆ ಹಸಿರು ಮಣಿ ಅಥವಾ ರತ್ನ, ಹಸಿರು ಬಣ್ಣ ಹಣೆಯ ಮೇಲಿನ ಸ್ಥಿರವಾದ ತಿಲಕ ಎಂಬರ್ಥಗಳಿವೆ. ಚರ್ಮದ ಮೇಲೆ ಶಾಶ್ವತವಾಗಿ ಇರಬಲ್ಲ ಹಸಿರು ಬಣ್ಣದ ಕುರುವೇ ಹಚ್ಚೆಯಾಗಿದೆ. ಕಿಟೆಲ್ ಕೋಶದಲ್ಲಿ ಹಚ್ಚೆಯನ್ನು ಕುರಿತು ಅಚ್ಚೆ, ಹೆಚ್ಚೆ ಎಂಬರ್ಥಗಳಿವೆ. ಮಲೆಯಾಳಿ ಭಾಷೆಯಲ್ಲಿ ಹಚ್ಚೆ ಕಲೆಗೆ 'ಪಚ್ಚ ಕುತ್ತುಕ' ಅಂದರೆ ಹಚ್ಚೆ ಕುಕ್ಕುವುದು ಎನ್ನುತ್ತಾರೆ. ತಮಿಳು ಭಾಷೆಯಲ್ಲಿ ಪಚ, ಪಚ್ಚಿ ಎಂಬ ರೂಪಗಳಿವೆ. ಇಂಗ್ಲೀಷಿನಲ್ಲಿ ಇದನ್ನು tattoo ಎಂದು ಕರೆಯುತ್ತಾರೆ. ಪಾಲಿನೇಶಿಯನ್ ಭಾಷೆಯಲ್ಲಿ tattoo (to mark) ಎಂದಿದ್ದು ಇದಕ್ಕೆ ಹೊಡೆ ತಟ್ಟು ಎಂಬರ್ಥವಿದೆ. ಈ ರೂಪವೇ ಹಚ್ಚೆ ಕ್ರೀಯೆಯ ಮೂಲಾರ್ಥವನ್ನು ಸೂಚಿಸುತ್ತದೆ.[೪] ಹೀಗೆ ಹಚ್ಚೆ ಕಲೆಯ ಕುರಿತು ಹಲವಾರು ಕೃತಿಗಳು ತನ್ನದೆಯಾದ ವಿವರಣೆಗಳನ್ನು ನೀಡುತ್ತವೆ. ವಿದೇಶಿ ಪ್ರವಾಸಿಗರಾದ ನಿಕೊಲೊ ಕೊಂಟಿ ಹಾಗೂ ತಾವರನೊ ಅವರ ಪ್ರವಾಸಿ ಬರೆಹಗಳಲ್ಲಿ ಕರ್ನಾಟಕದ ಹಚ್ಚೆಯ ಪ್ರಸ್ತಾಪ ಬರುತ್ತದೆ. ಕ್ರಿ.ಶ.೧೬೪೧–೧೬೬೭ರಲ್ಲಿ ಭೇಟಿ ನೀಡಿದ ತಾವರೆನ್ನೊ 'ಹೆಂಗಸರು ಸೊಂಟದ ಮೇಲ್ಭಾಗವನ್ನು ಬಗ 'ಬಗೆಯ ಹೂಗಳಂತೆ ಹಚ್ಚೆ ಹೊಯ್ಯಿಸಿ ಅಲಂಕಾರ ಮಾಡಿಕೊಂಡಿರುತ್ತಾರೆ. ಆ ಹೂವಿನ

ಹಚ್ಚೆಗೆ ಯಾವುದೋ ಬೇರಿನ ರಸದಿಂದ ವಿಧ ವಿಧವಾದ ಬಣ್ಣ ಹಾಕುತ್ತಾರೆ. ಆಗ ಅವರ ಚರ್ಮವು ಹೂವನ್ನು ನೇಯ್ದು ಬಟ್ಟೆಯಂತೆ ಕಾಣುತ್ತವೆ ಎಂದಿದ್ದಾನೆ.

ಕ್ರಿ.ಶ.೧೪೪೪ರಲ್ಲಿ ಭಾರತಕ್ಕೆ ಬಂದು ವಿಜಯನಗರಕ್ಕೆ ಭೇಟಿ ನೀಡಿದ ನಿಕೊಲೊ ಕೊಂಟಿ ಇಲ್ಲಿ ಹೆಂಗಸರು ಗಂಡಸರೆಂಬ ಭೇಧವಿಲ್ಲದೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ ಎಂದು ಬರೆದಿದ್ದಾನೆ. ಕ್ರಿ.ಶ.೧೪೪೭ರ ಕಾಲಾಧಿಯಲ್ಲಿದ್ದ ವ್ಯಾಸರಾಯರು ಕೃಷ್ಣನನ್ನು ವರ್ಣಿಸುತ್ತ

"ಮೃಗನಾಭಿ ತಿಲಕ ನೊಸಲಲಿ ಹಚ್ಚೆಬಟ್ಟು
ಮದನ ಸಿಂಗಾಡಿ ಸೋಲಿಸುವ ಪುರ್ಬುಗಳ
ಕಡುತೆಗಂಗಳ ಢಾಳ ಜನವ ಮೋಡಿಸುತಿಪ್ಪ
ಕಡೆಗಣ್ಣ ಕೆಂಪು ಹಚ್ಚೆಯ ರೇಖೆಗಳ
ಬೆಡಗು ಮುತ್ತಿನ ಮೂಗುತಿ ನಾಸಿಕದಲ್ಲಿ"

ಎಂದು ಹಾಡಿದ್ದಾರೆ. ಈ ಹಾಡಿನಲ್ಲಿ ಹಣೆಯ ಮೇಲೆ 'ಹಚ್ಚೆಯ ಬಟ್ಟು' ಎಂದು ಕರೆದಿದ್ದನ್ನು ಗಮನಿಸಬೇಕು. ಹೀಗೆ ಅನೇಕೆ ಪ್ರವಾಸಿ ಚಿಂತಕರ, ಕವಿಗಳ ಕಾವ್ಯದ ಸಾಲಿನಲ್ಲಿ ಹಚ್ಚೆಯ ಕುರಿತು ಹಲವಾರು ಉಲ್ಲೇಖ ನೀಡಿದ್ದಾರೆ.

* **ಯಾದಗಿರಿ ಜಿಲ್ಲೆಯ ಹಚ್ಚೆ ಚಿತ್ರಕಲೆ:** ನೂತನ ಯಾದಗಿರಿ ಜಿಲ್ಲೆಯ ಹಳ್ಳಿಗಳಲ್ಲಿ ಹಚ್ಚೆ ಚಿತ್ರಕಲೆ ಪ್ರತಿಬಿಂಬಿಸುತ್ತಿದೆ. ಹಲವು ಮಹಿಳೆ (ಆದರ ಸಾಂಸ್ಕೃತಿಕ ಸೊಬಗನ್ನು ಅರಿತವರು ಮಾತ್ರ) ಯರ ಹಣೆಯ ಮೇಲೆ ಒಂದು ಚುಕ್ಕಿ ರೂಪದಲ್ಲಾದರು ಹಚ್ಚೆ ಕಾಣಿಸಿಕೊಳ್ಳುತ್ತದೆ. ಈ ಹಚ್ಚೆ ಕಲೆ ಯಾದಗಿರಿ ಜಿಲ್ಲೆಯಲ್ಲಿ ನಗರ ಪ್ರದೇಶಕ್ಕಿಂತ ಹಳ್ಳಿಗಳಲ್ಲಿ ಮತ್ತು ಲಂಬಾಣಿ ಸಮುದಾಯದ (ತಾಂಡದ) ಮಹಿಳೆಯರ ಮೈಮೇಲೆ ಹಚ್ಚೆಕಲೆ ಜೀವಂತವಾಗಿರುವುದು. ಸತ್ಯದ ಸಂಗತಿ. ಈ ಹಚ್ಚೆಕಲೆ ಗ್ರಾಮೀಣ ಪ್ರದೇಶದಲ್ಲಿ ಅನಕ್ಷರಸ್ತ ಮಹಿಳೆಯರ ಮೈಮೇಲೆ ಹೆಚ್ಚು ಕಾಣುತ್ತದೆ. ಆಕ್ಷರಸ್ತ ಮಹಿಳೆಯರ ಮೈ ಕೈಗೆ ಕಾಣದೇ ಕೇವಲ ಹಣೆಯ ಮೇಲೆ ಮಾತ್ರ ಇರುತ್ತದೆ.

* **ಹಚ್ಚೆ ಹಾಕುವವರು:** ಕರ್ನಾಟಕದಲ್ಲಿ ಕೊರವರು, ಜೋಗೇರು, ವಡ್ಡರು, ಹೊಲೆಯರು, ಮಾದಿಗರು, ಗೊಂದಲಿಗರು, ಕಿಳ್ಳಿಕ್ಯಾತರು ಸೇರಿದಂತೆ ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚಾಗಿ ಹಚ್ಚೆ ಹಾಕುವ ಸಮುದಾಯವೆಂದರೆ ಮೀನುಗಾರರು, ಜೋಗೇರು, ವಡ್ಡರು ಈ ಮೀನುಗಾರ ಸಮುದಾಯದವರು ಮೂಲತಃ ಮಹಾರಾಷ್ಟ್ರದ ಕೊಲ್ಲಾಪುರ ಸಾಂಗ್ರೋಳದಿಂದ ವಲಸೆ ಬಂದವರು. ಮೀನುಗಾರಿಕೆಯ ವೃತ್ತಿ ಪುರುಷರದು ಆದರೆ ಹಚ್ಚೆಹಾಕುವುದು ಜೋಗೇರ ಸಾಮಾನುಗಳನ್ನು ಮಾರುವುದು ಮಹಿಳೆಯರ ಕಾರ್ಯವಾಗಿದೆ.

* **ಹಚ್ಚೆ ಹಾಕುವ ಸಾಮಾಗ್ರಿಗಳು:** ೧. ಸೂಜಿಗಳು, ೩. ಕರಡು ಚಿತ್ರ ಬರೆಯುವ ವಿವಿಧ ಕಡ್ಡಿಗಳು, ೩. ಕಪ್ಪು ಮಸಿ, ೪. ಕುಡಿಕೆ, ೫. ಅರಸಿಣ, ೬. ವಳ್ಳೆಣ್ಣೆ ಹೀಗೆ ಹಲವಾರು ಸಾಮಗ್ರಿಗಳನ್ನು ಸಿದ್ದಪಡಿಸಿಕೊಂಡು ಹಚ್ಚೆ ಹಾಕಲು ಮುಂದಾಗುತ್ತಾರೆ.

* **ಹಚ್ಚೆ ತಯಾರಿಸಿಕೊಳ್ಳುವ ಮತ್ತು ಹಾಕುವ ವಿಧಾನಗಳು:** ಎಲ್ಲಾ ಸಾಮಗ್ರಿಗಳನ್ನು ಸಿದ್ದಪಡಿಸಿಕೊಳ್ಳಲು ಮೊದಲಿಗೆ ಚಿಮಣಿ (ದೀಪ)ಯ ಮುಂದಿನ ಬುಡ್ಡಿ (ಉರಿಯುವ ಭಾಗ) ಸುಟ್ಟ ಅದರ ಕಪ್ಪು ಮಸಿ ಮಾಡದೊಳಗೆ ಸುತ್ತ ಅಂಟಿಕೊಂಡಿರುತ್ತದೆ. ಮೇಲ್ಭಾವಣಿಗೆ ಮೆತ್ತಿಕೊಂಡ ಕಪ್ಪು ಮಸಿ ಉದುರಿಸಿಕೊಂಡು ಅದನ್ನು ಚಿಕ್ಕ ಮಡಿಕೆ (ಕುಡಿಕೆ)ಯೊಳಗೆ ನೀರನ್ನು ಹಾಕಿ ಮಿಶ್ರಣ ಮಾಡಲಾಗುತ್ತದೆ. ಅದೇ ಕಪ್ಪು ಮಸಿಯೇ ಹಚ್ಚೆ ವರ್ಣವಾಗುತ್ತದೆ. ೨, ೩, ೪, ಸೂಜಿದಿಂಡುಗಳನ್ನು ಒಂದೆಡೆ ಜೋಡಿಸಿ ಕಡ್ಡಿ ವಳ್ಳೆಣ್ಣೆಯೊಳಗೆ ಮೂರು ದಿನಗಳ ಕಾಲ ನೆನೆ ಹಾಕುತ್ತಾರೆ. ಮೂರು ದಿನ ನೆನದ ಸೂಜಿಗಳಿಂದ ಹಚ್ಚೆ ಹಾಕುತ್ತಾರೆ. ಹಚ್ಚೆ ಹಾಕುವ ಸ್ಥಳಕ್ಕೆ ಬೇವಿನಕಡ್ಡಿಯನ್ನು ಕಪ್ಪು ಮಸಿಯೊಳಗೆ ಅದ್ದಿಕೊಂಡು ಚುಕ್ಕಿ ಅಥವಾ ಬಿಡಿಸುವ ಚಿತ್ರವನ್ನು ಕರಡು ರೇಖಾ ಚಿತ್ರವನ್ನಾಗಿ ರಚಿಸಿಕೊಳ್ಳುತ್ತಾರೆ. ಕರಡು ರೇಖೆ ರಚನೆಯನಂತರ ಕಪ್ಪುಮನೆಯ ವರ್ಣದಲ್ಲಿ ಸೂಜಿಯ ದಿಂಡನ್ನು ಅದ್ದಿ ಚರ್ಮದ ಮೇಲೆ ಚುಚ್ಚುತ್ತಾರೆ. ಚುಚ್ಚಿರಕ್ತಗಾಯವಾದ ಸ್ಥಳವೇ ಹಚ್ಚೆ ಚಿತ್ರಕಲೆಯಾಗಿರುತ್ತದೆ. ಹಚ್ಚೆ ಹಾಕಿದ ನಂತರ ರಕ್ತದ ಗಾಯಕ್ಕೆ ಅರಸಿಣವನ್ನು ವಳ್ಳೆಣ್ಣೆಯೊಳಗೆ ಮಿಶ್ರಣಮಾಡಿ ಗಾಯಕ್ಕೆ ಲೇಪನ ಮಾಡಲಾಗುವುದು. ನಾಲ್ಕೈದು ದಿನಗಳವರೆಗೆ ಹಚ್ಚೆಯ ಗಾಯವನ್ನು ನಿವಾರಿಸಲು ಕೆಲವು ನಿಯಮಗಳನ್ನು ಈ ಕೆಳಗಿನಂತೆ ಪಾಲಿಸಲು ಹೇಳುತ್ತಾರೆ. ೧)ರಾತ್ರಿ ಮಲಗುವಾಗ ಹಚ್ಚೆ ಹಕಿಸಿಕೊಂಡ ಗಾಯಕ್ಕೆ ತೊಂದರೆ ಆಗದಂತೆ ನೋಡಿಕೊಳ್ಳಬೇಕು. ೨) ವಳ್ಳೆಣ್ಣೆ, ಹರಿಶಿಣ ಪುಡಿ, ಮಿಶ್ರಣ ಮಾಡಿ ಆಗಾಗ ಹಚ್ಚೆಯ ಗಾಯದ ಮೇಲೆ ಹಚ್ಚುತ್ತಲಿರಬೇಕು. ೩)ಗಾಯ ವಾಸಿಯಾಗುವವರೆಗೂ ಊರ ದೇವರ ಆಲುಗಂಭ (ದ್ವೀಪಸ್ತಂಭ)ದ ದೀಪಕ್ಕೆ ಎಣ್ಣೆ ಹಾಕಿ ಅರಕೆ ತೀರಿಸಬೇಕು. ಹೀಗೆ ಅನೇಕ ಸೂಚನೆಗಳನ್ನು ಪಾಲಿಸುವುದರೊಂದಿಗೆ ಹಚ್ಚೆಯ ಗಾಯವನ್ನು (ಮಾಯಿಸಬೇಕು) ನಿವಾರಿಸಬೇಕು. ನಂತರ ಹಚ್ಚೆ ಹಾಕಿದವರಿಗೆ ಚಾಜ( ಸಂಭಾವನೆ) ರೂಪದಲ್ಲಿ ಮೊರದ ತುಂಬ ಜ್ವಾಳ, ಬಟ್ಟೆ, ಹಣ್ಣು ಹಂಪಲುಗಳನ್ನು ನೀಡಿ ಗೌರವಿಸು ರೀತಿ ನೀತಿ ಕಾಣುತ್ತದೆ.

* **ಹಚ್ಚೆ ಚಿತ್ರ ಹಾಕಿಸಿಕೊಳ್ಳುವ ವಿವಿಧ ಭಾಗಗಳು:** ೧. ಹಣೆಯ ಮೇಲಿನ ಹಚ್ಚೆ, ೨. ಕೈ ಮೇಲಿನ ಹಚ್ಚೆ, ೩. ಎದೆಯ ಮೇಲಿನ ಹಚ್ಚೆ, ೪.ಗುಪ್ತಾಂಗ ಹಚ್ಚೆ, ೫. ಕಾಲು ಕೈ ಬೆರಳುಗಳ ಹಚ್ಚೆ, ೬.ಬೆನ್ನ ಮೇಲೆ ಹಚ್ಚೆ, ೭. ಗಲ್ಲದ ಮೇಲೆ ಹಚ್ಚೆ, ೮. ಗದ್ದದ ಮೇಲೆ ಹಚ್ಚೆ, ಹೀಗೆ ದೇಹದ ವಿವಿಧ ಭಾಗಗಳಲ್ಲಿ ಹಚ್ಚೆ ರೂಪಗೊಂಡಿರುವುದು ಕಂಡುಬರುತ್ತದೆ.

**ಹಚ್ಚೆಯ ಚಿತ್ರ ವಿನ್ಯಾಸಗಳು:** ಮಹಿಳೆಯರ ಮೈಮೈಲೆ ಅತ್ಯಂತ ಹೆಚ್ಚಾಗಿ ಕಂಡು ಬರುವ ಹಚ್ಚೆ ಚಿತ್ರ ವಿನ್ಯಾಸಗಳೆಂದರೆ ಐದು ಮಂದಿ ಗೆಳೆತೇರು (ಸ್ನೇಹಿತರು) ಶ್ರೀರಾಮನ ತೊಟ್ಟಿಲು, ಹನುಮಂತ, ಎಲೆಪೂಜೆ ಅಂತರಗಾಡಿ (ವಿನಾನ) ವಲಿಗುಂಡು, ಸೀತೆಸೆರಗು, ದಂಡಿಬಾಸಿಂಗ ಬಾಳೆಎಲೆ, ಚೇಳು, ಹಾವು, ಹೂಗಳು ಬಸವಣ್ಣ ಜೋಗಿಜಡಿ ಸೂರ್ಯಚಂದ್ರ ವಿವಿಧ ನಮೂನೆಯ ಚುಕ್ಕಿ ವಿನ್ಯಾಸಗಳ ತೇರು (ರಥ) ಹೀಗೆ ಅನೇಕ ಧಾರ್ಮಿಕ ಹಿನ್ನೆಲೆಯಾಗಿ ಸ್ವ ಇಚ್ಛೆಯಂತೆ ಗೆಳೆಯರ ನೆನಪಿಗಾಗಿ ಆ ಊರಿನ ದೇವರ ಭಕ್ತಿಗಾಗಿ ಗ್ರಾಮೀಣ ಪ್ರದೇಶದ ಮಹಿಳೆಯರು ತಮ್ಮ ಮೈ ಮೇಲೆ ಹಚ್ಚೆಯನ್ನು ಹಾಕಿಸಿಕೊಂಡಿರುವುದು ಕಂಡುಬರುತ್ತದೆ.

*** ಲಂಬಾಣಿ ಸಮುದಾಯ ಮಹಿಳೆಯರ ಮೈ ಮೇಲೆ ಹಾಕುವ ಹಚ್ಚೆ ವಿನ್ಯಾಸ:** ಯಾದಗಿರಿ ಜಿಲ್ಲೆಯಲ್ಲಿ ಸುಮಾರು ತಾಂಡಾಗಳಿವೆ. ಪ್ರತಿಯೊಂದು ತಾಂಡಾದೊಳಗೆ ಪ್ರವೇಶ ಮಾಡಿದಾಗ ಅವರಲ್ಲಿನ ಸಾಂಸ್ಕೃತಿಕ ಶ್ರದ್ಧೆ ಶ್ರೀಮಂತವಾದದ್ದು, ಅವರ ಉಡುವುಗಳೇ ಒಂದು ಕಲಾತ್ಮಕ ಕೊಡುಗೆಗಳಾಗಿವೆ. ಮತ್ತು ಹಚ್ಚೆ ಚಿತ್ರಕಲೆಯಂತೂ ಕಾಲಬದ್ಧವಾಗಿ ಪೋಶಿಸಿ ಬೆಳೆಸಿದಂತಿದೆ. ಅಂತಹ ತಾಂಡಾಗಳಲ್ಲಿ ಶಹಪುರ ತಾಲೂಕಿನ ಕೊಂಕಲ್ ವಡಗೇರಾ ಹತ್ತಿರವಿರುವ ಕಂಠಿತಾಂಡಾ ಬೀರನಕಲ್ ತಾಂಡಾ, ಯಾದಗಿರಿ ತಾಲೂಕಿನ ಬಸವಂತಪೂರ ತಾಂಡಾ, ಬಳಿಚಕ್ರತಾಂಡ, ಬದ್ದೇಪಲ್ಲಿ ತಾಂಡಾ, ಹೊಸಳ್ಳಿ ತಾಂಡಾ, ವರ್ಕನಳ್ಳಿ ತಾಂಡಾ, ವಡ್ನಳ್ಳಿ ತಾಂಡಾ, ಹೀಗೆ ಸೇರಿದಂತೆ ಜಿಲ್ಲೆಯ ಹಲವಾರು ತಾಂಡಾಗಳಲ್ಲಿ ಲಂಬಾಣಿ ಸಮುದಾಯದವರು ಹಚ್ಚೆ ಚಿತ್ರ ಕಲೆಯನ್ನು ಪ್ರೀತಿಸಿ ಆರಾಧಿಸುತ್ತಿರುವುದು ಕಾಣುತ್ತದೆ. ಅಂತೆಯೇ ಅವರು ಮೈ ಮೇಲೆ ಕಾಲು, ಬೆರಳು, ದೇಹದ ವಿವಿಧ ಭಾಗಗಳಲ್ಲಿ ಹಚ್ಚೆ ಹಾಕಿಸಿಕೊಂಡಿದ್ದಾರೆ. ಮೀನು, ಐದು ಮಂದಿ ಗೆಳೆತೇರು, ನವಿಲು ಗಿಡ ಬಳ್ಳಿ, ತೇರು, ಬಾಸಿಂಗ, ಹೀಗೆ ಅನೇಕ ವಿನ್ಯಾಸಗಳು ಹೊಂದಿದ ಹಚ್ಚೆ ಚಿತ್ರಕಲೆ ಅತ್ಯಂತ ಅಲಂಕಾರಿಕವಾಗಿದೆ.

*** ಹಚ್ಚೆ ಹಾಕಿಸಿಕೊಳ್ಳಲು ಪ್ರಮುಖ ಕಾರಣಗಳು:**

೧. ನಾವು ಸತ್ತಾಗ ನಮ್ಮ ಹಿಂದೆ ಬರೋದು ಹಚ್ಚೆ ಮಾತ್ರ ಎಂಬುದಕ್ಕೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ.

೨. ಹಚ್ಚೆ ಇದ್ದವರು ಮಾಡಿದ ಅಡುಗೆ ಬೇಗ ಹಳಸುವುದಿಲ್ಲ.

೩. ಹಸಿರು (ಹಚ್ಚೆ) ಇಲ್ಲದವಳ ಕೈಯಲ್ಲಿ ನೀರು ಕುಡಿಯಬಾರದು

೪. ಮಾಟ, ಮಂತ್ರ ಮೈಗೆ ಹತ್ತುವುದಿಲ್ಲ.

೫. ಮಕ್ಕಳಾಗುತ್ತವೆ, ಕಷ್ಟಬರುವುದಿಲ್ಲ, ವಿಷ ಬರುವುದಿಲ್ಲ.

೬. ಹನುಮಂತ ದೇವರ ಮುಂತಾದ ದೇವರ ಹಚ್ಚೆ ಹಾಕಿಸಿಕೊಂಡರೆ ದೆವ್ವ ಭೂತ ಬಡಿದುಕೊಳ್ಳುವುದಿಲ್ಲ.

೭. ಹಚ್ಚೆ ಸೌದರ್ಯದ ಸಂಕೇತ, ಮೈ ಕೈ ನೋವಾದರೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ.

೮. ಹಚ್ಚೆ ಇದ್ದವರು ಮಾತ್ರ ಸ್ವರ್ಗಕ್ಕೆ ಹೋಗುತ್ತಾರೆ.[೫] ಹೀಗೆ ಹಚ್ಚೆ ಹಾಕಿಸಿಕೊಳ್ಳುವುದರಿಂದ ಅನೇಕ ನಂಬಿಕೆಗಳಿವೆ. ಅನೇಕ ಜನಪದರ ನಂಬಿಕೆಗಳಿಂದ ಹುಟ್ಟಿಕೊಂಡ ಹಚ್ಚೆ ಚಿತ್ರಕಲೆ ಇಂದು ವಿಶ್ವಮಾನ್ಯತೆ ಪಡೆದಿದೆ. ಅಂತೆಯೇ ಪ್ಯಾರಿಸ್‌ನಲ್ಲಿ ನಡೆದ ಕಾರ್ಯಕ್ರಮದಲ್ಲಿ ಮೈ ತುಂಬೆಲ್ಲಾ ಹೆಚ್ಚೆ ಹಾಕಿಸಕೊಂಡು ಪ್ರಾನ್ಸ್ ಕಲಾವಿದನೊಬ್ಬ ತನ್ನ ದೇಹವನ್ನು ಪ್ರದರ್ಶಿಸಿದನು. ಮಾರ್ಚ್ ೨೨ ರಿಂದ ೨೪ರವರೆಗೆ ವಿಶ್ವ ಹೆಚ್ಚೆ ಉತ್ಸವ ೨೦೧೩.[೬]

**ಹಸೆ ಚಿತ್ರಕಲೆ:** ಯಾದಗಿರಿ ಜಿಲ್ಲೆಯ ಪ್ರಮುಖ ದೇವಸ್ಥಾನದ ಮತ್ತು ಶಾಲೆಗಳ ಭಿತ್ತಿಯ ಮೇಲೆ ಈ ಚಿತ್ರಗಳನ್ನು ಕಾಣಬಹುದು. ಅದರ ವರ್ಣಗಾರಿಕೆ (ಜಾಜದವರ್ಣ) ಕಂದು ಗೆಂಪು ವರ್ಣದಿಂದ ರಚಿಸಲಾಗಿದೆ. ಈ ಚಿತ್ರ ರಚನಾಕಾರ್ಯದಲ್ಲಿ ಭಿತ್ತಿ ತಯಾರಿಸಿಕೊಳ್ಳುವ ಸಿದ್ಧತೆ ಕಮಡುಬರುವುದಿಲ್ಲ. ಬಿಳಿ ವರ್ಣ ಭಿತ್ತಿಯ ಮೇಲೆ ವಿವಿಧ ವಿನ್ಯಾಸದ ಹಸೆ ಚಿತ್ರಕಲೆ ಮೂಡಿಬಂದಿರುತ್ತದೆ. ಉದಾ:- ಸರಕಾರಿ ಪ್ರೌಢಶಾಲೆ ಅಜಲಾಪುರ ಪ್ರೌಢಶಾಲೆ ಮತ್ತು ಶಹಾಪುರ, ಸುರಪುರ, ಯಾದಗಿರಿ ಹಲವು ದೇವಸ್ಥಾನ ಮತ್ತು ಮನೆಗಳು.

**ರಂಗೋಲಿ ಚಿತ್ರಕಲೆ:** ರಂಗ ಬರುತ್ತಾನೆಯ ರಂಗೋಲಿ ನಾ ಹೊಯ್ದೆ ರಂಗ ಬರುತ್ತಾನೆ ಇಲ್ಲವೋ ಗೊತ್ತಿಲ್ಲ. ರಂಗೋಲಿಯನಂತೂ ಮನೆಯ ಬಾಗಿಲಲ್ಲಿ ಹಾಕುತ್ತಾರೆ. ಹೆಣ್ಣು ಮಕ್ಕಳು ಬೆಳಿಗ್ಗೆ ಎದ್ದೊಡನೆ ಹೊಸ್ತಿಲ ತೊಳೆದು ಅಂಗಳ ಸಾರಿಸಿ ರಂಗೋಲಿಯನ್ನು ಹಾಕಿ ಹೊಸ್ತಿಲ ಪೂಜೆ ಮಾಡಿ, ದಿನಗೆಲಸ ಪ್ರಾರಂಭಿಸುವುದು ಸಂಪ್ರದಾಯವಿದೆ. ಹಿರಣ್ಯ ಕಶ್ಯಪನನ್ನು ನರಸಿಂಹ ಹೊಸ್ತಿಲ ಮೇಲೆ ಹಾಕಿ ಕೊಂದ ಕಥೆಯನ್ನು ಆಧರಿಸಿ "ದುಷ್ಟ ಶಿಕ್ಷೆ ಶಿಷ್ಟ ಪರಿಪಾಲನ" ಮಾಡುವ ದೇವರ ಬಗೆಗಿನ ಭಕ್ತಿಯಿಂದಾಗಿ ಹೊಸ್ತಿಲ ಪೂಜೆ ಮಾಡುವ ಸಂಪ್ರದಾಯವನ್ನು ಜನಪದರು ರೂಢಿಸಿಕೊಂಡಿರುವುದು ಕಂಡುಬರುತ್ತದೆ. ವಿವಿಧಾಕಾರ ಬಣ್ಣ ಬಣ್ಣದ ಚಿತ್ತಾರಗಳು ಬಿಳಿಯ ಚುಕ್ಕೆಗಳು ಕುಡಿಯಾದ ಕಲಾಕೃತಿಗಳು ಕಣ್ಣನ್ನು ಸೆಳೆಯುವ ಶುಭ್ರ ರೇಖೆಗಳು ಹೊಸ್ತಿಲ ಕ್ರೀಯಾಶೀಲ ಮನೆಯ ಗೃಹಣಿಯ ಜೀವನ ಕ್ರಮ, ಈ ರಂಗೋಲಿಯನ್ನು ಕೇವಲ ಚೆಂದ ಕಾಣಿಸುವುದಕ್ಕೆ ಮಾತ್ರ ಹಾಕುವುದಿಲ್ಲ. ಇದರ ಹಿನ್ನೆಲೆಯ ವಿಧಿಕ್ರಿಯೆಗಳು ಐತಿಹಾಸಿಕ, ಪೌರಾಣಿಕ ಹಿನ್ನೆಲೆಯ ಕಥಾನಕಗಳೂ ಇರುತ್ತದೆ. ರಂಗೋಲಿ ಭಾರತದ ಅತ್ಯಂತ ಪ್ರಾಚೀನ ಜನಪದಕಲೆ, "ಬದುಕಿನ ಖುಷಿಯನ್ನು ಸೌಭಾಗ್ಯ ಮಂಗಳಾಕರ ಪ್ರಸನ್ನತೆಯನ್ನು ಶುಭ ಸನ್ನಿವೇಶವನ್ನು ಹೇಳುವ ಲಾಲಿತ್ಯಪೂರ್ಣ ಕಲಾಕೌಶಲ್ಯವೇ ರಂಗವಲ್ಲಿ. ಇಲ್ಲಿಯ ಜನಪದ ಚಿತ್ರಕಲೆಗಳಲ್ಲೊಂದಾದ ಈ ಕಲೆಯಲ್ಲಿ ಶ್ರೇಷ್ಟ ಕಲೆಯ ಲಕ್ಷಣಗಳೆಲ್ಲವು ಇವೆ. ಇದು ಅಲಂಕಾರಿಕ ಮಾತ್ರವಲ್ಲ. ಮಂಗಲಕರವೂ ಆಗಿದೆ. ರಂಗೋಲಿ ಭಾರತದ ಹಳ್ಳಿ ಮೂಲೆಗಳಲೆಲ್ಲ ತುಂಬಿರುವ ಸೌಂದರ್ಯ ಪ್ರಜ್ಞೆಯ ದ್ಯೋತಕ,

ದೇವರನ್ನು ಹೊಲಿಸಿಕೊಳ್ಳುವ ಮಾರ್ಗ, ಈ ಕಲೆ ತಮಿಳು ನಾಡಿನಲ್ಲಿ 'ಕೋಲರ ಆಂಧ್ರದಲ್ಲಿ, ಮುಗ್ಗುಲು, ಮರಾಠಿಯಲ್ಲಿ 'ರಂಗೋಲಿ ಗುಜರಾತ್‌ದಲ್ಲಿ 'ಸಾಥ', ಬಂಗಾಳದಲ್ಲಿ 'ಅಲ್ಪನಾ, ಓರಿಸ್ಸಾದಲ್ಲಿ 'ಚಿತಾ, ರಾಜಸ್ಥಾನದಲ್ಲಿ 'ಮಾಂಡನಾ' ಉತ್ತರ ಪ್ರದೇಶದಲ್ಲಿ 'ಸಾಂಝ್' ಎಂದು ಪ್ರಖ್ಯಾತಿ ಹೊಂದಿದೆ. ರಂಗೋಲಿ ಕಲೆಯ ಮೂಲ ಆಶಯ ಮಾತ್ರ ಎಲ್ಲ ಪ್ರದೇಶಗಳಲ್ಲಿಯೂ ಒಂದೇ ಆಗಿದೆ. ರಂಗೋಲಿಯನ್ನು ಕರ್ನಾಟಕದಲ್ಲಿ 'ರಂಗವಾಲಿ', 'ರಂಗವಲ್ಲಿ', 'ರಂಗವಳಿ', 'ರಂಗವಾಲೆ', 'ರಂಗಾಲೆ', 'ರಂಗ ಹಾಕುವುದು', ಮಂಡಲ ಬರೆಯುವುದು, ಶೇಡಿ ಬರೆಯುವುದು, ಜೋಕೋ ಬರೆಯುವುದು ಎಂದು ಹಲವು ರೀತಿಯಲ್ಲಿ ಕರೆಯುತ್ತಾರೆ. ರಂಗೋಲಿಯನ್ನು ಕಿಟಲ್ ಕೋಶದಲ್ಲಿ Ornamental lines and figures drawn with various on the floor, the walls infront of the house on the floor an Idol ಎಂದು ವಿವರಿಸಿದರೆ, ಶಿವರಾಮ ಕಾರಂತರು ಮನೆಯ ಮುಂದೆ ಬರೆಯುವ ಚಿತ್ರ ಕೆಲಸವೆಂದು ಹೇಳಿದ್ದಾರೆ. ರಂಗೋಲಿ ಎಂಬುದು ಸಾಮಾನ್ಯವಾಗಿ ಮನೆಯ ಮುಂದೆ ಬರೆಯುವ (ಚಿತ್ರಿಸುವ) ಕಲೆಯೇ, ದೇವರ ಜಗಲಿ, ವ್ರತಾಚರಣೆ ಯಂತ್ರ, ಮಂತ್ರ ಮಾಡುವಲ್ಲಿ ಸ್ಮಶಾನದಲ್ಲಿ ಹೆಣ ಹೂಳುವ ಸಂದರ್ಭದಲ್ಲಿ ಮದುವೆ, ಮುಂಜಿವೆ, ಹಬ್ಬ ಹರಿದಿನ, ಜಾತ್ರೆಗಳಲ್ಲಿ, ಸುಗ್ಗಿಯ ಸಂದರ್ಭದ ರಾಶಿಗಳಲ್ಲಿ ವ್ಯಾಧಿ ನಿವಾರಣೆ, ಯಜ್ಞ ನವಗ್ರಹ ಶಾಂತಿ, ಮುಂತಾದ ಶುಭ-ಅಶುಭ ಕಾರ್ಯಗಳಲ್ಲಿ ರಂಗೋಲಿ ಹಾಕುತ್ತಾರೆ. ಹೀಗೆ ರಂಗೋಲಿಯು ಸೀಮಿತ ಅರ್ಥದಲ್ಲಿ ನಿಲ್ಲದೆ, ವಿಶಾಲ ಅರ್ಥವನ್ನು ಹೊಂದಿರುವುದು ಗೊತ್ತಾಗುತ್ತದೆ. ಆದುದರಿಂದ ರಂಗೋಲಿಯನ್ನು ಧಾರ್ಮಿಕ, ತಾಂತ್ರಿಕ ಹಿನ್ನೆಲೆಯ ಅಲಂಕಾರಿಕ ಕಲೆಯೆಂದು ಹೇಳಬಹುದಾಗಿದೆ. ಇಲ್ಲಿ ರಂಗವೆಂದರೆ ಬಣ್ಣ, ವಲ್ಲಿ ಎಂದರೆ ಬಳಿ ಎಂದರ್ಥ. ಬಣ್ಣದ ಸಾಲು, ರಂಗೋಲಿ ಪುಡಿ, ಬಣ್ಣಗಳಿಂದ ರಚಿಸಿದ ಬಳ್ಳಿ, ಚಿತ್ರವೇ ರಂಗೋಲಿ, ಬಣ್ಣದ ಗೆರೆಗಳ ಸಮೂಹವೆಂದೂ ಬಣ್ಣಗಳ ವೃಂದವೆಂದೂ ಇದನ್ನು ಅರ್ಥೈಸುತ್ತಾರೆ. ರಂಗೋಲಿಯು ರಂಗಬಲಿಯೆಂದೂ ಪ್ರಸಿದ್ಧವಾಗಿದೆ.[೬] ಅಂತೆಯೇ ರಂಗೋಲಿಯ ಚಿತ್ರಕಲೆ ಕುರಿತು ಅನೇಕ ಗ್ರಂಥಗಳು ವಿವರಣೆಗಳನ್ನು ನೀಡಿವೆ.

**ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಹಲವು ಪ್ರಕಾರದ ರಂಗೋಲಿ ಚಿತ್ರಕಲೆ:**

ಆಂಧ್ರದ ಗಡಿಭಾಗ ಹೊಂದಿದ ಈ ಜಿಲ್ಲೆಯಲ್ಲಿ ಹಲವು ಪ್ರಕಾರದ ರೂಪದಲ್ಲಿ ರಂಗೋಲಿ ಕಲೆ ಅಭಿವ್ಯಕ್ತಿಗೊಂಡಿವೆ. ೧. ದಿನನಿತ್ಯದ ರಂಗೋಲಿ, ೨. ಹಬ್ಬದ ರಂಗೋಲಿ, ೩. ಗೃಹಶಾಂತಿಯ ರಂಗೋಲಿ, ೪. ಚಾವಡಿ ರಂಗೋಲಿ, ೫. ಯಜ್ಞದ ರಂಗೋಲಿ, ೬. ಜಾತ್ರೆಯ ರಂಗೋಲಿ, ೭. ಸಂಕೀರ್ಣ ರಂಗೋಲಿ ೮. ಭೂತ ಬಿಡಿಸುವ ರಂಗೋಲಿ, ೯. ಸ್ಮಶಾನದ ರಂಗೋಲಿ ೧೦.ಮೋಡಿಯಾಟದ ರಂಗೋಲಿ, ೧೧. ಸ್ಪರ್ಧಾತ್ಮಕ ರಂಗೋಲಿ ಹೀಗೆ ಹಲವಾರು ಪ್ರಕಾರಗಳಲ್ಲಿ ರಂಗೋಲಿ ಕಲೆ ಕಾಣಿಸಿಕೊಳ್ಳುತ್ತದೆ. ನಾನಾ ಬಗೆಯ ವಿಧದ ರಂಗೋಲಿ ತನ್ನದೇಯಾದ ಅರ್ಥ,

ವ್ಯಾಪ್ತಿ, ಸ್ವರೂಪ, ಚಿಂತನೆ ಮೌಲ್ಯವನ್ನು ಪಸರಿಸುವ ಕ್ರಿಯೆಯಾಗಿದೆ. ವಿವಿಧಾತ್ಮಕ ನೆಲೆಯಲ್ಲಿ ರೂಪುಗೊಂಡ ರಂಗೋಲಿ ಕಲೆ ಕರ್ನಾಟಕದ ಹಲವು ಭಾಗದ ಸಮಾರೋಪದಂತೆ ಕಂಡರೂ ಹಲವು ಆಚಾರ ವಿಚಾರ ಕ್ರಿಯೆಯಲ್ಲಿ ಯಾದಗಿರಿ ಜಿಲ್ಲೆ ರಂಗೋಲಿ ಕಲೆ ಭಿನ್ನವಾದದು ಮತ್ತು ಆಕರ್ಷಕವಾದದ್ದು.

**ರಂಗೋಲಿ ಚಿತ್ರಕಲೆ ಹಾಕುವ ವಿಧಾನ:**

ರಂಗೋಲಿಯನ್ನು ಹಾಕುವಾಗ ಪ್ರಮುಖವಾಗಿ ಚುಕ್ಕಿ ಪ್ರಧಾನ ರಂಗೋಲಿ, ಚುಕ್ಕಿ ರಹಿತವಾದ ರಂಗೋಲಿ, ಸಾಲು ಚುಕ್ಕಿಗಳನ್ನು ಇಡುವ ಮೂಲಕ ಹಾಕುವ ರಂಗೋಲಿ, ಪ್ರಾಚೀನತೆಯ ರಂಗೋಲಿ ಅಭಿವ್ಯಕ್ತಿ ಕ್ರಮವನ್ನು ತಿಳಿಸುತ್ತದೆ. ಚುಕ್ಕಿ ರಹಿತವಾದ ರಂಗೋಲಿ ವಾಸ್ತವೀಕರಣವನ್ನು ಪ್ರತಿಬಿಂಬಿಸುತ್ತದೆ. ಚುಕ್ಕಿ ಪ್ರಧಾನ ರಂಗೋಲಿ ಶಾಸ್ತ್ರೀಯತೆಯನ್ನು ಕಲಿಸಿದರೆ ಚುಕ್ಕಿರಹಿತ ರಂಗೋಲಿ ಸೃಜನಶೀಲತೆಯ ಆಳ ಅಧ್ಯಯನವನ್ನು ಈಗಾಗಲೇ ಕಲಿತಂತೆ ಇದ್ದು, ಪ್ರಭುತ್ವ ರೇಖೆಗಳ ಚಲನಶೀಲತೆಯನ್ನು ಪ್ರತಿಪಾದಿಸುತ್ತದೆ. ರೇಖೆ ರಚನೆಯ ನಂತರ ವರ್ಣ ತುಂಬುವಿಕೆ ನಡೆಯುತ್ತದೆ.

**ರಂಗೋಲಿಯ ಚಿತ್ರಕಲೆಯ ವಿವಿಧ (ಮಾಧ್ಯಮಗಳು) ಸಾಧನಗಳು**

ಯಾದಗಿರಿ ಜಿಲ್ಲೆಯ ನಗರದ ಗ್ರಾಮೀಣ ಪ್ರದೇಶಗಳಲ್ಲಿ ರಂಗೋಲಿ ಹಾಕುವ ವಿಧಾನದಲ್ಲಿ ಪ್ರಮುಖವಾಗಿ ಕಂಡುಬಂದ ವಿವಿಧ ಮಾಧ್ಯಮ ರಂಗೋಲಿ, ರಂಗೋಲಿ ಪುಡಿ, ಹಿಟ್ಟು, ಕುಂಕುಮ, ಅರಿಷಿಣ, ಸುಣ್ಣ, ತರಕಾರಿ ಹಣ್ಣು, ವಿವಿಧ ಬಣ್ಣದ ಮಣ್ಣಿನಿಂದ, ಧಾನ್ಯಗಳಿಂದ ವರ್ಣವಿನ್ಯಾಸ ಹೀಗೆ ವಿವಿಧ ಮಾಧ್ಯಮದಲ್ಲಿ ರಂಗೋಲಿ ಕಲೆ ರೂಪ ಪಡೆದುಕೊಂಡಿದೆ.

**ರಂಗೋಲೇತರ ಚಿತ್ರಕಲೆ:**

ತಾಂತ್ರಿಕ ಹಿನ್ನೆಲೆಯ ರಂಗೋಲಿಯಂತೆ, ರಂಗೋಲಿಯೇತರ ಚಿತ್ರಕಲೆಯೂ ಅದೇ ಆಶಯದಲ್ಲಿ ಇರುವುದು ಕಂಡುಬರುತ್ತದೆ. ಇಂತಹ ರಂಗೋಲಿಯೇತರ ಚಿತ್ರಕಲೆಗಳು ಹೀಗಿರುತ್ತವೆ.

೧. ಬೇಗನೆ ಹೆರಿಗೆ ಆಗಲು ಚಕ್ರಬಿಂಬದ ಚಿತ್ರ ಬರೆಯಿಸುವುದು.

೨. ಹೆರಿಗೆಯಾದ ಮೇಲೆ ಶೆಟಿಗವ್ವನ ಚಿತ್ರ ಬರೆಯಿಸುವುದು.

೩. ದನಕರುಗಳಿಗೆ ಉಣ್ಣೆಯಾಗದಿರಲೆಂದು ಮಣ್ಣಿನ ಮುಚ್ಚಳದ ಮೇಲೆ ಚಿತ್ರ ಬರೆಯಿಸುವುದು.

೪. ಗಣಜಲಿ ರೋಗಕ್ಕೆ ಎಲೆಯಲ್ಲಿ ಚಿತ್ರ ಬರೆಯಿಸುವುದು.

೫. ಸರ್ಪ ಹುಣ್ಣಿಗೆ ತಡೆಹಾಕುವ ಸಲುವಾಗಿ ಚಿತ್ರ ಬರೆಯಿಸುವುದು.

೬. ನೆದರು (ದೃಷ್ಟಿ) ಆಗದಿರಲು ಬೆದರಿನ (ಮುಖದ) ಚಿತ್ರ ಬರೆಯಿಸುವುದು.

೭. ದೆವ್ವ, ಭೂತಭಾದೆಯ ನಿವಾರಣೆಗಾಗಿ ತಾಮ್ರದ ತಾಯತದಲ್ಲಿ ಚಿತ್ರ ಬರೆಯಿಸುವುದು.[೮]

ಈ ಮೇಲೆ ಹೇಳಿದ ರಂಗೋಲಿಯೇತರ ಪ್ರಕಾರದ ಚಿತ್ರಕಲೆಯ ಎಲ್ಲಾ ಅಂಶಗಳು ಯಾದಗಿರಿ ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿ ರಚನೆಯಾಗುತ್ತಲಿರುತ್ತವೆ.

ಪ್ರಸ್ತುತ ರಂಗೋಲಿ ಕಲೆ ಪ್ರಸ್ತುತ ದಿನಗಳಲ್ಲಿ ರಂಗೋಲಿ ಹಾಕುವ ವಿಧಾನ ಯಾಂತ್ರಿಕ ಸಾಮಗ್ರಿಗಳಿಂದ (ಸಿದ್ಧತೆಯಾದ ಕಾಗದ ವಿನ್ಯಾಸದ ಮೂಲಕ ರಂಗೋಲಿ ಹಾಕಲಾಗುತ್ತಿದೆ.) ರೂಪಗೊಳ್ಳತ್ತಲಿವೆ. ಒಟ್ಟಿನಲ್ಲಿ ಯಾದಗಿರಿ ಜಿಲ್ಲೆಯಲ್ಲಿ ರಂಗೋಲಿ ಕಲೆ ರಚನೆಯಾಗುತ್ತ ಶಾಲಾ, ಕಾಲೇಜು, ಮಕ್ಕಳ ಪ್ರತಿಭೆ, ಕೌಶಲ್ಯದಿಂದ ಮತ್ತಷ್ಟು ಗಂಭೀರವಾಗಿ ಹೊರಹೊಮ್ಮಲಿದೆ.

**ಧಾರ್ಮಿಕ ಹಿನ್ನೆಲೆಯ ಜನಪದ ಚಿತ್ರಕಲೆ:**

ನಮ್ಮ ಹಿಂದೂ ಧರ್ಮದ ಆಚರಣೆಯ ಹಲವು ಪದ್ಧತಿಗಳಲ್ಲಿ ಜನಪದರು ಚಿತ್ರಗಳನ್ನು ರಚಿಸುತ್ತಾರೆ. ಇಂತಹ ಚಿತ್ರಗಳು ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ಹಬ್ಬ ಹರಿದಿನಗಳಲ್ಲಿ ಜಾತ್ರೆಯ ನಿಮಿತ್ತ ಹುಣ್ಣಿಮೆ, ಮದುವೆ ಹೀಗೆ ಅನೇಕ ಸಂದರ್ಭಗಳಲ್ಲಿ ಧಾರ್ಮಿಕತೆಯನ್ನು ಸಾರುವ ಚಿತ್ರಗಳು ರಚನೆಯಾಗುತ್ತವೆ. ಕೆಲವು ಈ ಕೆಳಗಿನಂತೆ ಸೂಚಿಸಲಾಗಿದೆ.

* ಹಬ್ಬ ಬಂತೆಂದರೆ ಗೋಡೆಗೆ ಯಂಡಿರಾಡಿ ಸಾರಿಸಿ ಗೋಡೆಯ ತಳಬದಿಯಲ್ಲಿ ಹಲವು ಪಟ್ಟಿಕೆಯ ವಿವಿಧ ವಿನ್ಯಾಸಗಳಿಂದ ಚಿತ್ರ ರಚನೆ, ಮಾಡಲಾಗುತ್ತದೆ.
* ಬಾಗಿಲಿಗೆ (ವಾರ್‌ನೆಸ್) ಬಣ್ಣ ಲೇಪಿಸಿ ಅದರ ಮೇಲೆ ಮೂರು ಬೆರಳಿನ ವಿಭೂತಿ ನಾಮ (ಐದು ಬಾರಿ ಬರೆದು) ಪಾಂಡವರು ಎಂಬ ಸಾಂಕೇತಿಕ ಬಿಳಿನಾಮದ ಮಧ್ಯೆ ಕುಂಕುಮವನ್ನು ಹಚ್ಚಿ ಅಲಂಕರಿಸಲಾಗಿರುತ್ತದೆ ಮತ್ತು ಪೂಜೆ ಮಾಡಲಾಗಿರುತ್ತದೆ.
* ಅಲ್ಲದೇ ಹೊಸ್ತಿಲ, ಬಾಗಿಲ ಪಟ್ಟಿಯ ತುಂಬ, ಚುಕಿಯ ವಿವಿಧ ಹೂ, ಎಲೆಗಳನ್ನು ರಚಿಸಲಾಗಿರುತ್ತದೆ.
* ಬಾಗಿಲ ಎರಡು ಬದಿಯ ಸಣ್ಣ ಮಾಡಗಳಿಗೆ ವರ್ಣ ರೇಖೆಗಳಿಂದ ಚಿತ್ರ ರಚಿಸಿ ಶುಭ-ಲಾಭ ಮತ್ತು ಶ್ರೀಕಾರವನ್ನು ಬರೆಯಲಾಗುತ್ತದೆ.
* ಹಿಂದೂ ಧರ್ಮದ ಸಂಪ್ರದಾಯದಂತೆ ಮದುವೆಗಳಲ್ಲಿ ಮದುಮಕ್ಕಳು ಕೂಡುವ ಶಾಸಿಕಟ್ಟೆಯ ಮೇಲೆ ಚಿತ್ರರಚನೆ ಮಾಡಲಾಗುತ್ತದೆ. ಅಲ್ಲದೇ ಐರಾಣ ಕೊಡದ ಮೇಲೆ ಎಲೆಗಳ ಸಾಲು ಚಿತ್ರಗಳಿಂದ ಅಲಂಕಾರಿಕವಾಗಿರುತ್ತದೆ.
* ರೈತನ ವ್ಯವಸಾಯ ಉಪಕರಣಗಳಿಗೆ ಸೂರ್ಯ-ಚಂದ್ರರ ಚಿತ್ರ ಮತ್ತು ಹಲವು ತಮಗೆ ಇಷ್ಟ ಬಂದರೆ ಚಿತ್ರಗಳನ್ನು ರಚಿಸಿರುತ್ತಾರೆ.

* ಕಾರಹುಣ್ಣಿಮೆ, ಹಬ್ಬದಲ್ಲಿ ಎತ್ತಿನ ಮೈತುಂಬ (ಉಳ್ಳಾಗಡ್ಡಿ, ಸೌತೆಕಾಯಿ ಸೇರಿದಂತೆ ಹಲವು ತರಕಾರಿಗಳಿಂದ) ವಿವಿಧ ಐದು, ಆರು ಹತ್ತು ದಳದ ಹೂವಿನ ಚಿತ್ರವನ್ನು ರಚಿಸಿ ಎತ್ತಿನ ಮೈತುಂಬ ವರ್ಣಗಳಿಂದ ಅಲಂಕರಿಸುತ್ತಾರೆ.
* ದೀಪಾವಳಿ, ಯುಗಾದಿ, ಸೀಗೆಹುಣ್ಣಿಮೆ, ನಾಗರಪಂಚಮಿ, ಹಂಪಿ ಹುಣ್ಣಿಮೆ, ಗೌರಿಹುಣ್ಣಿಮೆ, ಗಣೇಶ ಚೌತಿ, ಮಣ್ಣೆತ್ತಿನ ಅಮವಾಸೆ ಸೇರಿದಂತೆ ಹಲವಾರು ಹಬ್ಬ ಹರಿದಿನಗಳಲ್ಲಿ ಜನಪದರ ಚಿತ್ರಕಲೆ ಹುಟ್ಟಿಕೊಳ್ಳುತ್ತದೆ.

**ಕಸೂತಿ ಚಿತ್ರಕಲೆ:**

ವಸ್ತ್ರಕಲೆಯ ಒಂದು ಕಲಾತ್ಮಕ ಅಂಗ ಕಸೂತಿ. ಕರ್ನಾಟಕದಲ್ಲಿ ಕಸೂತಿ ಎಂದು ಕರೆಯಿಸಿಕೊಳ್ಳುವ ಈ ಕಲೆಗೆ ಪಂಜಾಬದಲ್ಲಿ 'ಪುಲ್ಕರಿ' ಗುಜರಾತದಲ್ಲಿ 'ಕಥಿ' ಓರಿಸ್ಸಾದಲ್ಲಲಿ 'ಪುರಿ' ಉತ್ತರ ಪ್ರದೇಶದಲ್ಲಿ 'ಚಿಕನ್', ಕಾಶ್ಮೀರದಲ್ಲಿ 'ಕಸೀದಾ' ಮಣಿಪುರದಲ್ಲಿ 'ಪಾನೈಕ್' ಹಿಮಾಚಲ ಪ್ರದೇಶದಲ್ಲಿ 'ಛಂಬಾ' ಸಿಂಧ ಪ್ರಾಂತ್ಯದಲ್ಲಿ 'ಕಚ್' ಲಖನೌದಲ್ಲಿ 'ಚಿಕನ್‌ಕಾರಿ' ಮಹಾರಾಷ್ಟ್ರದಲ್ಲಿ 'ಕಶೀದಾ', 'ಕುಸುದಾ' ಪರ್ಷಿಯನ್ ಮತ್ತು ಹಿಂದಿಯಲ್ಲಿ 'ಕರ್ಶಿದಹ' ಎಂದು ಪ್ರಾದೇಶಿಕವಾಗಿ ಇದಕ್ಕೆ ಬೇರೆ ಬೇರೆ ಹೆಸರುಗಳಿರುತ್ತವೆ. ಕಸೂತಿ ಎಂದರೆ ಬಣ್ಣದ ದಾರಗಳಿಂದ ಬಟ್ಟೆಗಳಿಗೆ ಮಾಡುವ ಹೆಣಿಗೆಯ ಅಲಂಕಾರವೆಂಬ ಅರ್ಥವಿದೆ. ವಸ್ತ್ರದ ಮೇಲೆ ವಿರಳವಾಗಿ ಚರ್ಮ, ಇತರ ವಸ್ತುಗಳ ಮೇಲೆ ಸೂಜಿ ದಾರಗಳಿಂದ ಹೆಣೆದು ಮಾಡಿದ ಅಲಂಕಾರವನ್ನೇ ಕಸೂತಿ ಎನ್ನಬಹುದು.[೯] ಈ ಕಲೆಯು ಸಾಮಾನ್ಯವಾಗಿ ಯಾದಗಿರಿ ಜಿಲ್ಲೆಯಲ್ಲಿ ಇರುವುದು ಕಂಡುಬರುತ್ತದೆ.

**ಕಸೂತಿ ಚಿತ್ರಕಲೆ ಹಾಕುವ ವಿಧಾನ:**

ಯಾದಗಿರಿ ಜಿಲ್ಲೆಯಲ್ಲಿ ಕಸೂತಿಯನ್ನು ಹಾಕುವುದರಲ್ಲಿ ಮುಖ್ಯವಾಗಿ ಎರಡು ವಿಧಾನಗಳು. ೧. ಕೈ ಕಸೂತಿ, ೨. ಯಂತ್ರದ ಕಸೂತಿ.

**ಕಸೂತಿ ಚಿತ್ರಕಲೆ ರಚನಾ ಸಾಮಗ್ರಿಗಳು:** ಸೂಜಿ, ದಾರ, ಕತ್ತರಿ, ಕಟ್ಟಿಗೆಯ ರಿಂಗು, ವಿವಿಧ ಬಣ್ಣದ ದಾರದ ಹುಂಡಿ, (ಹುಲನ್‌ದಾರ, ರೇಷ್ಮೆ ದಾರ, ಖಾದಿದಾರ).

**ಕಸೂತಿ ಚಿತ್ರ ರಚನೆಗೊಳ್ಳುವುದು:** ಬಾಗಿಲ ಪರದೆ, ಕೈಚೀಲ, ಬಾಗಿಲ ಎಡ-ಬಲ, ಭಾಗಗಳಲ್ಲಿ ವಿವಿಧ ಚಿತ್ರವಿನ್ಯಾಸ, ದಿನನಿತ್ಯ ಧರಿಸುವ ಉಡುಪುಗಳ ಮೇಲೆ, ನೈವಿಧ್ಯ ತಟ್ಟೆಯ ಮುಚ್ಚಳಿಕೆ ಪರದೆ ಹೀಗೆ ಹಲವು ವಸ್ತುಗಳಲ್ಲಿ ಕಸೂತಿಕಲೆ ರಚನೆಯಾಗುತ್ತದೆ.

* ಕಸೂತಿ ಚಿತ್ರರಚನೆಯ ಹಲವು ಪ್ರಕಾರ: ೧. ಧಾರ್ಮಿಕ ಹಿನ್ನೆಲೆ, ೨. ಸಾಮಾಜಿಕ ಹಿನ್ನೆಲೆ, ೩. ಸೌಂದರ್ಯ ಮೂಲ, ೪. ಪೌರಾಣಿಕ ೫. ಸ್ವ ಇಚ್ಛೆಯ ಪ್ರಕಾರ ಹಲವು ವಿಧಗಳಲ್ಲಿ ಕಸೂತಿ ಕಲೆ ಹುಟ್ಟಿಕೊಂಡಿವೆ.

*** ಕಸೂತಿ ಚಿತ್ರ ವಿನ್ಯಾಸಗಳು:**

ಲಕ್ಷ್ಮೀ, ಸರಸ್ವತಿ, ಗಣೇಶ, ನಿಸರ್ಗ ಚಿತ್ರ, ಹೂ–ಎಲೆ, ಹಣ್ಣು, ಪ್ರಾಣಿ–ಪಕ್ಷಿ, ರಾಷ್ಟ್ರನಾಯಕರ ಭಾವಚಿತ್ರ, ಹಲವರು ತನ್ನ ಪ್ರೀಯರ ಹೆಸರು, ದೇವರ ಹೆಸರು, ಹೀಗೆ ಹಲವಾರು ನೆಲೆಯ ಹಿನ್ನೆಲೆಯಾಗಿ ಚಿತ್ರಗಳನ್ನು ರಚಿಸಿರುತ್ತಾರೆ.

*** ಕಸೂತಿ ಕಲೆಯಲ್ಲಿ ನೇಯ್ಗೆ ಚಿತ್ರಕಲೆ:**

ನೇಯ್ಗೆ ಕಲೆಯು ಯಾದಗಿರಿ ಜಿಲ್ಲೆಯಲ್ಲಿ ಹಲವೆಡೆ ಕಾಣುತ್ತದೆ. ಸುರಪುರ, ಶಹಾಪುರ, ಯಾದಗಿರಿ ತಾಲೂಕುಗಳಲ್ಲಿ ಹಲವು ಮನೆಗಳಲ್ಲಿ ಸಾಂಪ್ರದಾಯಿಕ ಸೀರೆ ಮತ್ತು ಕಂಬಳಿ ನೇಯ್ಗೆ ಕಾಯಕದಲ್ಲಿ ತೊಡಗಿದ್ದಾರೆ. ಸುರಪುರ ಭಾಗದ ಹಲವು ಗ್ರಾಮಗಳಾದ ರುಕುಮಪೇಟೆ, ರಂಗಂಪೇಟೆ, ಹಳ್ಳಿಗಳಲ್ಲಿ ತಾಳಮಂಡಲ, ಮೋತಿಚುರಿ ಇತ್ಯಾದಿ ಹೆಸರುಗಳುಳ್ಳ ಸೀರೆಗಳನ್ನು ನೇಯಲಾಗುತ್ತಿತ್ತು.[೧೦] ಈ ಸೀರೆಗಳಲ್ಲಿ ಸುರಪುರ ಗರುಡಾದ್ರಿ ಕಲೆಯ ಕೆಲವು ಪ್ರಭಾವಳಿಗಳು ಕಂಡುಬರುತ್ತವೆ.

*** ಸಮೂಹ ಜನಪದ ಚಿತ್ರಕಲೆ:** 

ಈಗಾಗಲೇ ವಿವರಿಸಿದ ಹಲವು ಪ್ರಕಾರದ ಜನಪದ ಚಿತ್ರಕಲೆಗಳನ್ನು ಹೊರತುಪಡಿಸಿ ಇನ್ನೂ ಕೆಲವು ಜನಪದ ಕಲೆಯ ಅಭಿವ್ಯಕ್ತಿ ಈ ಕೆಳಗಿನಂತೆ ರೂಪಗೊಂಡಿವೆ.

* ಮದರಂಗಿ ಕಲೆ, ಜಾತಕ ಹೊತ್ತಿಗೆಯೊಳಗಿನ ಚಿತ್ರಕಲೆ, ಗಿಳಿ ಶಕುನದ ಕಲೆ, ಜನಪದ ಶಿಲ್ಪಗಳಾದ ದುರುಗವ್ವ, ಮರಗವ್ವ, ಹುಲಿಗೆವ್ವ ಕೆಂಚವ್ವ, ಹೀಗೆ ಹಲವಾರು ಗ್ರಾಮದೇವತೆಗಳ ಶಿಲ್ಪದ ಮೇಲೆ ಜನಪದರ ವರ್ಣವಿನ್ಯಾಸ, ಚಇತ್ರಕಲೆ, ಬುಡಬುಡಿಕೆ, ಹಗಲುವೇಷಗಾರರ ಕಲೆ, ಕಂಬಾರರ ಕಬ್ಬಿಣದ ಮೇಲಿನ ಚಿತ್ರಕಲೆ, ಕುಂಬಾರರ ಮಡಿಕೆ ಮೇಲಿನ ಚಿತ್ರಕಲೆ, ರೌತಿ ಚಿತ್ರಕಲೆ, ಲಂಬಾಣಿ ಸಮುದಾಯದ ಕರಕುಶಲ ಕಲೆಗಳಲ್ಲಿನ ಚಿತ್ರಕಲೆ, ಕೊರವರ ಬುಟ್ಟಿ ಮೇಲಿನ ಚಿತ್ರಕಲೆ, ಚರ್ಮದ ಮೇಲಿನ (ತೊಗಲುಗೊಂಬೆ) ಚಿತ್ರಕಲೆ ಅಭಿವ್ಯಕ್ತಿಗೊಂಡಿದೆ. ಅವುಗಳ ಹುಟ್ಟುವಿಕೆ, ಅರ್ಥ, ಸ್ವರೂಪ, ವಿಧಾನ, ತಂತ್ರ, ಶೈಲಿ, ಆಕಾರ ಎಲ್ಲವೂ ಆಯಾ ಪ್ರಕಾರದ ಹಿನ್ನೆಲೆಯಾಗಿ ರೂಪಗೊಂಡಿರುತ್ತದೆ.

**ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆಯ ಕೆಲವು ಪ್ರಮುಖ ಲಕ್ಷಣಗಳು:**

* ಯಾದಗಿರಿ ಜಿಲ್ಲೆಯಲ್ಲಿ ಆಡುವ ಬಯಲಾಟಗಳಲ್ಲಿ ಚಿತ್ರಕಲೆಯ ಪಾತ್ರ ಬಹುಮುಖ್ಯವಾಗಿದೆ.

ಪ್ರಮುಖ ಗ್ರಾಮಗಳು, ಅನಕಸೂರು, ಕುರಿಹಾಳ, ಕೊಂಕಲ್, ಗೊಂದೇನೂರು, ಕೆಲವು ತಾಂಡಗಳು.

* ಹಚ್ಚೆ ಚಿತ್ರಕಲೆ ಲಂಬಾಣಿ ಸಮುದಾಯ ಸೇರಿದಂತೆ ಹಲವು ಗ್ರಾಮೀಣ ಜನರ ಮೈಮೇಲೆ ಹೆಚ್ಚಾಗಿ ಕಂಡುಬರುತ್ತದೆ.

* ಹಚ್ಚೆ ಕಲೆ ಹೆಚ್ಚಾಗಿ ಧಾರ್ಮಿಕ ಮತ್ತು ಸ್ನೇಹ ವಾತ್ಸಲ್ಯದಿಂದ ರಚಿಸಿಕೊಂಡಿದ್ದು ವಿಶೇಷವಾಗಿರುವುದು.

* ಹಚ್ಚೆ ಹಾಕುವವರು ಮೀನುಗಾರ ಸಮುದಾಯದವರು.

* ರಂಗೋಲಿ ಕಲೆಯು ಹಬ್ಬ, ಹರಿದಿನಗಳಲ್ಲಿ ಹೆಚ್ಚು ಹಾಕುತ್ತಾರೆ. ಮತ್ತು ಶಾಲೆ, ಕಾಲೇಜು ವಿದ್ಯಾರ್ಥಿಗಳು ಆಗಾಗ ಹಾಕುವುದು ಕಂಡುಬರುತ್ತದೆ.

* ಈ ಜಿಲ್ಲೆಯಲ್ಲಿ ಮದುವೆ ಸಮಾರಂಭಗಳಲ್ಲಲಿ ಶಾಸಿಕಟ್ಟೆ ಚಿತ್ತಾರ, ಕೊಡದ ಮೇಲೆ ಚಿತ್ರ ರಚಿಸುವುದು ತುಂಬಾ ವಿಶೇಷವಾದದ್ದು.

* ಗ್ರಾಮದೇವತೆಗಳ ಆಚರಣೆ ಪದ್ಧತಿಯಲ್ಲಿ (ಅಂದ್ರದೊಳಗಿನ ಚಿತ್ರ) ಮಂಡಲ ಚಿತ್ರ ಬರೆಯುವುದು ಗಮನಾರ್ಹ.

* ರೈತರ ವ್ಯವಸಾಯ ಉಪಕರಣಗಳಿಗೆ ಚಿತ್ರಗಳ ರಚಿಸುವಿಕೆ ಕಾಣಬಹುದಾಗಿದೆ.

* ಹಬ್ಬ, ಜಾತ್ರೆ, ಮದುವೆ, ಇನ್ನಿತರ ಸಮಾರಂಭಗಳಲ್ಲಿ ಮದರಂಗಿ (ಮೆಂದಿ) ಕಲೆ ರಚನೆಯಾಗುತ್ತದೆ.

ಹೀಗೆ ಹಲವಾರು ರೀತಿಯ ಲಕ್ಷಣಗಳನ್ನು ತಿಳಿಸುವ ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆ ಆಕರ್ಷಕವಾಗಿದೆ.

**ಟಿಪ್ಪಣಿಗಳು:**

೧. ಕರ್ನಾಟಕದ ಜನಪದ ಚಿತ್ರಕಲೆ, ಡಾ. ಎಸ್.ಸಿ.ಪಾಟೀಲ, ಪು. ೧೯.

೨. ಅದೇ, ನೋಡಿ, ಪು. ೨೦.

೩. ಅದೇ, ನೋಡಿ, ಪು. ೨೩

೪. ಅದೇ, ನೋಡಿ, ಪು. ೭೧

೫. ಅದೇ, ನೋಡಿ, ಪು. ೮೫–೮೬.

೬. ಪ್ರಜಾವಾಣಿ ವರದಿ, ದಿನಾಂಕ: ೧೯, ಮಾರ್ಚ್, ೨೦೧೩, ಪು. ೧೦.

೭. ಕರ್ನಾಟಕದ ಜನಪದ ಚಿತ್ರಕಲೆ, ಡಾ. ಎಸ್.ಸಿ.ಪಾಟೀಲ, ಪು. ೨೧೯–೨೨೧.

೮. ಅದೇ, ನೋಡಿ, ಪು. ೨೫೦.

೯. ಅದೇ, ನೋಡಿ, ಪು. ೧೪೧-೧೪೨.

೧೦. ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಪು. ೧೫.

# ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆ



ಜನಪದರ ಗುಡಿಸಲು



ಜನಪದರು ರಚಿಸಿದ ಗೋಡೆಯ ಮೇಲಿನ ಭಿತ್ತಿಚಿತ್ರಗಳು





ದೇವರ ಗುಡಿಯೊಳಗೆ
ಜನಪದರು ರಚಿಸಿದ ಗೋಡೆಯ
ಮೇಲಿನ ಭಿತ್ತಿಚಿತ್ರಗಳು







ಹಚ್ಚೆ ಹಾಕುವ ಸಾಮಗ್ರಿಗಳು



ಹಚ್ಚೆ ಹಾಕುವ ಮಹಿಳೆ



ಹಚ್ಚೆ ಹಾಕುವವರೊಂದಿಗೆ
ಸಂದರ್ಶನ





ಹಚ್ಚೆಯ ವಿವಿಧ ವಿನ್ಯಾಸಗಳು





## ಅಧ್ಯಾಯ ೫

# ಯಾದಗಿರಿ ಜಿಲ್ಲೆಯ ಭಿತ್ತಿ ಚಿತ್ರಕಲೆ

ಭಿತ್ತಿ ಚಿತ್ರವನ್ನು ಆಂಗ್ಲಭಾಷೆಯಲ್ಲಿ 'mural paintingo' ಎಂದು ಕರೆಯಲಾಗಿದೆ. 'mural' ಎನ್ನುವ ಪದವು ಲ್ಯಾಟಿನ್ ಭಾಷೆಯ ಮ್ಯೂರಸ್ (murus) ನಿಂದ ಬಂದಿದೆ. ಮ್ಯೂರಸ್‌ದ ಅರ್ಥ ಗೋಡೆ, (wall) ಎಂದಾಗುವುದು, ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ, ಕೊರೆದು ಅಂಟಿಸಿದ ಚಿತ್ರಗಳ, 'mural' ವ್ಯಾಪ್ತಿಯಲ್ಲಿ ಬರುತ್ತವೆ. ಎಂದು ಕೇಂಬ್ರಿಡ್ಜ್ ವಿಶ್ವಕೋಶವು ತಿಳಿಸುತ್ತದೆ. ಗೋಡೆ ಮತ್ತು ಮೇಲ್ಛಾವಣಿಗಳನ್ನು ವರ್ಣಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು 'ಆಕ್ಸ್‌ಫರ್ಡ್ ಶಬ್ದಕೋಶ'ದಲ್ಲಿ ಹೇಳಲಾಗಿದೆ. ಗೋಡೆಗಳು ಮೇಲ್ಛಾವಣಿಗಳು ಮತ್ತು ಗುಹೆಗಳನ್ನು ಫ್ರೆಸ್ಕೊ, ಸೆಕ್ಕೊ, ತೈಲವರ್ಣ, ಟೆಂಪರಾ, ಇಲ್ಲವೆ ಎನ್‌ಕ್ಯಾಸ್ಟಿಕ್ ವಿಧಾನಗಳಿಂದ ಚಿತ್ರಿಸಿ ಅಲಂಕರಿಸುವ ವಿಧಾನವನ್ನು ಸಹ ಭಿತ್ತಿಚಿತ್ರಕಲೆ ಎಂದು 'ವೆಬ್‌ಸ್ಟರ್ ನ್ಯೂವರ್ಲ್ಡ್ ಸೈಕ್ಲೋಪೀಡಿಯಾ' ಪರಿಗಣಿಸಿದೆ, ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು (ಸೂಡುಬಿಲ್ಲೆ) ಅಂಟಿಸಿ ರೂಪಿಸಿದ ಮೊಸಾಯಿಕ ಚಿತ್ರಗಳೂ ಭಿತ್ತಿ ಚಿತ್ರಗಳ ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಬ್ರಿಟಾನಿಕಾ ಎನ್‌ಸೈಕೋಪೀಡಿಯಾ ಹೇಳುತ್ತದೆ. ಕನ್ನಡ ಜಾನಪದ ವಿಶ್ವಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿದರೆ, ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಭಿತ್ತಿ ಎಂಬುದಕ್ಕೆ ಗೋಡೆ ಕುಡ್ಯ, ಮೂಲ ತಳ ಹಿನ್ನಲೆ ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ, ಗೋಡೆ ಮೊದಲಾದ ಸಾಧನಗಳು ಎಂಬ ಅರ್ಥಗಳನ್ನು ಕೊಟ್ಟಿದೆ. ಹಾಗೆಯೇ ಪ್ರಾಚೀನ ಶಿಲ್ಪ ಶಾಸ್ತ್ರಗಳು ಚಿತ್ರ ಬರೆಯಲಾಗುವ ಮೂಲಾಧಾರವಾದ ಮತ್ತು ಚಿತ್ರಣಕ್ಕಾಗಿ ಆಧಾರದ ಮೇಲೆ ಲೇಪಿಸಲಾಗುವ ಗಾರೆ ಲೇಪನ ಎರಡಕ್ಕೂ ಭಿತ್ತಿ ಎಂದೇ ಕರೆದಿವೆ. ಗೋಡೆಯ ಮೇಲೆ ಲೇಪಿಸುವಾಗುವ ಗಾರೆ ಲೇಪನವನ್ನು ಭಿತ್ತಿ ಎಂದು ಪರಿಗಣಿಸಿದಾಗ ಗಾರೆ ಲೇಪನದ ಮೇಲೆ ರಚನೆಗೊಂಡ ಚಿತ್ರಗಳನ್ನು ಭಿತ್ತಿಚಿತ್ರ ಎಂದು

ಹೇಳಬೇಕಾಗುವುದು, ವಿಶಾಲಾರ್ಥದಲ್ಲಿ ಈ ಲೇಪನವನ್ನು ಗೋಡೆಯ ಮೇಲೆ ಲೇಪಿಸುವಾಗುವ ಗಾರೆ ಮಿಶ್ರಣಕ್ಕೆ ಸೀಮಿತಗೊಳಿಸದೇ ಚಿತ್ರರಚನೆಯ ಪೂರ್ವದ ಯಾವುದೇ ಹಿನ್ನಲೆಯ ಲೇಪನಕ್ಕೂ ಅನ್ವಯಿಸಬಹುದಾಗಿದೆ.

ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಭಿತ್ತಿ ಚಿತ್ರಗಳ ರಚನೆ ಕುರಿತಂತೆ ಪ್ರಾಸಂಗಿಕ ವಿವರಗಳನ್ನು ನೀಡಿರುವುದು ಕಾಣಬಹುದು. ಚಿತ್ರಕ್ಕೆ ಆಯ್ಕೆ ಮಾಡಿಕೊಳ್ಳುವ ಗೋಡೆಯ ನುಣುಪಾಗಿಯೂ, ಸಮತಲವಾಗಿಯೂ ಇದ್ದು ಬಿರುಕುಗಳು ಇರಬಾರದು, ಗೋಡೆ ಒಣಗಿದ ಮೇಲೆ ಬಿಳಿಯ ಮಣ್ಣು ಮತ್ತು ವಜ್ರ (ಜಿಲೋಟಿನ್)ವನ್ನು ಬೆರೆಸಿ ಒಂದರ ಮೇಲೊಂದರಂತೆ ಒಣಗಿದ ಹಾಗೆ ಮೂರು ಬಾರಿ ಹಾಕಬೇಕು. ನಂತರ ಶಂಖಚೂರ್ಣ, ಕಲ್ಲುಸಕ್ಕರೆಯ ನಯವಾದ ಪುಡಿಯನ್ನು ವಜ್ರದೊಂದಿಗೆ ಬೆರೆಸಿ ಪದರ–ಪದರವಾಗಿ ಹಾಕಬೇಕು. ಆ ಮೇಲೆ ನೀಲಗಿರಿಯಲ್ಲಿ ಸಿಗುವ 'ನಗೆ' ಎಂಬ ಬಿಳಿಯ ಮಣ್ಣನ್ನು ನಯವಾಗಿ ಪುಡಿಪುಡಿ ವಜ್ರದೊಂದಿಗೆ ಸೇರಿಸಿ ಕೈಯಿಂದ ಭಿತ್ತಿಗೆ ಬಳಿಯಬೇಕು, ಎಂದು 'ಅಭಿಲಷಿತಾರ್ಥ ಚಿಂತಾಮಣಿ' ತಿಳಿಸುತ್ತದೆ. ಹಾಗೆಯೇ 'ವಿಷ್ಣುಧರ್ಮೋತ್ತರ ಪುರಾಣ'ವು ಈ ಮೇಲಿನ ವಿವರವನ್ನೇ ಇನ್ನೂ ವಿಸ್ತಾರವಾಗಿ ವಿವರಿಸುತ್ತದೆ. ಮೂರು ಬಗೆಯ ಇಟ್ಟಿಗೆಯ ಪುಡಿಯನ್ನು ಸಮಪ್ರಮಾಣದಲ್ಲಿ ಸೇರಿಸಿ ಮೂರರಷ್ಟು ಜೇಡಿಮಣ್ಣಿನೊಂದಿಗೆ ಗುಗ್ಗುಲು, ಜೇನುಮೇಣ, ಅತಿಮದುರ, ಮುರು ಬೆಲ್ಲ, ಕುಸುಂಭಗಳನ್ನು ಎಣ್ಣೆಯಲ್ಲಿ ಸೇರಿಸಿ ಮಿಶ್ರಣ ಮಾಡಬೇಕು, ಅದಕ್ಕೆ ಮುಕ್ಕಾಲು ಭಾಗ ಸುಟ್ಟಿರುವ ಸುಣ್ಣದೊಂದಿಗೆ ಬಿಲ್ವಪತ್ರೆ ಕಾಯಿಯ ಮೇಣ, ಅರೆದ ಉದ್ದಿನ ಹಿಟ್ಟನ್ನು ಸೇರಿಸಿ ಎಲ್ಲವನ್ನ ತಿಂಗಳಕಾಲ ಜಿಡ್ಡು ಮಿಶ್ರಿತ ನೀರಿನಿಂದ ಸೇಚನ ಮಾಡಿ, ಚಿತ್ರರಚಿಸುವ ಗೋಡೆಗೆ ಸಮನಾಗಿ ಹಚ್ಚಬೇಕು, ಒಣಗಿದಂತೆಲ್ಲ. ಪುನಃ ಪುನಃ ಸರ್ಜರಸ ಮತ್ತು ಎಣ್ಣೆಯಿಂದ ಮಿಶ್ರಣ ಮಾಡಿದ ಮಣ್ಣಿನ ಲೇಪನ ಮಾಡುತ್ತಿರಬೇಕು, ಅಲ್ಲದೇ ಆಗಾಗ ಹಾಲು ಎರಚಿ ತೊಳೆಯುತ್ತಿರಬೇಕು, ಈ ಬಗೆಯ ಲೇಪನದಿಂದ ಭಿತ್ತಿಯು ನೂರಾರು ವರ್ಷಗಳ ಕಾಲ ಉಳಿಯುತ್ತದೆ ಎಂದು ಹೇಳಿದೆ, ಪ್ರಾಯಶಃ ಇಂದಿಗೂ ಉಳಿದು ಬಂದಿರುವ ಕೆಲವು ಪ್ರಾಚೀನ ಚಿತ್ರಗಳ ಭಿತ್ತಿಯನ್ನು ಇದೇ ರೀತಿಯಾಗಿ ಮಾಡಿದ್ದಿರಬೇಕು.

ಈ ಮೇಲಿನ ವಿವರಗಳ ಪ್ರಕಾರ ಭಿತ್ತಿಚಿತ್ರಕಲೆ ಎಂದರೆ ಗೋಡೆ, ಮೇಲ್ಛಾವಣಿ ಅಥವಾ ಕಟ್ಟಡದ ಯಾವುದೇ ಭಾಗವನ್ನು ವರ್ಣಚಿತ್ರದಿಂದ ಮತ್ತು ಉಬ್ಬು ಇಲ್ಲವೆ ತಗ್ಗು ಚಿತ್ರ ಇಲ್ಲವೇ ಮೊಸಾಯಿಕನಂತಹ ಚಿತ್ರಗಳಿಂದ ಅಲಂಕರಿಸುವ ವಿಧಾನವೆಂದು ತಿಳಿಯಲಾಯಿತು. ಹಾಗೆಯೇ ಭಿತ್ತಿ ಸಿದ್ಧತೆಯಲ್ಲಿ ೧. ಮಣ್ಣಿನ ಭಿತ್ತಿ, ೨. ಗಾರೆಭಿತ್ತಿ, ಎಂಬ ಎರಡು ಪ್ರಕಾರದ ಭಿತ್ತಿಗಳಲ್ಲಿ ಚಿತ್ರಗಳನ್ನು ಚಿತ್ರಿಸಲಾಗಿದೆ.

## ೧. ಮಣ್ಣಿನ ಭಿತ್ತಿ (Mud Plaster):

ಮಣ್ಣಿನ ಭಿತ್ತಿ ರಚಿಸುವ ವಿಧಾನವು ಕ್ರಿ.ಪೂ.೩೫೦೦ ವರ್ಷಗಳಿಗೂ ಪೂರ್ವದಲ್ಲೇ ಈಜಿಪ್ತನಲ್ಲಿ ಬಳಸಲಾಗಿದ್ದು, ಈ ವಿಧಾನವು ಕ್ರಿ.ಶ. ೬ನೇ ಶತಮಾನವರೆಗೂ ಬಳಕೆಯಲ್ಲಿತ್ತು ಎಂದು ಜಯಂತ ಚಕ್ರವರ್ತಿಯವರು ಅಭಿಪ್ರಾಯಪಡುತ್ತಾರೆ. ಮಣ್ಣಿನ ಭಿತ್ತಿ ನಿರ್ಮಾಣಕ್ಕೆ ಜಾಂಗಲ, ಅನುರೂಪ ಹಾಗೂ ಸಮಿಶ್ರ ಎಂಬ ಮೂರು ಪ್ರಕಾರದ ಮಣ್ಣನ್ನು ಉಪಯೋಗಿಸಬಹುದೆಂದು ಕಾಶ್ಯಪ ಶಿಲ್ಪಶಾಸ್ತ್ರದಲ್ಲಿ ಹೇಳಿದೆ. ಮಣ್ಣಿನ ಭಿತ್ತಿಯು ಒಂದರ ಮೇಲೊಂದರಂತೆ ಹಲವಾರು ಪದರುಗಳನ್ನು ಹೊಂದಿರುತ್ತದೆ. ತೀರ ಮೇಲಿನ ಪದರು ಅತೀ ತೆಳುವಾಗಿ ನಿರ್ಮಿಸಲಾಗಿರುತ್ತದೆ. ಗೋಡೆಗೆ ಮೆತ್ತಿದ ಮಣ್ಣಿನ ಭಿತ್ತಿಯು ಸೀಳದಂತೆ, ಕಳಚಿ ಬೀಳದಂತೆ ಮಣ್ಣಿನಲ್ಲಿ ಒಣಹುಲ್ಲು ಹೊಟ್ಟು, ಕೂದಲುಗಳಂತಹ ನಾರು ಪದಾರ್ಥಗಳನ್ನು ಸೇರಿಸಲಾಗಿರುತ್ತದೆ. ಈ ನಾರು ಪದಾರ್ಥಗಳ ಮಿಶ್ರಣವು ಗಟ್ಟಿಯಾಗಿ ಕುಳಿತುಕೊಳ್ಳಲು ಸಹಾಯ ಮಾಡುತ್ತದೆ. ಮಣ್ಣಿನ ಭಿತ್ತಿಯು ಅಜಂತಾ, ಬಾಗ್, ಸಿತ್ತನಿವಾಸಲ್, ಮತ್ತಿತರೆ ಕಡೆ ಕಂಡುಬರುತ್ತವೆ. ಸುರಪುರ, ಸಮೀಪದ ರಂಗಂಪೇಟೆಯ ರುದ್ರಸ್ವಾಮಿಮಠ ಹಾಗೂ ಅಣ್ಣಯ್ಯನ ಮಠಗಳಲ್ಲಿನ ಭಿತ್ತಿಚಿತ್ರಗಳು ಮಣ್ಣಿನ ಭಿತ್ತಿಯ ಮೇಲೆ ರಚನೆಗೊಂಡಿವೆ ಎಂದು ಹೇಳಬಹುದು. ಈ ಭಿತ್ತಿಚಿತ್ರಗಳ ಕಾಲ ೧೮೫೦ರ ಸಂದರ್ಭ ಮಧ್ಯಕಾಲೀನ ಸಂದರ್ಭದ ಹೊತ್ತಿಗೆ, ಗಾರೆ ಭಿತ್ತಿಯು ಭಿತ್ತಿಚಿತ್ರ ರಚನೆಗೆ ಹೆಚ್ಚು ಬಳಸಲ್ಪಡುವ ಮಾಧ್ಯಮವಾಗಿತ್ತು. ಆದರೂ ಸುರಪುರ ಸಮೀಪದ ಈ ಎರಡೂ ಮಠಗಳಲ್ಲಿನ ಭಿತ್ತಿ ಚಿತ್ರಗಳು ಮಣ್ಣಿನ ಭಿತ್ತಿಯ ಮೇಲೆ ರಚನೆಗೊಂಡಿರುವುದು ವಿಶೇಷ.

## ಗಾರೆಭಿತ್ತಿ (Mud Plaster):

ಗಾರೆಭಿತ್ತಿ ರಚನೆಯಲ್ಲಿ ಸುಣ್ಣವು ಪ್ರಮುಖ ವಸ್ತು, ಅದರ ಜೊತೆಗೆ ಉಸುಕು, ಕಲ್ಲಿನ ಪುಡಿ, ವಜ್ರಸರಿ ಮುಂತಾದವುಗಳನ್ನು ಉಪಯೋಗಿಸಲಾಗುತ್ತದೆ ಎಂಬುದಾದರೂ ಇವೆಲ್ಲದರ ಜೊತೆಗೆ ಸೇರಿಸುವ ಪೂರಕ ವಸ್ತುಗಳಲ್ಲಿ ಲೋಳಸರವೆಂಬ ಸಸ್ಯದ ರೂಪವನ್ನು ಹೊಂದಿರುತ್ತದೆ. ಮಧ್ಯಯುಗದ ಹೊತ್ತಿಗೆ ಭಾರತದಲ್ಲಿ ಮಣ್ಣಿನಭಿತ್ತಿ ರಚನೆಯು ಕಡಿಮೆಯಾಗಿ ಗಾರೆಭಿತ್ತಿಯ ರಚನೆಯು ಹೆಚ್ಚಾಯಿತು. ಸುರಪುರದ ಹೊಸ ದರ್ಬಾರ್‌ನಲ್ಲಿರುವ ಭಿತ್ತಿ ಚಿತ್ರಗಳು, ಗಾರೆಭಿತ್ತಿಯ ಮೇಲೆ ಚಿತ್ರಿಸಲ್ಪಟ್ಟಿವೆ.

ಪ್ರಾಚೀನ ಕಾಲದಲ್ಲಿ ಭಿತ್ತಿಚಿತ್ರ ರಚನೆಯ ವಿಧಾನಗಳಲ್ಲಿ ಪೂರ್ವಾಂಗ ಮತ್ತು ಉತ್ತರಾಂಗ ಎಂಬ ಎರಡು ವಿಧಾನಗಳನ್ನು ಅನುಸರಿಸಲಾಗುತ್ತಿತ್ತು, ಈ ಪ್ರಕ್ರೀಯೆ ಮಧ್ಯಕಾಲೀನ ಚಿತ್ರಗಳಲ್ಲೂ ಕಾಣಬಹುದಾಗಿದೆ. ಪೂರ್ವಾಂಗದಲ್ಲಿ ಚಿತ್ರಗಳ ಪ್ರಮಾಣ, ಅಳತೆ, ಸೂತ್ರಗಳು, ನವಸ್ಥಾನಗಳು, ಚಿತ್ರದ ಷಡಂಗಗಳು, ಹೀಗೆ ಚಿತ್ರ ರಚನೆಯ ಪೂರ್ವದಲ್ಲಿ ಕಲಾವಿದನು ಗಮನಿಸತಕ್ಕ ಅಂಶಗಳು ಒಳಗೊಳ್ಳುತ್ತವೆ. ಕಲಾವಿದನ ಮಾನಸಿಕ ಸಿದ್ಧತೆ ಇದಾಗಿದ್ದು, ಮುಂದಿನ ಉತ್ತರಾಂಗದ ಕ್ರೀಯೆಗೆ

ಬುನಾದಿಹಾಕುವ ಹಂತವು ಈ ಪೂರ್ವಾಂಗದಲ್ಲಿ ನಡೆಯುತ್ತದೆ. ಪೂರ್ವಾಂಗದಲ್ಲಿ ನಡೆದ ಕ್ರೀಯೆಯ ಮುಂದಿನ ಭಾಗವೇ ಉತ್ತರಾಂಗದಲ್ಲಿರುತ್ತದೆ.

ಭಿತ್ತಿಚಿತ್ರ ರಚನೆಯಲ್ಲಿ ೧. ಫ್ರೆಶ್ಕೋಬಾನ್, ೨. ಫ್ರೆಶ್ಕೊಸೆಕ್ಕೋ, ೩. ಟೆಂಪರಾ, ೪. ಸ್ಕ್ರ್ಯಾಫೀಟೋ, ಎಂದು ನಾಲ್ಕು ವಿಧಗಳಿವೆ. ಕಲಾವಿದರು ಚಿತ್ರ ರಚನೆ ಮಾಡುವಾಗ ಒಂದೇ ಹಂತದಲ್ಲಿ ಚಿತ್ರವನ್ನು ಪೂರ್ಣಗೊಳಿಸದೇ ಒಂದಾದ ಮೇಲೆ ಒಂದರಂತೆ ಹಲವು ಹಂತದಲ್ಲಿ ಅನುಸರಿಸಿ ಚಿತ್ರಪೂರ್ಣಗೊಳಿಸುತ್ತಿದ್ದರು, ಭಿತ್ತಿಚಿತ್ರ ರಚಿಸುವ ಕಲಾವಿದರು. ಅನುಸರಿಸುವ ಚಿತ್ರ ರಚನಾ ಹಂತಗಳು ಯಾವಾಗಲೂ ನಿರ್ಧಿಷ್ಟವಾಗಿ ಹೀಗೇ ಎಂದು ಹೇಳಲು ಬರುವಂತಿರಲಿಲ್ಲ, ಆಯಾ ಕಲಾವಿದರ ಕೌಶಲ್ಯವನ್ನಾಧರಿಸಿ ಬದಲಾಗುತ್ತದೆ.[೧]

ನೂತನ ಯಾದಗಿರಿ ಜಿಲ್ಲೆಯಲ್ಲಿ ಪ್ರಮುಖವಾಗಿ ಕಂಡುಬರುವ ಭಿತ್ತಿಚಿತ್ರನೆಲೆಗಳೆಂದರೆ ಸುರಪುರ ಭಿತ್ತಿಚಿತ್ರಕಲೆ ಮತ್ತು ಇತ್ತೀಚಿನ ಶೋಧನೆಯಲ್ಲಿ ಕಂಡುಬಂದ ಕಾಕಲವಾರ ದೇಶಮುಖ ಸಂಸ್ಥಾನದಲ್ಲಿರುವ ಭಿತ್ತಿಚಿತ್ರಕಲೆ, ಈ ಎರಡು ನೆಲೆಗಳಿಂದ ಯಾದಗಿರಿ ಭಿತ್ತಿಚಿತ್ರಕಲೆಯು ವೈಶಿಷ್ಟತೆಯನ್ನು ಪಡೆಯುತ್ತದೆ.

**ಸುರಪುರ ಚಿತ್ರಕಲೆ**

ಸುರಪುರದ ರಾಜಾ ರಾಘವ ಪಾಮನಾಯಕ ಅವರಿಂದ ಮೊದಲ್ಗೊಂಡು ಕೊನೆಯ ರಾಜಾ ನಾಲ್ವಡಿ ವೆಂಕಟಪ್ಪ ನಾಯಕರ ವರೆಗಿನ ಅವಧಿಯಲ್ಲಿ ಸಂಗೀತ, ಸಾಹಿತ್ಯ ಹಾಗೂ ಚಿತ್ರಕಲೆಗಳಿಂದ ಸುರಪುರ ಸಂಸ್ಥಾನವು ಮಹತ್ವಪೂರ್ಣ ಕೇಂದ್ರವೆನಿಸಿಕೊಂಡಿತ್ತು. ಇದಕ್ಕೆ ಕಾರಣೀಭೂತರಾದ ಅರಸರ ಆಶ್ರಯವನ್ನು ನಾವು ಮರೆಯುವಂತಿಲ್ಲ. ವಿವಿಧ ಶ್ರೇಯೋ ವರ್ಗದ ಪಂಡಿತರು, ಚಿತ್ರಕಲಾವಿದರು, ಸಂಗೀತಗಾರರು ಸಂಸ್ಥಾನದಲ್ಲಿ ಆಶ್ರಯವನ್ನು ಪಡೆದಿದ್ದರು. ಸುರಪುರ ಸಂಸ್ಥಾನದ ಚರಿತ್ರೆಯನ್ನು ನೋಡಿದಾಗ ಇಲ್ಲಿನ ಅರಸರು ಪ್ರಜೆಗಳ ಹಿತಚಿಂತಕರಾಗಿದ್ದರು. ಅಲ್ಲದೇ ಸಾಹಿತ್ಯ ಸಂಗೀತ ಮತ್ತು ಚಿತ್ರಕಲೆಗಳಿಗೆ ಆಶ್ರಯ ನೀಡುವುದರೊಂದಿಗೆ ಕಲಾ ಪೋಶಕರೂ ಎನಿಸಿಕೊಂಡವರು,[೨] ಆಂಧ್ರದ ಮೂಲದವರಾದ 'ವರ್ಮಾ' ಎಂಬ ಮನೆತನದ ಚಿತ್ರಕಲಾವಿದರನ್ನು ಆಹ್ವಾನಿಸಿ ತಮ್ಮ ಸಂಸ್ಥಾನದಲ್ಲಿ ಕಲೆಯ ಉಗಮಕ್ಕೆ ದಾರಿಮಾಡಿಕೊಟ್ಟರು, ಸುರಪುರದ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದಲ್ಲಿನ ಉತ್ಸವ ಮೂರ್ತಿಗಳನ್ನು ಗರುಡಾದ್ರಿ ಬೆನಕಯ್ಯನಿಂದ ನಿರ್ಮಿಸಲ್ಪಟ್ಟಿದ್ದು, ಈ ಕಾಷ್ಠ ಶಿಲ್ಪಗಳಲ್ಲಿ ಗರುಡ ವಾಹನವು ಅತ್ಯಂತ ಸುಂದರವಾಗಿ ಮೂಡಿಬಂದಿದ್ದನ್ನು ಕಂಡು ಅಂದಿನ ಅರಸು ಬೆನಕಯ್ಯನಿಗೆ ವಿಶಿಷ್ಟ ಉಡುಗೊರೆಗಳಿಂದ ಗೌರವಿಸಿ 'ಗರುಡಾದ್ರಿ'ಯೆಂದು ಕರೆದರಂತೆ ಎಂದು ಅರಸನು ಈ ರೀತಿ ಕರೆದನೋ ಅಂದಿನಿಂದ ಈ ಮನೆತನಕ್ಕೆ 'ವರ್ಮಾ'ಎನ್ನುವ ಬದಲು ಗರುಡಾದ್ರಿ ಎಂದು ಕರೆಯಲಾರಂಭಿಸಿದರು.[೩] ಅಂದಿನ ಗರುಡಾದ್ರಿ ಮನೆತನದ ಬೆನಕಯ್ಯ

ಸುಂಗಾರಯ್ಯ, ಅಪ್ಪಯ್ಯ, ವೆಂಕಟರಾಮಯ್ಯ, ಮೊದಲ ಬಾನಯ್ಯ, ಕಮಲಯ್ಯ, ಶೇಷಯ್ಯ, ಎರಡನೇ ಬಾನಯ್ಯ ಹೀಗೆ ಇಡೀ ಮನೆತನವೇ ಕಲೆಯ ಸೃಷ್ಟಿಯಲ್ಲಿ ನಡೆಯಿತು. ಅಂತೆಯೇ ಹಲವಾರು ಕಲಾಕೃತಿಗಳನ್ನು ರಚಿಸಿದರು. ಅವರು ರಚಿಸಿದ ಕಲಾಕೃತಿಗಳು ಹಲವು ವಿಧಗಳಲ್ಲಿ ರೂಪಗೊಂಡಿವೆ. ಅರಸರ ಭಾವಚಿತ್ರಗಳು ಮಠಾಧೀಶರ ಭಾವಚಿತ್ರಗಳು, ಅರಮನೆಗಳಲ್ಲಿ ಮತ್ತು ದೇವಾಲಯಗಳಲ್ಲಿ, ಮಠಗಳಲ್ಲಿ ಭಿತ್ತಿಚಿತ್ರಗಳನ್ನು ರಚಿಸಿದ್ದಾರೆ. ಕಾಗದ ಫಲಕಗಳಲ್ಲಿ ರೇಖೆ ಮತ್ತು ವರ್ಣದಿಂದ ಜೈಮಿನಿಭಾರತ, ಚೆನ್ನಬಸವ ಪುರಾಣಗಳಲ್ಲಿ ಹಸ್ತಪ್ರತಿ ಚಿತ್ರಗಳನ್ನು ರಚಿಸಿದ್ದಾರೆ. ಹೀಗೆ ಹಲವು ಬಗೆಯ ಕಲಾಕೃತಿಗಳನ್ನು ರಚಿಸುವ ಮೂಲಕ ಗರುಡಾದ್ರಿ ಮನೆತನದವರ ಕಲೆ ವಿಶಿಷ್ಟವಾಗಿ ಸ್ವಶೈಲಿಯಿಂದ ಗುರುತಿಸಿಕೊಂಡಿದೆ. ಭಾರತೀಯ ಸಾಂಪ್ರದಾಯಿಕ ಚಿತ್ರಕಲೆಯ ಹಲವು ಶೈಲಿಗಳಲ್ಲಿ ಸುರಪುರ ಸಂಸ್ಥಾನದ ಗರುಡಾದ್ರಿ ಚಿತ್ರಶೈಲಿ ಪ್ರಮುಖವಾದದ್ದು.

**ಸುರಪುರ ಭಿತ್ತಿ ಚಿತ್ರಕಲೆ**

ಸರುಪುರದ ಅರಮನೆ, ಮಠ-ಮಂದಿರಗಳಲ್ಲಿ ಸಾಕಷ್ಟು ಭಿತ್ತಿಚಿತ್ರಗಳು ಕಂಡುಬರುತ್ತವೆ, ಸುರಪುರ ಸಮೀಪದ ರುದ್ರಸ್ವಾಮಿ ಮಠದಲ್ಲಿನ ಭಿತ್ತಿಚಿತ್ರಗಳ ಕಾಲ ಕ್ರಿ.ಶ. ೧೮೫೦ರ ಸಂದರ್ಭ ಎಂದು ಹೇಳಬಹುದು. ಕ್ರಿ.ಶ.೧೮೪೦ರ ದಶಕದಲ್ಲಿ ರಾಜಾ ಕೃಷ್ಣಪ್ಪನಾಯಕನ ಕಾಲದಲ್ಲಿ ಈ ಮಠವು ನಿರ್ಮಾಣಗೊಳ್ಳುತ್ತದೆ. ಈ ಮಠದಲ್ಲಿರುವ ಚಿತ್ರಗಳಲ್ಲಿ ಶ್ರೀಮಠದ ಮೂಲ ಪುರುಷರಾದ ಶ್ರೀರುದ್ರಸ್ವಾಮಿಗಳು ಹಾಗೂ ತರುವಾಯದಲ್ಲಿ ಬಂದಂಥ ಶ್ರೀ ರಾಚೋಟೆಪ್ಪನವರ ಭಾವಚಿತ್ರಗಳು ಚಿತ್ರಿಸಲ್ಪಟ್ಟಿವೆ. ಈ ಎಲ್ಲ ವಿವರಗಳು ಭಿತ್ತಿಚಿತ್ರಗಳ ರಚನಾ ಕಾಲವನ್ನು ನಿರ್ಧರಿಸುತ್ತವೆ. ಈ ಚಿತ್ರಗಳ ರಚನೆಗೆ ಸಿದ್ಧಪಡಿಸಿಕೊಳ್ಳಲಾದ ಭಿತ್ತಿ ಸಿದ್ಧತಾ ಹಾಗೂ ಚಿತ್ರ ರಚನಾ ವಿಧಾನದಲ್ಲಿ ವಿಶೇಷತೆಯೇನೂ ಕಂಡುಬರುವುದಿಲ್ಲ. ಈ ಚಿತ್ರಗಳು ಕೇವಲ ಒಂದು ಶತಮಾನದವರೆಗೆ ಇದ್ದು, ನಂತರದಲ್ಲಿ ಚಿತ್ರಗಳಲ್ಲಿನ ಬಣ್ಣಗಳು ಉದುರಿ ಹೋಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಮಠಗಳಲ್ಲಿನ ಭಿತ್ತಿಚಿತ್ರಗಳು ಪ್ರಾಕೃತಿಕ ಆಪತ್ತಿನಿಂದಲೇ ವಿನಾಶಹೊಂದಿವೆ ಎಂದು ಹೇಳಬಹುದು.

ಸುರಪುರದ ಭಿತ್ತಿಚಿತ್ರಗಳು ಕಂಡುಬರುವುದು ಪ್ರಮುಖವಾಗಿ ೧. ಅರಮನೆಗಳ ಭಿತ್ತಿಯಲ್ಲಿ, ೨. ಮಠಗಳಲ್ಲಿ ೩. ಮಂದಿರಗಳಲ್ಲಿ ೪. ಆಸ್ಥಾನದ ಪ್ರಮುಖರ ಮನೆಗಳಲ್ಲಿ ಒಟ್ಟು ನಾಲ್ಕು ಬಗೆಯಲ್ಲಿ ಕಂಡುಬರುತ್ತವೆ.

**೧. ಅರಮನೆಯ ಭಿತ್ತಿಚಿತ್ರಗಳು:**

ಸುರಪುರ ನಗರದಲ್ಲಿರುವ ಹೊಸ ಅರಮನೆಯಲ್ಲಿ ಶೇಷಶಯನ ವಿಷ್ಣುವಿನ ಚಿತ್ರವಿದ್ದುದು ಕಂಡುಬರುತ್ತದೆ. ಈ ಅರಮನೆಯಲ್ಲಿ ನವೀಕರಣ ಮಾಡಿರುವುದರಿಂದಾಗಿ ಹಲವು ಚಿತ್ರಗಳು ನಾಶವಾಗಿ ಈಗ ನೋಡಲು ವಿಷ್ಣುವಿನ ಚಿತ್ರ ಮಾತ್ರ ನನಗೆ ಲಭ್ಯವಿದೆ. ಈ ಅರಮನೆ ಸುರಪುರದ ಸರಾಫ್ ಬಜಾರದಲ್ಲಿದೆ.

**ಶೇಷಶಯನ ವಿಷ್ಣು ಭಿತ್ತಿಚಿತ್ರ**

ಹೊಸ ಅರಮನೆಯ ಪ್ರವೇಶದ್ವಾರದ ಎದುರಿಗೆ ಒಳಪಡಸಾಲೆಯಲ್ಲಿ ಶೇಷಶಯನ ವಿಷ್ಣುವಿನ ವರ್ಣಚಿತ್ರ ಇದೆ. ಏಳು ಹೆಡೆಯ (ಸರ್ಪ) ಆದಿಶೇಷನ ಮೇಲೆ ವಿಷ್ಣು ಮಲಗಿದ್ದಾನೆ. ಮೈ ಬಣ್ಣ ನೀಲಿ ವರ್ಣದಿಂದ ಕೂಡಿದೆ. ಅಂತೆಯೇ ಶ್ರೀದೇವಿಯ ಉಡುಪು, (ಸೀರೆ) ವರ್ಣ, ವಿಷ್ಣುವಿನ ಮೈಬಣ್ಣದಂತಿದೆ. ಶ್ರೀದೇವಿಯ ಜೊತೆಯಲ್ಲಿ ಭೂದೇವಿ ವಿಷ್ಣುವಿನ ಪಾದಸೇವೆಯಲ್ಲಿ ನಿರತರಾಗಿದ್ದಾರೆ. ಆದಿಶೇಷನ ಉಡುಪುಗಳು ಹಳದಿ (yellow)ವರ್ಣದಿಂದ ಸಂಯೋಜನೆಗೊಂಡಿದೆ. ಆದಿಶೇಷನನ್ನು ಬೆಳ್ಳಿವರ್ಣದಿಂದ ವಿವಿಧ ವಿನ್ಯಾಸ. ಮತ್ತು ಚುಕ್ಕಿಗಳಿಂದ ಅಲಂಕಾರಿಕವಾಗಿದೆ. ನಾಲ್ಕು ಕೈಗಳುಳ್ಳ ವಿಷ್ಣು ಎರಡು ಕೈಗಳಲ್ಲಿ ಶಂಕವನ್ನು ಹಿಡಿದಂತಿದೆ. ಬಲಗೈಯಿಂದ ಆಶೀರ್ವದಿಸಿ, ಎಡಗೈ ತನ್ನ ಸೊಂಟದ ಮೇಲೆ ವಿಶ್ರಾಂತಿ ಪಡೆದಂತಿದೆ. ವಿಷ್ಣುವಿನ ಮೈಮೇಲಿನ, ತಲೆಯ ಮೇಲಿನ ಕೀರಿಟ. ವಸ್ತ್ರಾಲಂಕಾರ ಕಪ್ಪು ವರ್ಣ ರೂಪಪಡೆದರೂ ಸಹ ಅವುಗಳ ಸೌಂದರ್ಯ ಮಾತ್ರ ಆಕರ್ಷಕವಾಗಿದೆ. ವಿಷ್ಣುವಿನ ಮೇಲ್ಭಾಗದಲ್ಲಿರುವ ಬ್ರಹ್ಮದೇವ ಕಮಲದಲ್ಲಿ ಕುಳಿತು ಆಶಿರ್ವದಿಸಿದಂತಿದೆ. ಹಿಂಭಾಗ ಹಚ್ಚು ಹಸಿರಿನ ತಿಳಿಬಣ್ಣ ಲೇಪನದಲ್ಲಿ ವಿಷ್ಣುಪವಾಡ ದೃಶ್ಯಚಿತ್ರ ಮನಮೋಹಕವಾಗಿದೆ. ಮೇಲ್ಭಾಗ ಎರಡು ಬದಿಯಲ್ಲಿ ಗಿಳಿಗಳು, ಮೇಲೆ ಕಾಣುವ ಪಟ್ಟಿಯಲ್ಲಿ ಕಪ್ಪು ಬಣ್ಣದೊಂದಿಗೆ ಬಿಳಿ ವರ್ಣದ ರೇಖೆಗಳು ಹಲವು ಹೂ, ಎಲೆಗಳಿಂದ ಉತ್ತಮ ಸಂಯೋಜನೆ ಪಡೆದಿವೆ. ವಿಷ್ಣುವಿನ ಕೆಳಪಟ್ಟಿಯಲ್ಲಿ ಜಯವಿಜಯರು ದ್ವಾರಪಾಲಕರಾಗಿ ನಿಂತಿರುವರು, ಅವರ ಸೌಂದರ್ಯ, ಮಧ್ಯವಿರುವ ದ್ವಾರ, ವರ್ಣಲೇಪನ ಅತ್ಯುತ್ತಮ, ಆದರೆ ಪ್ರಸ್ತುತ ಜಯ ವಿಜಯರು ಇರುವ ಚಿತ್ರ ಸಂಪೂರ್ಣ ನಾಶವಾಗಿದೆ. ಈ ಮೂರು ಪಟ್ಟಿಕೆಗಳಲ್ಲಿ ರಚನೆಯಾದ ಶೇಷಶಯನ ವಿಷ್ಣುವಿನ ಚಿತ್ರದ ಎರಡೂ ಬದಿಯಲ್ಲಿ ಆಂಜನೇಯ ಮತ್ತು ಗರುಡನ ಚಿತ್ರಗಳಿವೆ. ಇಡೀ ಈ ಚಿತ್ರದಲ್ಲಿ ಕೆಂಪು, ನೀಲಿ, ಹಳದಿ, ಬಿಳಿ, ವರ್ಣಗಳ ಸಂಯೋಜನೆ ಪ್ರಮುಖವಾಗಿದೆ.[೫]

**೨. ಮಠಗಳಲ್ಲಿನ ಭಿತ್ತಿಚಿತ್ರಗಳು**

ನಮ್ಮ ಭಾರತೀಯ ಕಲಾಸಂಸ್ಕೃತಿಗೆ ಮಠ, ದೇವಾಲಯಗಳು ನೀಡಿದ ಕೊಡುಗೆ ಅಮೂಲ್ಯವಾದದ್ದು. ಆಯಾ ಧರ್ಮದ ಸಾತ್ವಿಕ ಚಿಂತನೆಗಳನ್ನು ಬಿತ್ತರಿಸಲು ಅನೇಕ ಗ್ರಂಥಗಳು. ಪುರಾಣ ಪ್ರವಚನ ನಡೆಯುತ್ತಿರುವುದು ಪ್ರಸ್ತುತವು ಕಂಡುಕೊಳ್ಳುತ್ತಿರುವುದು ನಿಜದ ಸಂಗತಿ. ಅಂದಿನ ರಾಜಾಶ್ರಯ ನೆಲೆಯಲ್ಲಿ, ಧರ್ಮಾಧಾರಿತ ಮಠಮಾನ್ಯಗಳು ತಮ್ಮ ತಮ್ಮ ಆಧ್ಯಾತ್ಮ ಭೋದನೆಗೆ ಅನುಗುಣವಾಗಿ ಗೋಡೆಗಳ ಮೇಲೆ ವಿವಿಧ ಶ್ಲೋಕಗಳು, ಆಧಾರಿತ ವರ್ಣಚಿತ್ರಗಳನ್ನು ರಚಿಸಿದ್ದು ಹಲವಾರು ಸಾಕ್ಷಿಗಳಿವೆ. ಭಕ್ತಿ, ನಿಷ್ಠೆ, ಪ್ರಾಮಾಣಿಕತೆಯನ್ನು ಸಾರುವ ದೃಶ್ಯ ವರ್ಣಚಿತ್ರಕಲೆ ಮಾರ್ಗದರ್ಶನವು ಕೂಡ ಆಗಿವೆ. (ಉದಾ: ಅಜಂತ ಎಲ್ಲೋರ, ಗುಹೆಗಳಲ್ಲಿನ ಭಿತ್ತಿಚಿತ್ರಗಳು)

ಅಂತೆಯೇ ಸುರಪುರ ಸಂಸ್ಥಾನದಲ್ಲಿದ್ದ ಗರುಡಾದ್ರಿ ಮನೆತನದವರಿಂದ ಹಲವು ಮಠಗಳಲ್ಲಿ ಭಿತ್ತಿಚಿತ್ರಗಳು ರಚನೆಗೊಂಡಿವೆ. ಸುರಪುರದಿಂದ ಶಹಾಪುರಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ಒಂದು ಕಿಲೋ ಮೀಟರ್ ಸಾಗಿದರೆ ರಂಗಂಪೇಟೆ ಗ್ರಾಮ ಬರುತ್ತದೆ. ರಾಜಾ ದೇವೇಂದ್ರ ವೆಂಕಟಪ್ಪನಾಯಕನು ಕ್ರಿ.ಶ. ೧೮೨೨ರಲ್ಲಿ ರಾಣಿ ರಂಗಮ್ಮನ ಹೆಸರಿನಲ್ಲಿ ಈ ಗ್ರಾಮವೊಂದನ್ನು ನಿರ್ಮಿಸುತ್ತಾನೆ. ಆಸ್ಥಾನ ಪಂಡಿತರಲ್ಲದೇ ಸಕಲ ಶಾಸ್ತ್ರಗಳನ್ನು ಬಲ್ಲ ವಿದ್ವನ್ಮಣಿಗಳು ಈ ಗ್ರಾಮದಲ್ಲಿ ನೆಲೆಸಿದ್ದರು. ಅದೇ ರೀತಿ ಇಲ್ಲಿ ೧. ರುದ್ರಸ್ವಾಮಿಮಠ ಹಾಗೂ ೨. ಅಣ್ಣಯ್ಯನಮಠ ಇಲ್ಲಿ ಭಿತ್ತಿಚಿತ್ರಗಳಿದ್ದು ವಿವರಣೆಗಳು ಸಿಗುತ್ತವೆ. ಈ ಗ್ರಾಮದಲ್ಲಿರುವುದರಿಂದ ರಂಗಂಪೇಟೆ ಗ್ರಾಮವು ಸಕಲ ಮತ ಧರ್ಮಗಳ ಕೇಂದ್ರವೆನಿಸಿಕೊಂಡಿತು. ಈ ಎರಡೂ ಮಠಗಳ ನಿರ್ಮಾಣದ ಹಿಂದೆ ಸುರಪುರ ದೊರೆಗಳು ಹಾಗೂ ಆಸ್ಥಾನ ಪ್ರಮುಖರ ಪಾತ್ರ ಬಹಳ ಮಹತ್ವದಾಗಿದೆ[೬] ಎಂದು ಹೇಳಬಹುದಾಗಿದೆ.

### ರುದ್ರಸ್ವಾಮಿಮಠದಲ್ಲಿನ ಭಿತ್ತಿಚಿತ್ರಗಳು

ಅತೀ ವಿಶಾಲವಾದ ಪ್ರದೇಶದಲ್ಲಿ ಕಟ್ಟಲ್ಪಟ್ಟ ಈ ಮಠದ ಮುಂಭಾಗವನ್ನು ಕಾಂಕ್ರೀಟ್ ಕಟ್ಟಡವನ್ನಾಗಿ ನವೀಕರಿಸಲಾಗಿದೆ. ಆದರೆ ತೆರೆದ ಪಡಸಾಲೆಯು ಹಾಗೆಯೇ ಇದೆ. ಈ ಮಠದ ಮೇಲ್ಛಾವಣಿಯು ಸಂಪೂರ್ಣ ಕುಸಿದಿದ್ದು, ಪಡಸಾಲೆಯ ಗೋಡೆಗಳಲ್ಲಿ ಬಿರುಕು ಕಾಣಿಸಿಕೊಂಡಿವೆ. ಈ ಗೋಡೆಗಳ ಮೇಲೆ ಹತ್ತಾರು ಬಾರಿ ಬಳಿದ ಸುಣ್ಣದ ಪದರೊಂದನ್ನು ಉದುರಿಸಿದಾಗ ಮೂಲ ಭಿತ್ತಿಯಲ್ಲಿ ಚಿತ್ರಗಳು ಇಂದಿಗೂ ಕಾಣಿಸುತ್ತವೆ. ಚಿತ್ರಗಳಿರುವ ಪಡಸಾಲೆಯ ಮೇಲ್ಛಾವಣಿಯು ಕುಸಿದಿರುವುದರಿಂದ ಭಿತ್ತಿಯ ಬಹುಭಾಗ ಉದುರಿ ಹೋಗಿದೆ. ಹೀಗಾಗಿ ಇಂದು ಈ ಗೋಡೆಗಳಲ್ಲಿ ಹೆಚ್ಚಿನ ಚಿತ್ರಗಳು ಕಂಡುಬರುವುದಿಲ್ಲ. ಸುಮಾರು ಎಪ್ಪತ್ತು ಅಡಿಗಳಷ್ಟು ವಿಸ್ತೀರ್ಣವನ್ನು ಹೊಂದಿದ ಈ ಮೂರು ಗೋಡೆಗಳ ತೆರೆದ ಪಡಸಾಲೆಯು ಹತ್ತು ಅಡಿ ಎತ್ತರದಲ್ಲಿದೆ. ನೆಲದಿಂದ ಎರಡು ಅಡಿಗಳಷ್ಟು, ಮೇಲ್ಭಾಗದಲ್ಲಿ ಮೂರು ಗೋಡೆಗಳ ಮೇಲೆ ಚಿತ್ರಗಳಿವೆ.

ಮೂವತ್ತು ಅಡಿ ಉದ್ದ ಹಾಗೂ ಹತ್ತು ಅಡಿ ಎತ್ತರವಾದ ಪೂರ್ವಗೋಡೆಯ ಮಧ್ಯದಲ್ಲಿ ದ್ವಾರವೊಂದಿದ್ದು, ದ್ವಾರದ ಎರಡೂ ಬದಿಗಳಲ್ಲಿ ಗಿಡಗಂಟೆಗಳು ಬೆಳೆದಿರುವುದರಿಂದ ಬಹುಪಾಲು ಚಿತ್ರಗಳು ಹಾಳಾಗಿವೆ. ಇಪ್ಪತ್ತು ಅಡಿ ಉದ್ದ ಹಾಗೂ ಹತ್ತು ಅಡಿ ಎತ್ತರವಾದ ಉತ್ತರ ಗೋಡೆಯಲ್ಲಿ ಎರಡು ಅಂಕಣಗಳಿದ್ದು, ಮೊದಲ ಅಂಕಣದಲ್ಲಿ ಮಾಡುವೊಂದಿದೆ. ಈ ಮಾಡುವಿನಲ್ಲಿ ಮಂಟಪದ ಸನ್ನಿವೇಶ ಹಾಗೂ ಅತ್ಯಂತ ಕಿರಿದಾದ ಕೃಷ್ಣ ಯಶೋಧೆಯರ ಎರಡು ವರ್ಣಚಿತ್ರಗಳಿವೆ. ಉತ್ತರ ಗೋಡೆಯಷ್ಟೇ ವಿಸ್ತೀರ್ಣವುಳ್ಳ ದಕ್ಷಿಣ ಗೋಡೆಯಲ್ಲೂ ಎರಡು ಅಂಕಣಗಳಿದ್ದು, ಮೊದಲನೇ ಅಂಕಣದ ಮಧ್ಯದಲ್ಲಿ ದ್ವಾರವೊಂದಿದೆ. ಈ ಗೋಡೆಯಲ್ಲಿನ ಭಿತ್ತಿಯ ಮೇಲೆ ಅರಮನೆಯ ದೃಶ್ಯ,

ಮನುಷ್ಯಾಕೃತಿಗಳು, ಹೂ, ಗಿಡಗಳು ಅಲ್ಲದೇ ಬಂಗಾರ ಹಾಗೂ ಬೆಳ್ಳಿ ವರ್ಣಲೇಪಿತ ಅಲಂಕಾರಿಕ ಚಿತ್ರಗಳು ಕಂಡುಬರುತ್ತವೆ. ಈ ಪಡಸಾಲೆಯ ಮೂರು ಗೋಡೆಗಳಲ್ಲಿ ರಚನೆಗೊಂಡಿರುವ ಚಿತ್ರಗಳು ಇಂತಿವೆ.

೧. ಮದುವೆ ಸಮಾರಂಭ, ೨. ಸರಸ್ವತಿ, ೩. ಸಮುದ್ರ ಮಂಥನ, ೪. ದೇವಾಸುರರ ಯುದ್ಧ ೫. ಜಯ-ವಿಜಯ, ೬. ಚಾಮರ ಬೀಸುತ್ತಿರುವ ಮಹಿಳೆ, ೭. ಶೇಷಶಯನ ವಿಷ್ಣು, ೮. ದತ್ತಾತ್ರೇಯ, ೯. ಮಂಟಪ, ೧೦. ಕೃಷ್ಣಯಶೋಧರ ಚಿತ್ರಗಳು ಹೀಗೆ ಹಲವಾರು ಕಂಡುಬರುತ್ತವೆ.[೬]

**ಕೆಲವೊಂದು ಚಿತ್ರಗಳ ವಿವರಣೆ:**

೧. **ಮದುವೆ ಸಮಾರಂಭ:** ಈ ಚಿತ್ರ ಮದುಮಕ್ಕಳ ಜೊತೆಗೆ ಹಲವು ಜನರು ಕೂಡಿಕೊಂಡಿರುವರು. ಮಾಂಗಲ್ಯಧಾರಣೆಯನ್ನು ಜನ ಸಮೂಹದಲ್ಲಿ ಋಷಿಮುನಿ ಮದುಮಕ್ಕಳನ್ನು ಆಶೀರ್ವದಿಸುತ್ತಿದ್ದಾನೆ. ಸುತ್ತಲಿನ ಹಲವರು ಕೊಳಲು ವಾದ್ಯಗಳನ್ನು ನುಡಿಸುತ್ತಿದ್ದಾರೆ. ಕೆಂಪು, ನೀಲಿ, ಹಳದಿ ವರ್ಣಗಳ ಬಳಕೆ ಮಹತ್ವದಾಗಿದೆ. ರುದ್ರಸ್ವಾಮಿ ಮಠದಲ್ಲಿನ ಈ ಚಿತ್ರದಿಂದ ಅಂದಿನ ವಿವಾಹ ಮಹೋತ್ಸವವನ್ನು ತಿಳಿಯಬಹುದಾಗಿದೆ.

೨. **ಸರಸ್ವತಿ:** ಸರಸ್ವತಿ ಕಮಲದ ಮೇಲೆ ಕುಳಿತಿದ್ದಾಳೆ. ವೀಣೆಯನ್ನು ನುಡಿಸುವಂತೆ ಹೋಲಿಕೆ, ಪಕ್ಕದಲ್ಲಿ ನವಿಲೊಂದು ವಾಹನಕ್ರಿಯೆಯಾಗಿದೆ. ಕೆಂಪು, ಹಳದಿ ವರ್ಣಗಳ ಸಂಯೋಜನೆಯಾಗಿದೆ.

೩. **ಜಯ-ವಿಜಯ:** ಮಠದ ಪಡಸಾಲೆಯ ಗೋಡೆಯೊಂದರ ಮೇಲೆ ದ್ವಾರದ ಎಡ ಮತ್ತು ಬಲಭಾಗಗಳಿಗೆ ಜಯ-ವಿಜಯರ ಚಿತ್ರವಿದ್ದು, ಗಧೆಯನ್ನು ಹಿಡಿದು ದ್ವಾರಪಾಲಕರ ಕಾರ್ಯ ನಿರ್ವಹಿಸಿದಂತಿದೆ. ಇಂತಹದೇ ವರ್ಣಚಿತ್ರ ಸುರಪುರದ ಹೊಸ ಅರಮನೆಯಲ್ಲಿರುವ ಶೇಷಶಯನ ವಿಷ್ಣುವಿನ ಚಿತ್ರದ ಕೆಳಬದಿಯೊಂದಿದೆ.

೪. **ಕೃಷ್ಣ ಯಶೋಧೆ:** ಕೃಷ್ಣ-ಯಶೋಧೆಯರ ಪ್ರೀತಿ ವಾತ್ಸಲ್ಯವನ್ನು ತೋರಿಸುವ ವರ್ಣ ಚಿತ್ರವಿದು. ಯಶೋಧೆಯ ತೊಡೆಯ ಮೇಲೆ ಮಲಗಿರುವ ಕೃಷ್ಣ ನೀಲಿ ಮೈಬಣ್ಣ ಹೊಂದಿದ್ದಾನೆ. ಯಶೋಧೆಯ ಉಡುಪು ಕೆಂಪು, ಹಳದಿಯಿಂದ ಕೂಡಿದೆ. ಯಶೋಧೆಯ ಮುಖದಲ್ಲಿನ ನಾವಿನ್ಯತೆ ಮನೋಹರವಾಗಿದೆ. ಕೃಷ್ಣ ಯಶೋಧೆಯ ಕೊರಳಲ್ಲಿನ ಮೈಮೇಲಿನ ಆಭರಣಗಳು ಅಲಂಕಾರವಾಗಿದೆ. ಹಿಂಬದಿ ನೀಲಿ, ಹಸಿರು, ವರ್ಣಗಳು ಆಕರ್ಷಕ ಈ ಮಠದಲ್ಲಿ ಕೃಷ್ಣ ಯಶೋಧೆಯ ಚಿತ್ರ ಮಹತ್ವವಾಗಿದೆ.

೪. ಶೇಷಶಯನ ವಿಷ್ಣು : ಏಳು ಹೆಡೆಗಳುಳ್ಳ ಆದಿಶೇಷನ ಮೇಲೆ ವಿಷ್ಣು ಮಲಗಿದ್ದಾನೆ. ಪಾದದಡಿ ಲಕ್ಷ್ಮೀ ವಿಷ್ಣುವಿನ ಸೇವೆಯಲ್ಲಿ ತೊಡಗಿದ್ದಾಳೆ. ಮೇಲ್ಭಾಗ ಕಮಲದಲ್ಲಿ ಬ್ರಹ್ಮದೇವ

ಕುಳಿತಿದ್ದಾನೆ. ಶೇಷಶಯನ ವಿಷ್ಣುವಿನ ಮೈಮೇಲಿನ ಆಭರಣ, ವರ್ಣಾಲಂಕಾರವಾಗಿದೆ. ಹಲವು ರೇಖೆಗಳು ಚಲನಶೀಲತೆಯಿಂದ ಕೂಡಿವೆ. ನೀಲಿ, ಹಸಿರು, ಕೆಂಪು, ಹಳದಿ ವರ್ಣಗಳು ಪ್ರಮುಖ ಸಂಯೋಜನೆಯಾಗಿವೆ.

೬. ಸಮುದ್ರ ಮಂಥನ: ಮಂದಾರ ಪರ್ವತವನ್ನು ಒಂದೆಡೆ ದೇವತೆಗಳು, ಮತ್ತೊಂದೆಡೆ ರಾಕ್ಷಸರು ಎಳೆಯುತ್ತಿದ್ದಾರೆ. ಆದಿಶೇಷನನ್ನು ಹಗ್ಗವನ್ನಾಗಿ ಬಳಸಿಕೊಂಡಿದ್ದಾರೆ. ಮಂದಾರ ಪರ್ವತ ಸಮುದ್ರದಲ್ಲಿ ಮುಳುಗುತ್ತಿರುವಾಗ ವಿಷ್ಣು ಆಮೆಯ ರೂಪ ತಾಳಿ ಪರ್ವತವನ್ನು ಮೇಲಕೆತ್ತಿದಂತಿದೆ. ಸಮುದ್ರ ಮಂತನದಿಂದ ಹೊರಬಂದ ಕಾಮಧೇನು. ಲಕ್ಷ್ಮೀ, ಐರಾವತ, ಮುಂದಾದವು ಸಾಂಕೇತಿಕವಾಗಿವೆ.

### ೨. ಅಣ್ಣಯ್ಯನಮಠದ ಭಿತ್ತಿ ಚಿತ್ರಕಲೆ

ರುದ್ರಸ್ವಾಮಿ ಮಠದ ಹತ್ತಿರದಲ್ಲೇ ಇರುವ ಈ ಮಠಕ್ಕೆ ಗೆಜ್ಜೆ ಸ್ವಾಮಿಮಠವೆಂತಲೂ ಕರೆಯುತ್ತಾರೆ. ಈ ಮಠದ ಸ್ವಾಮಿಯು ದೇವರ ಹೇಳಿಕೆಯನ್ನು ಹೇಳುವ ಸಂದರ್ಭದಲ್ಲಿ ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ಕುಣಿಯುತ್ತಿದ್ದರಿಂದಾಗಿ ಸ್ಥಳೀಯರು ಇವರನ್ನ ಗೆಜ್ಜೆಸ್ವಾಮಿ, ಗೆಜ್ಜೆ ಅಯ್ಯನವರು ಎಂದು ಕರೆದರು, ಮುಂದೆ ಅದು ಗೆಜ್ಜೆಅಯ್ಯನವರ ಮಠ, 'ಗೆಜ್ಜೆಸ್ವಾಮಿ ಮಠ' ಎಂದು ಕರೆಯುವ ವಾಡಿಕೆಯಾಯಿತು.[೮] ರುದ್ರಸ್ವಾಮಿ ಮಠದ ವಾಸ್ತು ಶೈಲಿಯನ್ನೇ ಹೋಲುವ ಅಣ್ಣಯ್ಯನ ಮಠವೂ ಇಂದು ಶಿಥಿಲಾವಸ್ಥೆಯಲ್ಲಿದೆ. ಮಠದ ಗೋಡೆಯ ಮೇಲಿನ ಭಿತ್ತಿಯು ತೇವಾಂಶದಿಂದ ಕಳಚಿ ಬೀಳುತ್ತಲಿದೆ. ಈ ಮಠದ ತೆರೆದ ಪಡಸಾಲೆಯು ರುದ್ರಸ್ವಾಮಿ ಮಠದಲ್ಲಿರುವಂತೆಯೇ ಎಂಟು ಕಂಬಗಳನ್ನು ಮೂರು ಗೋಡೆಗಳನ್ನು ಹೊಂದಿದೆ. ಈ ಪಡಸಾಲೆಯ ಮೂರು ಗೋಡೆಗಳಲ್ಲಿ ಚಿತ್ರಿಸಲ್ಪಟ್ಟಿರುವ ಚಿತ್ರಗಳು ನೆಲದಿಂದ ಎರಡು ಅಡಿ ಎತ್ತರದಿಂದ ಪ್ರಾರಂಭಗೊಂಡು ಕಟ್ಟಡದ ಒಳಮಾಳಿಗೆಯವರೆಗೂ ವ್ಯಾಪಿಸಿಕೊಂಡಿದೆ.[೯]

### ರಚನೆಗೊಂಡ ಭಿತ್ತಿಚಿತ್ರಗಳು

೧. ದತ್ತಾತ್ರೇಯ, ೨. ಮಹಿಷಾಸುರ ಮರ್ಧಿನಿ, ೩. ವ್ಯಾಯಾಮ ಶಾಲೆಯಚಿತ್ರ ೪.ಶಿವನ ತಪಸ್ಸನ್ನು ಭಂಗಪಡಿಸುತ್ತಿರು ಮನ್ಮಥ, ೫. ಕೀಚಕನ ವಧೆ, ೬. ಕಾಮಧೇನು, ೭. ಗಂಡಭೇರುಂಡ, ೮. ಕೃಷ್ಣ ಪ್ರಣಯ ದೃಶ್ಯ, ೯. ಮಂಗಗಳ ಚಿತ್ರ, ೧೦. ದ್ರೌಪದಿಯ ಸ್ವಯಂವರ, ೧೧. ಸಮುದ್ರ ಮಂಥನ, ೧೨. ಗಿರಿಜಾ ಕಲ್ಯಾಣ, ೧೩. ಮೆರವಣಿಗೆ ದೃಶ್ಯ ಹೀಗೆ ಹಲವಾರು ವರ್ಣರೇಖಾಚಿತ್ರಗಳನ್ನು ಇಲ್ಲಿ ಕಾಣಬಹುದು. ಹಾಗೆಯೇ ಬಾಗಿಲುಗಳ ನಕ್ಷಾಚಿತ್ರಣ, ಹೂಬಳ್ಳಿಗಳ ಅಲಂಕಾರಿಕ ಚಿತ್ರಣಗಳು ಇಲ್ಲಿ ಕಂಡುಬರುತ್ತವೆ.

## ಕೆಲವೊಂದು ಚಿತ್ರಗಳ ವಿಶ್ಲೇಷಣೆ

### ಗಂಡಭೇರುಂಡ ಚಿತ್ರ

ಈ ಚಿತ್ರದಲ್ಲಿರುವ ಗಂಡಭೇರುಂಡ ಎರಡು ಮುಖಗಳು ಮತ್ತು ಎರಡು ರಕ್ಕೆಗಳನ್ನು ಹೊಂದಿದೆ. ಮೈ ತುಂಬ ತೊಡಿಸಿದ ಅಲಂಕಾರಿಕ ಆಭರಣ ಚಲುವನ್ನು ತೋರಿಸುತ್ತವೆ. ಎರಡು ಮುಖಗಳ ಬಾಯಲ್ಲಿ (ಕೊಕ್ಕಿನಲ್ಲಿ) ಮತ್ತೆರಡು ಆನೆಗಳನ್ನು ತನ್ನ ರೆಕ್ಕೆಯೋಳಗೆ ಬಿಗಿದಪ್ಪಿಕೊಂಡು ಆಕಾಶಕ್ಕೆ ಮುಖಮಾಡಿ ಹಾರುತ್ತಿರುವಂತಿದೆ. ತಿಳಿಹಳದಿ ವರ್ಣ ಲೇಪನದಿಂದ ಕಾಣಿಸುವ ಗಂಡಭೇರುಂಡ ಚಿತ್ರ ಹೆಚ್ಚು ಆಕರ್ಷಣೀಯವಾದದ್ದು ಎಳೆ-ಎಳೆಯಾಗಿ ಎಳೆದ ಗೆರೆಗಳಿಂದ (ರೇಖೆಗಳಿಂದ) ರಚನೆಗೊಂಡಿದೆ. ನೀಲಿ ಮತ್ತು ಕಂದುಗೆಂಪು ವರ್ಣ ರೇಖೆಗಳು ಕಲಾವಿದನ ಕ್ರೀಯಾಶೀಲತೆಯನ್ನು ಪ್ರತಿಬಿಂಬಿಸುತ್ತದೆ. ಮತ್ತು ಕೌಶಲ್ಯಾಭಿವೃದ್ಧಿಯ ಜೊತೆಗೆ ರೇಖೆ ಎಳೆಯುವಂತಹ ತಾಳ್ಮೆಯನ್ನು ಪರಿಚಯಿಸುತ್ತದೆ, ಅಂತೆಯೇ ಸುರಪುರದ ರಾಜಲಾಂಛನವು ಇದೇ ಗಂಡಭೇರುಂಡ.

### ಕಾಮಧೇನು

ಗಂಡ ಭೇರುಂಡ ಚಿತ್ರದ ಹತ್ತಿರವೇ ಕಾಮಧೇನುವಿನ ಚಿತ್ರವಿದೆ. ಕಾಮಧೇನುಗಳ ಮಧ್ಯ ಮಾವಿನ ಮರವಿದ್ದು ಅದರ ಹಣ್ಣು, ಎಲೆ, ರಂಬೆ, ಕೊಂಬೆಗಳು ಅಲಂಕಾರಿಕವಾಗಿವೆ. ಮರದ ಎರಡು ಬದಿಯಲ್ಲಿ ಕಾಮಧೇನುಗಳು ಮೌನದ ಮಾತುಕತೆ ನಡೆದಂತಿದೆ. ಕಾಮಧೇನು, ಹಸು (ಗೋವು)ವಿನ ಶರೀರಕ್ಕೆ ಸ್ತ್ರೀಮುಖಗಳನ್ನು ಹೊಂದಿಕೊಂಡಿವೆ. ಮುಖದಲ್ಲಿ ಗೋವಿನ ಹಾಗೆ ಎರಡು ಕೊಂಬುಗಳನ್ನು ಚಿತ್ರಿಸಿದ್ದು, ಸುಂದರ ಸ್ತ್ರೀಯರ ಹೆಣೆದಿರುವ ಜಡೆ ಹಗ್ಗದ ರೂಪದಂತೆ ಗಟ್ಟಿಯಾಗಿ ಹೊಸೆದಂತಿದೆ. ಹಸುವಿನ ಮೈಮೇಲೆ ಅಲಂಕಾರಿಕ ವಸ್ತ್ರಾಭರಣ, ಸ್ತ್ರೀಯ ಚೆಲುವು, ಹಳದಿ, ನೀಲಿ, ಕೆಂಪು, ಹಲವು ಮಿಶ್ರಿತ ವರ್ಣಗಳಿಂದ ರಚನೆಗೊಂಡಿವೆ. ರೇಖೆಗಳ ಚಲನ-ವಲನ ಶಕ್ತಿಯುತವಾಗಿದೆ.

### ಕೃಷ್ಣರಾಧೆಯ ಪ್ರಣಯ ದೃಶ್ಯಚಿತ್ರ

ಈ ಚಿತ್ರದಲ್ಲಿ ಕೃಷ್ಣನು ರಾಧೆಯನ್ನು ತೆಕ್ಕೆಗೆ ಅಪ್ಪಿಕೊಂಡು ಮುದ್ದಿಸುವ ಚಿತ್ರ, ಅವರಿಬ್ಬರ ಪ್ರಣಯ ಪ್ರಸಂಗವನ್ನು ತಿಳಿಸುವ ಈ ಚಿತ್ರದಿಂದ ಹಲವು ಸೂಕ್ಮಾನುಭವದ ಗುಟ್ಟನ್ನು ಹೇಳುವುದರೊಂದಿಗೆ ಅಂದಿನ ಕೃಷ್ಣನ ಸಲ್ಲಾಪ ಸಮಯವನ್ನು ಬಿತ್ತರಿಸಿದಂತಿದೆ. ರಾಧೆಯನ್ನು ಚುಂಬಿಸುವುದರೊಂದಿಗೆ ಅವಳ ಸ್ತನಗಳ ತೊಟ್ಟನ್ನು ಬೆರಳುಗಳಿಂದ ಹಿಚುಕುತ್ತಿದ್ದಾನೆ. ಅವಳ ಎದೆಯ ಮೇಲೆ ತೂಗಾಡುವ ಆಭರಣಗಳು, ಉಬ್ಬಿದ ಸ್ತನಗಳು, ಗಾಳಿಯ ಸೆಳೆತಕ್ಕೆ ಸೆಟೆದು ಹಾರಾಡುತ್ತಿರುವ ಸೆರಗು, ಉಟ್ಟಿರುವ ಸೀರೆ, ಕಾಲ್ಬೆರಳು ಉಂಗುರು, ಕಡಗ, ಟೊಂಕದ ಸುತ್ತು ಸುರುಳಿ, ತಲೆಯ ಮೇಲೆ ಮುತ್ತಿನ ದಂಡಿ, (ಮಣಿ) ಎಲ್ಲವು ಆ ಕ್ಷಣದಲ್ಲಿ ಮರೆಯಾದಂತೆ

ಇದ್ದುದ್ದು ಕೃಷ್ಣನ ಪ್ರಣಯದಾಟದಲ್ಲಿ ತೊಡಗಿದಂತಿದೆ. ಅಪ್ಪಿ ಮುದ್ದಿಸುವ ಕೃಷ್ಣ, ಬಾಗಿದ ಮುಖದಲ್ಲಿ ಕಣ್ಣಲ್ಲಿನ ಬಿರುನೋಟ ಹಲವು ಬಗೆಯ ಚಿಂತನೆಗೆ ಹಚ್ಚುತ್ತವೆ. ಹಳದಿ ವರ್ಣದ ಮೈಬಣ್ಣಕ್ಕೆ ಕಂದುಗೆಂಪು ರೇಖೆಗಳು ಮತ್ತಷ್ಟು ಜೀವ ತುಂಬಿವೆ. ಸೂಕ್ಷ್ಮರೇಖೆಗಳನ್ನು ಹೊರತುಪಡಿಸಿ ದಪ್ಪ ರೇಖೆಗಳ ಬಳಕೆ ಹೆಚ್ಚಾಗಿವೆ. ವರ್ಣರೇಖೆಗಳಿಂದ ಆಕರ್ಷಕ ಚಿತ್ರ.

**ಕೀಚಕನ ವಧೆ**

ಈ ಚಿತ್ರದಲ್ಲಿನ ಹೊರ ರೇಖೆಗಳು ದಿಟ್ಟ ಮತ್ತು ದಪ್ಪವಾಗಿ ಎಳೆಯಲ್ಪಟ್ಟಿವೆ. ವಿರಾಟ ನಗರದಲ್ಲಿ ಕೀಚಕನಿಂದ ಅವಮಾನಿತಳಾದ ದ್ರೌಪದಿಯು ಭೀಮನಿಗೆ ಈ ವಿಷಯವನ್ನು ತಿಳಿಸಲು ಭೀಮನು ಸ್ತ್ರೀವೇಷದಲ್ಲಿ ಹೋಗಿ ಕೀಚಕನನ್ನು ಸಂಹರಿಸುತ್ತಾನೆ ಎಂಬುದು ಪುರಾಣದ ಹಿನ್ನಲೆ, ಆದರೆ ಈ ಚಿತ್ರದಲ್ಲಿ ಭೀಮನನ್ನು ಸ್ತ್ರೀವೇಷಧಾರಿಯಾಗಿ ತೋರಿಸಿಲ್ಲ, ಭೀಮನು ಕೀಚಕನನ್ನು ವಧೆ ಮಾಡುತ್ತಿರಬೇಕಾದರೆ ದ್ರೌಪದಿಯು ಮರೆಯಲ್ಲಿ ನಿಂತು ದೃಶ್ಯವನ್ನು ವೀಕ್ಷಿಸುತ್ತಿದ್ದಾಳೆ. ಪ್ರಧಾನವಾಗಿ ಹಳದಿ ವರ್ಣದೊಂದಿಗೆ ನೀಲಿ ಹಾಗೂ ಕಂಡುಗೆಂಪು ವರ್ಣಗಳನ್ನು ಬಳಸಲಾಗಿದೆ.[೧೦]

**ಆರತಿಯನ್ನು ಹಿಡಿದ ಸುಮಂಗಲೆ**

ಆರತಿಯನ್ನು ಹಿಡಿದ ಸುಮಂಗಲೆಯ ಮುಖ ದುಂಡಾಗಿದ್ದು, ಮೂಗಿನಲ್ಲಿ ನತ್ತು ವಿವಿಧ ಸುಂದರ ವಿನ್ಯಾಸಹೊಂದಿದೆ. ತಲೆ, ಕಿವಿ, ಕೊರಳಲ್ಲಿ, ಮೈಮೇಲೆ ಅಲಂಕಾರಿಕ ವಸ್ತ್ರಾಭರಣ ಅವಳ ಚೆಲುವನ್ನು ಕಾಣಿಸುತ್ತದೆ. ಉಟ್ಟಿರುವ ದಡಿಸೀರೆ ನಿಲಿಗೆಗಳಿಂದ ಪಾದ ಮುಚ್ಚಿಕೊಂಡಿವೆ. ಆದರೂ ಕಾಲ್ಬೆರಳು, ಕಡಗ, ಸುಂದರವಾಗಿ ಕಾಣಿಸಿಕೊಳ್ಳುತ್ತವೆ. ಈ ಸುಮಂಗಲೆಯ ಚಿತ್ರನೋಡಿದಾಗ ಮೆರವಣಿಗೆಯ ಸಂದರ್ಭದಲ್ಲಿ ಆರತಿಯನ್ನು ಹಿಡಿದು ಹೊರಟಂತ ಸನ್ನಿವೇಶ ಕಾಣುತ್ತದೆ. ಕೆಂಪು, ನೀಲಿ, ಹಳದಿ ವರ್ಣಗಳಿಂದ ಈ ಚಿತ್ರ ದಪ್ಪ ರೇಖೆಗಳಿಂದ ಕಾಣಿಸಿಕೊಳ್ಳುತ್ತದೆ.

**ದತ್ತಾತ್ರೇಯ**

ಮೂರು ಮುಖಗಳನ್ನು ಹೊಂದಿದ ದತ್ತಾತ್ರೇಯ ಆರು ಕೈಗಳಲ್ಲಿ ಕುಂಡಲಿ, ರುದ್ರಾಕ್ಷಿ ಸರ, ಶಂಖ, ಕಮಲ, ಚಕ್ರ, ತ್ರಿಶೂಲವನ್ನು ಹಿಡಿದು ನಿಂತಿರುವ ದೃಶ್ಯ, ಬಲಭಾಗದಲ್ಲಿ ಬ್ರಹ್ಮನು ಎಡಭಾಗದಲ್ಲಿ ಶಂಕ-ಚಕ್ರಧಾರಿಯಾಗಿ ವಿಷ್ಣುವಿನ ಚಿತ್ರವನ್ನು ರಚಿಸಲಾಗಿದೆ, ಶಿವನ ಜಡೆಯಲ್ಲಿ ಗಂಗಾಮೂರ್ತಿ ಚಿತ್ರ ಕಾಣುತ್ತದೆ. ಮೂರು ಮುಖಗಳ ಮೇಲಿನ ಜಡೆ ಸುತ್ತಿಕೊಂಡಿದ್ದು, ತನ್ನೆರಡು ಕೈಗಳ ಮೇಲೆ ಹುಲಿಯ ಚರ್ಮವನ್ನು ಹಾಕಿಕೊಂಡು, ಟೊಂಕಕ್ಕೆ ಧರಿಸಿದ ಮಡಿಧೋತರದ ನಿಲುಗೆ, ಕಾಲ್ಕಡಗ, ಪಾದರಕ್ಷೆ. ಮೈತುಂಬ ಧರಿಸಿದ ವಸ್ತ್ರಾಲಂಕಾರ ವಿವಿಧ ವಿನ್ಯಾಸಗಳಿಂದ ಕೂಡಿದೆ. ಕಡುಗೆಂಪು, ಹಸಿರು, ನೀಲಿ ವರ್ಣಗಳ ಮಿಶ್ರಣದ ಮರವೊಂದು ದತ್ತಾತ್ರೆಯನ ಹಿಂದೆ ಇದೆ. ತಳ ಭಾಗದಲ್ಲಿ ಸುತ್ತ ಸ್ವಾನಗಳು, ಕುದುರೆ, ಸೇರಿದಂತೆ ವಿವಿಧ ಪ್ರಾಣಿಗಳಿವೆ. ಪ್ರಾಣಿಗಳ

ಮೈಮೇಲಿನ ಚುಕ್ಕೆಗಳು, ವಿವಿಧ ರೇಖೆ, ಮರದ ಮೇಲಿನ ಅಳಿಲು, ಗೊರವಂಕ, ಆಕರ್ಷಕ, ಹಳದಿ, ಹಸಿರು, ಕಂದುಗೆಂಪು, ಕಪ್ಪು, ವರ್ಣಗಳಿಂದ ರಚಿಸಿದ ಈ ದತ್ತಾತ್ರೇಯನ ಚಿತ್ರ ಎತ್ತರದಲ್ಲಿ ನೋಡುಗನಿಗೆ ಅನೇಕ ಚಿಂತನೆಗಳನ್ನು ಮಾಡಲು ಹಚ್ಚುತ್ತದೆ.

**ಸಮುದ್ರ ಮಂಥನ**

ರುದ್ರಸ್ವಾಮಿ ಮಠದಲ್ಲಿರುವಂತಹ ಚಿತ್ರದಂತೆಯೇ ಇಲ್ಲಿಯೂ ಒಂದು ಕಡೆ ದೇವತೆಗಳನ್ನು ಮತ್ತೊಂದು ಕಡೆ ರಾಕ್ಷಸರನ್ನು ತೋರಿಸಿದೆ. ಆದಿಶೇಷನನ್ನು ಹಗ್ಗವನ್ನಾಗಿ, ಮಂದಾರ ಪರ್ವತವನ್ನು ಕಡಗೋಲನ್ನಾಗಿ ಮಾಡಿಕೊಂಡು ಸಮುದ್ರವನ್ನು ಕಡೆಯುತ್ತಿರುವಂತೆ ಚಿತ್ರಿಸಿದೆ. ಮಂದಾರ ಪರ್ವತದ ಬುಡದಲ್ಲಿ ಆಮೆಯನ್ನು ಚಿತ್ರಿಸಿದೆ. ಸಮುದ್ರ ಮಂಥನದಿಂದ ಹೊರಬಂದ ಕಾಮಧೇನು, ಲಕ್ಷ್ಮೀ, ಐರಾವತಗಳು ಸಾಂಕೇತಿಕವಾಗಿ ಚಿತ್ರಣಗೊಂಡಿವೆ. ಕೆಂಪು ಹಳದಿ, ನೀಲಿ ವರ್ಣಗಳನ್ನು ಚಿತ್ರರಚನೆಗಾಗಿ ಬಳಸಿದೆ."

**ಮಂದಿರಗಳಲ್ಲಿನ ಭಿತ್ತಿಚಿತ್ರಗಳು**

ಮಠಮಾನ್ಯಗಳ ಭಿತ್ತಿಚಿತ್ರಗಳಂತೆ ಸುರಪುರದ ಶ್ರೀವೇಣುಗೋಪಾಲಸ್ವಾಮಿ ದೇವಾಲಯದೊಳಗೆ ಹಲವು ವರ್ಣಚಿತ್ರಗಳನ್ನು ಕಾಣಬಹುದು. ಈ ದೇವಾಲಯದಲ್ಲಿ ಗೋಡೆಯ ಮೇಲಿರುವ ಸಾಲು ಉಬ್ಬುಶಿಲ್ಪಗಳಿಗೆ ಮತ್ತು ದೇಗುಲದ ಬಾಗಿಲಿಗೆ ವರ್ಣವನ್ನು ಲೇಪಿಸಲಾಗಿದೆ. ದ್ವಾರಬಾಗಿಲ ಎರಡು ಬದಿಯಲ್ಲಿರುವ ದ್ವಾರಪಾಲಕ. ಉಬ್ಬುಶಿಲ್ಪಗಳು ನೀಲಿ, ಕೆಂಪು, ಬಿಳಿ, ವರ್ಣದಿಂದ ರೂಪಗೊಂಡಿವೆ. ಮತ್ತು ದ್ವಾರಬಾಗಿಲ ಮೇಲೆ ಹಳದಿ, ನೀಲಿ, ಕೆಂಪು, ಹಸಿರು ಸೇರಿದಂತೆ ಹಲವು ಬಣ್ಣಗಳಿಂದ ಅಲಂಕಾರವಾಗಿದೆ. ಪಡಸಾಲೆಯಂತಿರುವ ಎಲ್ಲಾಕಂಬಗಳ ಮಧ್ಯೆ, ಮೇಲ್ಛಾವಣಿಯ ತುಂಡುಗಳ ಮೇಲೆ, ಛತ್ತಿನ ಮೇಲೆ ಅನೇಕ ಹೂ, ಎಲೆಗಳುಳ್ಳ ಚಿತ್ರಗಳು ಕಂಡುಬರುತ್ತವೆ. ಅಲ್ಲದೆ, ಒಂದೆರಡು ಮಾನವನ ಮುಖಚಿತ್ರ ರಚನೆಯಾಗಿವೆ. ಭಾವಚಿತ್ರದ ಜೊತೆಗೆ ಹಲವಾರು ನಿಸರ್ಗಚಿತ್ರಗಳನ್ನು ಬಿಡಿಸಿದ್ದು ಆಕರ್ಷಕವಾಗಿ, ಪ್ರಸ್ತುತ ದೇವಾಲಯದ ಉತ್ಸವ ಸಂದರ್ಭದಲ್ಲಿ ಸುಣ್ಣ ಹಚ್ಚಿರುವುದರಿಂದ ಮತ್ತು ಹಳೆಯ (ಭಿತ್ತಿ) ಸುಣ್ಣವನ್ನು ಕೆತ್ತಿರುವುದರಿಂದ ಚಿತ್ರಗಳ ನೈಜಸ್ಥಿತಿ ಕಾಣುವುದಿಲ್ಲ. ದೂರದಿಂದ ನೋಡಿದಾಗ ಸಾಲುಸಾಲಾಗಿ ನಿಸರ್ಗಚಿತ್ರಗಳು ಗೋಚರಿಸುತ್ತವೆ. ಹಸಿರು, ನೀಲಿ ಕಂದುಬಣ್ಣದ ಹಲವು ಸೂಕ್ಷ್ಮರೇಖೆಗಳು ನಿಸರ್ಗ ಚಿತ್ರದಲ್ಲಿ ರೂಪಗೊಂಡಿವೆ. ಅಲ್ಲದೇ ದೇವಾಲಯದ ಒಳಗಿರುವ ಕಾಷ್ಠಶಿಲ್ಪಗಳಿಗೆ (ಆಂಜನೇಯ ಮತ್ತು ಆನೆ) ಹಸಿರು, ಕೆಂಪು, ಚಿನ್ನದ ವರ್ಣ, ಬಿಳಿ, ನೀಲಿ ಕಡುಹಸಿರು, ಹಲವು ಮಿಶ್ರಿತ ವರ್ಣಸಂಯೋಜನೆ ಈ ಶಿಲ್ಪಗಳಿಗೆ ಲೇಪನವಾಗಿದೆ.

ಅಲ್ಲದೇ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದ ಎದುರಿಗೆ ನೆಲಮಟ್ಟದಲ್ಲಿರುವ ಆಂಜನೇಯ ದೇವಾಲಯವಿದ್ದು, ಈ ದೇವಾಲಯವು ಸುಮಾರು ಎಪ್ಪತ್ತು ಅಡಿ ಸುತ್ತಳತೆ ಹೊಂದಿದೆ. ಈ

ದೇವಾಲಯ ಗೋಡೆಗಳಲ್ಲದೇ ಒಳಮಾಳಿಗೆಯಲ್ಲಿ ರಾಮಾಯಣ, ಮಹಾಭಾರತ ಮುಂತಾದ ವಿಷಯಗಳ ಚಿತ್ರಗಳು ರಚನೆಗೊಂಡಿದ್ದವೆಂದು ರಾಜಗುರುಗಳಾದ ಶ್ರೀ ಬಿ. ಕೃಷ್ಣಮಾಚಾರ್ಯ ಅವರು ಅಭಿಪ್ರಾಯ ಪಡುತ್ತಾರೆ. ಕಳೆದ ಐದಾರು ವರ್ಷಗಳ ಹಿಂದೆ ಈ ದೇವಾಲಯ ನವೀಕರಣಗೊಂಡಿದ್ದರಿಂದ ಇಲ್ಲಿರುವ ಚಿತ್ರಗಳು ವಿನಾಶಹೊಂದಿರುವದನ್ನು ಇಲ್ಲಿ ಗಮನಿಸಬಹುದಾಗಿದೆ. ಇದಲ್ಲದೆ ಸುರಪುರದ ಮಹಾಕವಿ ಲಕ್ಷ್ಮೀಶ ರಸ್ತೆಯಲ್ಲಿರುವ ಪಂಚಮುಖಿ ಹನುಮಾನ ಮಂದಿರದಲ್ಲಿಯೂ ಭಿತ್ತಿ ಚಿತ್ರಗಳಿದ್ದವೆಂದು ಹೇಳುತ್ತಾರೆ. ಈ ಮಂದಿರವು ನವೀಕರಣಗೊಳ್ಳದೇ ಹೋದರೂ ಗೋಡೆಯ ಭಿತ್ತಿಯ ಸಂಪೂರ್ಣ ಉದುರಿಹೋಗಿರುವುದರಿಂದ ಮತ್ತು ಕಾಲಕಾಲಕ್ಕೆ ಗೋಡೆಯ ಮೇಲೆ ಸುಣ್ಣ ಬಳಿಯಲಾಗಿರುವುದರಿಂದ ಇಲ್ಲಿ ಯಾವುದೇ ಚಿತ್ರಗಳು ಕಂಡುಬರುವುದಿಲ್ಲ.[೧೨] ದೇವಾಲಯಗಳು, ಮಠಗಳಲ್ಲದೇ ಸುರಪುರ ಸಂಸ್ಥಾನದ ಪ್ರಮುಖ ಗಣ್ಯರ ಮನೆಯಲ್ಲಿ ಹಲವು ಕಾರ್ಯಕ್ರಮ, ಹಬ್ಬದ ನಿಮಿತ್ಯ ಗರುಡಾದ್ರಿ ಮನೆತನದವರಿಂದ ಚಿತ್ರವನ್ನು ಬರೆಸಿಕೊಳ್ಳುವ ಸಂಪ್ರದಾಯವಿತ್ತು. ಅಂತೆಯೇ ಉತ್ತಮ ಚಿತ್ರಗಳನ್ನು ರಚಿಸಿ ಮನೆಗಳನ್ನು ಅಲಂಕರಿಸುತ್ತಿದ್ದರು. ಚಿತ್ರರಚಿಸಿದ ಕಲಾವಿದರಿಗೆ ಮನೆಯ ಒಡೆಯರು ಉಡುಗೊರೆಗಳಿಂದ ಸತ್ಕರಿಸುತ್ತಿದ್ದರು. (ಉದಾಹರಣೆಗೆ ಮುಜುಮ್‌ದಾರ ಅವರ ಹಳೆಯಮನೆ ಸಾಕ್ಷಿ, ಇಂದು ಸಂಪೂರ್ಣ ಬಿದ್ದು ಹೋಗಿದೆ.) ಅಂದು ಗರುಡಾದ್ರಿ ಮನೆತನದವರ ಕಲಾಶೈಲಿಯ ಹಲವು ಚಿತ್ರಗಳಂತೆ ಪ್ರಸ್ತುತ ಹಲವು ಮನೆಗಳಲ್ಲಿ ಚಿತ್ರದ ಸುಳಿವುಗಳನ್ನು ಕಾಣಬಹುದಾಗಿದೆ.[೧೩]

### ಭಿತ್ತಿಚಿತ್ರಗಳ ವರ್ಣ ಸಂಯೋಜನೆ

ಸುರಪುರ ಭಿತ್ತಿ ಚಿತ್ರಗಳು ನೈಸರ್ಗಿಕ ಮೂಲದ ವರ್ಣಗಳಿಂದಲೇ ರಚನೆಗೊಂಡಿವೆ. ಹವಾಮಾನದ ವೈಪರಿತ್ಯದಿಂದಾಗಿ ಭಿತ್ತಿಯು ಉದುರಿ ಹೋಗಿದೆಯೇ ಹೊರತು, ವರ್ಣ ಸಂಯೋಜನೆಯಿಂದ ಈ ಚಿತ್ರಗಳು ಇಂದಿಗೂ ಹೊಳಪಿನಿಂದ ಕಂಗೊಳಿಸುತ್ತವೆ. ಸುರಪುರ ಭಿತ್ತಿ ಚಿತ್ರಗಳಲ್ಲಿ ವೈವಿದ್ಯಮಯವಾದ ಬಣ್ಣಗಳನ್ನು ಬಳಸಿಕೊಂಡಿದ್ದು, ಅವುಗಳನ್ನು ೧. ಖನಿಜಮೂಲ, ೨. ಸಸ್ಯಮೂಲ, ೩. ರಾಸಾಯನಿಕ ಬಣ್ಣಗಳು ಎಂದು ವಿಂಗಡಿಸಬಹುದಾಗಿದೆ.[೧೪]

### ಭಿತ್ತಿಚಿತ್ರ ರಚನಾತಂತ್ರ ಮತ್ತು ಶೈಲಿ

ಸುರಪುರ ಭಿತ್ತಿಚಿತ್ರಗಳನ್ನು ರಚನೆಮಾಡಿದ ವಿಧಾನವನ್ನು ನೋಡಿದಾಗ ತಿಳಿವರ್ಣ ಲೇಪನದ ಮೇಲೆ ರೇಖೆಗಳನ್ನು ರಚಿಸಿದ್ದು ಕಂಡುಬರುತ್ತದೆ. ಹಲವು ವರ್ಣ ಸಂಯೋಜನಾ ಕ್ರಮದಿಂದ ಚಿತ್ರ ರಚಿಸಿ ಮತ್ತಷ್ಟು ಅವುಗಳ ಜೀವಂತಿಕೆ ರೇಖೆಗಳಿಂದ ರೂಪಿತವಾದಂತಿದೆ. ಅನೇಕ ವಿಷಯಾನುಕ್ರಮವಾಗಿ ರಚನೆಗೊಂಡ ಭಿತ್ತಿಚಿತ್ರ ಅಂದಿನ ಸಾಂದರ್ಭಿಕ ಘಟನೆಯನ್ನು ವಿವರಿಸುತ್ತವೆ. ವರ್ಣಲೇಪನ ಮಾಡಿದ, ರೇಖೆಗಳನ್ನು ಎಳೆದ ಕುಂಚ ಬಳಕೆ ವಿಧ-ವಿಧವಾಗಿದೆ. ಆಯಾ ಆಕೃತಿಯ ಹಿನ್ನಲೆಯಾಗಿ

ಚಿತ್ರರೂಪಗೊಂಡಿವೆ. ಕೆಂಪು, ನೀಲಿ, ಹಳದಿ, ಹಲವು ಮಿಶ್ರಿತ ವರ್ಣಗಳಿಂದ ರಚನೆಯಾದ ಭಿತ್ತಿಚಿತ್ರಗಳು ಇಂದಿಗೂ ತನ್ನ ನೈಜತೆ ಕಳೆದುಕೊಂಡಿಲ್ಲ. ಆದರೆ ಹಲವು ಪ್ರಸ್ತುತ ವೈಪರಿತ್ಯದಿಂದಾಗಿ ಮತ್ತು ಚಿತ್ರಗಳ ಮೇಲೆ ಸುಣ್ಣ ಬಳಿದಿದ್ದರಿಂದ ಅವು ನಾಶವಾಗುತ್ತಿರುವುದು ಸತ್ಯದ ಸಂಗತಿ. ರುದ್ರಸ್ವಾಮಿ ಮತ್ತು ಅಣ್ಣಯ್ಯನ ಮಠದಲ್ಲಿನ ಭಿತ್ತಿಚಿತ್ರಗಳನ್ನು ಗರುಡಾದ್ರಿ ಮನೆತನ ಶ್ರೇಷ್ಠಕಲಾವಿದ ಮೊದಲ ಬಾನಯ್ಯನಿಂದ ರಚನೆಗೊಂಡಿವೆ. ಅವುಗಳ ರಚನೆ, ತಂತ್ರ, ಶೈಲಿಯನ್ನು ಗಮನಿಸಿದಾಗ ಕರ್ನಾಟಕದ ಹಲವು ಶೈಲಿಗಳ ಚಿತ್ರಗಳು ನೆನಪಾಗುತ್ತವೆ. ಎರಡು ಮಠಗಳ ಚಿತ್ರರಚನಾ ಶೈಲಿ ಒಂದೆಯಾದರೆ ಚಿತ್ರಗಳನ್ನು ರಚಿಸುವ ವಿಧಾನ ಬೇರೆಯಾದಂತೆ ಇದೆ. ಎರಡು ಪಡಸಾಲೆಯ ಮೂರು ಗೋಡೆಗಳ ಮೇ ರೂಪಪಡೆದ ಭಿತ್ತಿಚಿತ್ರಗಳು ಹಲವು ಪೌರಾಣಿಕ ಕಥೆಯನ್ನಾಧರಿಸಿದ ಚಿತ್ರಗಳಾಗಿವೆ. ವರ್ಣ ಲೇಪನಗೊಳ್ಳುವ ಕ್ರಿಯೆಯಲ್ಲಿ ವಿವಿಧ ಆಕಾರ ಪಡೆಯುವುದರೊಂದಿಗೆ ರೇಖೆಗಳ ಜೀವಂತಿಕೆ ಎದ್ದುಕಾಣುತ್ತಿವೆ.

**ಕಾಕಲವಾರ ಭಿತ್ತಿಚಿತ್ರಕಲೆ**

ಯಾದಗಿರಿ ಜಿಲ್ಲೆಯಿಂದ ಸುಮಾರು ೪೫ ಕಿ.ಮೀ ದೂರದಲ್ಲಿರುವ ಮತ್ತು ಗುರುಮಠಕಲ್‌ದಿಂದ ೫ ಕಿ.ಮೀ ಹತ್ತಿರವಾಗುವ ಕಾಕಲವಾರ ಗ್ರಾಮ ಹಲವು ಹೋರಾಟಗಳಲ್ಲಿ ಭಾಗಿಯಾಗಿ ತನ್ನದೇಯಾದ ಚಾರಿತ್ರಿಕ ನೆಲೆಯನ್ನು ಹೊಂದಿದೆ. ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯ ಪತನದ ನಂತರ ಸುರಪುರ ಸಂಸ್ಥಾನ ರೂಪಗೊಂಡತೆ, ಕಾಕಲವಾರದಲ್ಲಿ ದೇಶಮುಖ ಮನೆತನ ಹುಟ್ಟಿಕೊಂಡು ಕಲ್ಲೂರು, ಕೊಡಂಗಲ್, ಯಾಗಂಟಿ, ಮದನಾ, ಚಿಂತಪಳ್ಳಿ, ನೀರಗುಡಿ ಸೇರಿದಂತೆ ಹಲವು ಗ್ರಾಮದಲ್ಲಿ ತನ್ನತನವನ್ನು ಉಳಿಸಿಕೊಂಡಿತು. ಅಲ್ಲದೇ ಈ ಮನೆತನದವರು ವೀರಶೈವ ಧರ್ಮಕ್ಕೆ ಸೇರಿದವರೆಂದು ಹಲವು ತಜ್ಞರ ಅಭಿಪ್ರಾಯವಿದೆ. ಯಾದಗಿರಿ ತಾಲೂಕಿನ ಗುರುಮಠಕಲ್ ಮಿಠಾತಿಪಡಂಪಲ್ಲಿ, ನಾರಾಯಣಪುರ, ಪುಟಪಾಕ, ಚಂಡರಕಿ. ಕೇಶ್ವಾರ ನಜರಾಪುರ, ಸೇಡಂ ತಾಲೂಕಿನ ಬುರುಗಪಲ್ಲಿ, ಚಂದಾಪುರ, ಮೋತಕಪಲ್ಲಿ ಇಟ್ಕಾಲ, ಯಾನಾಗುಂದಿ, ಆಂಧ್ರದ ಕಾನಕುರ್ತಿ, ಲಾವಾಕುರ್ತಿ, ಕೊಡಂಗಲ್ ತಾಲೂಕಿನ ಅಲೋವನಗರ, ಮದ್ದೂರು, ಸೇರಿದಂತೆ ಸುಮಾರು ೨೦೦ ಗ್ರಾಮಗಳು ದೇಶಮುಖ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿದ್ದವು.

**ದೇಶಮುಖ ಮನೆತನ**

ರಾಜಾ ಲಕ್ಷ್ಮಣಪ್ಪ ದೇಶಮುಖ ಈ ಸಂಸ್ಥಾನದ ಮೂಲ ಪುರುಷರೆಂದು ತಿಳಿದುಬರುತ್ತದೆ. ಇವರ ಬಗ್ಗೆ ಹೆಚ್ಚಿನ ಮಾಹಿತಿಯೇನೂ ಲಭಿಸಿಲ್ಲ. (ಅಧ್ಯಯನದ ಅಗತ್ಯತೆ ಇದೆ) ಆದರೆ ಇವರ ಮಗ ಮಲಭೂಪಾಲರೆಡ್ಡಿ ತದನಂತರ ಬಂದ ಅರಸರ ವಂಶಾವಳಿಯ ಮಾಹಿತಿ ಇದೆ. ರಾಜಾ ಮಲಭೂಪಾಲರೆಡ್ಡಿಗೆ ರಾಣಿ ನೀಲಮ್ಮಳ ಗರ್ಭದಲ್ಲಿ ಜನಿಸಿದ ರಾಣಿ ಅಯ್ಯಮ್ಮಳೆಂಬ ಮಗಳಿದ್ದಳು.

ರಾಜಾ ಮಲಭೂಪಾಲರೆಡ್ಡಿಗೆ ಗಂಡು ಸಂತಾನವಿಲ್ಲ. ತದನಂತರ ರಾಣಿ ಅಯ್ಯಮ್ಮಳಿಗೂ (ಈಕೆಯ ಗಂಡನ ಹೆಸರು ತಿಳಿದು ಬಂದಿಲ್ಲ) ಮಕ್ಕಳಾಗಿರುವುದರಿಂದ ರಾಣಿ ನೀಲಮ್ಮಳು. ಈ ರಾಜಾಮಲ್ಲಾರೆಡ್ಡಿ ದೇಶಮುಖರ ಮೊದಲನೆ ಹೆಂಡತಿ ತೀರಿಹೊದ ನಂತರ ಮಹಾದೇವಮ್ಮಳನ್ನು ಮರು ವಿವಾಹವಾದರು. ರಾಣಿಮಹಾದೇವಮ್ಮಳಿಗೂ ಮಕ್ಕಳಾಗದ ಕಾರಣ ರಾಜಾ ವಿರೂಪಾಕ್ಷರೆಡ್ಡಿಯನ್ನು ದತ್ತು ಪಡೆದರು. ರಾಜಾ ವಿರೂಪಾಕ್ಷಪ್ಪರೆಡ್ಡಿ ದೇಶಮುಖ ಹೆಂಡತಿ ರಾಣಿ ಉಮಾದೇವಿಗೆ ಒಟ್ಟು ೮ ಜನ ಮಕ್ಕಳು, ರಾಜಾ ಲಕ್ಷ್ಮಣಪ್ಪ ದೇಶಮುಖ, ಮಲ್ಲಾರೆಡ್ಡಿ ದೇಶಮುಖ, ರವಿಕುಮಾರ ದೇಶಮುಖ, ಉದಯಕುಮಾರ ದೇಶಮುಖ, ನೀಲಮ್ಮ, ಶಶಿಕಲಾ, ಚಂದ್ರಕಲಾ, ಇಂದುಕಲಾ ಎಂಬ ಮಕ್ಕಳಿರುವರು. ಇವರಲ್ಲಿ ಸದ್ಯ ರಾಜಾಲಕ್ಷ್ಮಣಪ್ಪ ದೇಶಮುಖರವರು ಕಾಕಲವಾರ ಸಂಸ್ಥಾನದ ಉಸ್ತುವಾರಿ ಹೊತ್ತಿದ್ದಾರೆ. ಸರ್ಕಾರಿ ದಾಖಲೆಗಳಲ್ಲಿ ಇವರೂ ಕೂಡ ದತ್ತುಪುತರ ಎಂದು ದಾಖಲಾಗಿದೆ. ರಾಜಾ ಲಕ್ಷ್ಮಣಪ್ಪ ದೇಶಮುಖ, ರಾಣಿ ಲಲಿತಾದೇವಿ ದಂಪತಿಗೆ ರಾಜಾ ವಿಶ್ವನಾಥರೆಡ್ಡಿ ಎಂಬ ಮಗನಿದ್ದು, ಅನ್ನಪೂರ್ಣದೇವಿ, ನಿರ್ಮಲದೇವಿ, ಬಸವರಾಜೇಶ್ವರಿ, ಶಾಂತಾದೇವಿ ಎಂಬ ಹೆಣ್ಣು ಮಕ್ಕಳಿದ್ದಾರೆ. ರಾಜಾ ವಿಶ್ವನಾಥರೆಡ್ಡಿಯವರಿಗೆ ರಾಜಾ ವಿರೂಪಾಕ್ಷರೆಡ್ಡಿ, ರಾಜಾ ಮಲಭೂಪಾಲರೆಡ್ಡಿ ಎಂಬ ಮಕ್ಕಳಿದ್ದಾರೆ.[೧೫]

**ದೇಶಮುಖರ ಅರಮನೆ ಒಂದು ನೋಟ**

ಕರ್ನಾಟಕದಲ್ಲಿ ಹಲವಾರು ರಾಜಾಶ್ರಯ ನೆಲೆಗಳಲ್ಲಿ ಹುಟ್ಟಿಕೊಂಡ ಅವರ ಅರಮನೆಗಳು ತಮ್ಮ-ತಮ್ಮ ಆಸಕ್ತಿಯಂತೆ ವಾಸ್ತು ಶೈಲಿಯಲ್ಲಿ ತಲೆ ಎತ್ತಿವೆ. ಪ್ರಭಾವ ಪ್ರೇರಣೆಯ ರೂಪದಲ್ಲಿ ಗ್ರಾಮೀಣ ಪ್ರದೇಶದ ಅನೇಕ ರಾಜಮನೆತನಗಳ ಮನೆಗಳ ಕಲಾತ್ಮಕವಾಗಿವೆ. ಕಟ್ಟಡ ವಿನ್ಯಾಸ, ಶೈಲಿ, ತಂತ್ರಗಾರಿಕೆ ಆಯಾ ಮನೆತನಗಳ ಹಿನ್ನಲೆಯಾಗಿ ರೂಪಗೊಂಡರೂ ಸಹ ಕಲೆಯ ಸಾತ್ವಿಕತೆ ಪ್ರಬಲವಾಗಿ ಅಡಗಿಕೊಂಡಂತಿದೆ. (ಉದಾ: ಕರ್ನಾಟಕದ ಹಲವು ರಾಜಾಶ್ರಯದ ಅರಮನೆಗಳು) ಅಂತೆಯೇ ಕಾಕಲವಾರ ಸಂಸ್ಥಾನದ ದೇಶಮುಖರ ಅರಮನೆಯು ಬಹುವಿಸ್ತಾರ ಹೊಂದಿದ್ದು, ಸುಮಾರು ೪ ಎಕರೆದಷ್ಟು ಅಗಲವಾದ ಜಾಗದಲ್ಲಿ ನಿರ್ಮಾಣವಾದ ಕೋಟೆಯೊಳಗಿನ ಮನೆ, ವಿವಿಧ ವಿನ್ಯಾಸ, ತಂತ್ರ, ಹಲವು ಶೈಲಿಗಳನ್ನು ಒಳಗೊಂಡಂತಿದೆ. ಕೋಟೆಯ ಹೊರವಲಯಗಳಲ್ಲಿ ಅರಮನೆಯ ರಕ್ಷಣೆಗಾಗಿ ೬ ಹುಡೆಗಳು ಅಂದು ಕಣ್ಣು ಕೆರಳಿಸಿ ಇಂದು ನೆಲಕಪ್ಪಿಕೊಂಡಿವೆ. (ಇಂದು ಹಾಳಾಗಿವೆ.) ಕೋಟೆಯ ಸಾಲಿನ ಕಲ್ಲುಗಳು ಮುರಿದು ಒಳ ಮನೆಯ ವ್ಯವಸ್ಥೆ ಹೊರಕ್ಕೆ ಕಾಣುತಿದೆ. ಗುರುಮಠಕಲ್‌ದಿಂದ ಸ್ವಲ್ಪ ಮುಂದೆ ನಾವು ಚಲಿಸಿದಂತೆ ಕಾಕಲವಾರ ದೇಶಮುಖರ ಅರಮನೆಯ ಮೇಲ್ಮನೆ ಕಾಣಿಸುತ್ತದೆ. ಮನೆಯ ಹತ್ತಿರ ಬರುತ್ತಿದ್ದಂತೆ ಒಂದು ಹುಡೆಯ ಪ್ರಸ್ತುತ ಸ್ಥಿತಿ-ಗತಿ ತಿಳಿಸುತ್ತದೆ. ಅರಮನೆಯ ದ್ವಾರಬಾಗಿಲಿಗೆ ಸಂಸ್ಥಾನದ ಮೂಲ ಪುರುಷ ರಾಜಾಲಕ್ಷ್ಮಣಪ್ಪ ದೇಶಮುಖರ ಹೆಸರನ್ನು ದಪ್ಪಕ್ಷರಗಳಲ್ಲಿ ಬರೆಯಲಾಗಿದೆ. ಅರಮನೆಯ ಕಟ್ಟಡದಲ್ಲಿ ಕಲ್ಲು, ಗಾರೆ,

ಇಟ್ಟಿಗೆ, ಮಣ್ಣು, ಸುಣ್ಣ ವಿವಿಧ ನಮೂನೆಯ ವಿಶಿಷ್ಟ ಕಲ್ಲುಗಳಿಂದ ರೂಪಗೊಂಡಿದೆ. ಸುತ್ತಲೂ ಕಿಟಕಿಗಳು, ಅವುಗಳ ವಿವಿಧ ಹೂ ಸುರುಳಿಗಳಿಂದ ಅಲಂಕಾರಿಕವಾಗಿವೆ. ಕೋಟೆಯ ಒಳನುಗ್ಗುತ್ತಿದ್ದಂತೆ ದ್ವಾರ ಬಾಗಿಲ ಹೊರಗೋಡೆಗೆ ಕಲ್ಲಿನಿಂದ ರೂಪಗೊಂಡ ಗಂಡಭೇರುಂಡ ಲಾಂಛನವಿದೆ. ಪ್ರವೇಶದ್ವಾರದ ಮುಂದಿರುವ ಕಟ್ಟಡಕ್ಕೆ ನಗಾರಿ ಖಾನ್ ಎಂದು ಕರೆಯುತ್ತಾರೆ. ಬಹು ವಿನ್ಯಾಸದ ಸೃಷ್ಟಿ ಕ್ರೀಯೆ ಇದಕ್ಕೆ ಅಡಗಿದೆ. ಮೇಲೆ ಅಂತರದಲ್ಲಿ ಗಡಿಯಾರವನ್ನು ಕೂಡಿಸಲಾಗಿತ್ತು. ಅರಮನೆಯ ಒಳಗೆ ಕಟ್ಟಿಗೆಯ ತುಂಡು, ಬೃಹತ್ ಎತ್ತರದ ಕಂಬಗಳು, ಸೃಜನಶೀಲ ಕೋಣೆಗಳು, ರಾಜನ ದರ್ಬಾರ್ ಹಾಲ್ ಒಂದಕ್ಕಿಂತ ಒಂದು ಕಲಾತ್ಮಕವಾಗಿವೆ. ಅರಮನೆ ಕಟ್ಟಡ ಶೈಲಿ, ತಂತ್ರಗಾರಿಕೆ ಇಂದು ನಿಬ್ಬೆರಗಾಗುವಂತಿದೆ. ವಿರುದ್ಧ ಆಳ್ವಿಕೆ ಮಾಡುವವರನ್ನು ಚಾಣಾಕ್ಷತನದಿಂದ ಹೇಗೆ ಹಿಡಿಯಬೇಕು ಅನ್ನುವ ವಾಮ ಮಾರ್ಗದ, ಮೇಲಿನ ಕೋಣೆಯ ಸಣ್ಣ ಬಾಗಿಲ ಪ್ರವೇಶ ಅತ್ಯಂತ ಕುತೂಹಲಕಾರಿ, ಅಂತೆಯೇ ಮನೆಯ ಒಳಗೆ ಅಂದು ಯುದ್ದಕ್ಕೆ ಬಳಿಸಿಕೊಂಡ ತೋಪು, ಕತ್ತಿ, ಭರ್ಚಿ, ಕಬ್ಬಿಣದ ಸರಪಳಿ, ರಾಜನ ವೈಭವವನ್ನು ಮೆರೆಸಿದ ಸಾಂಕೇತಿಕ ಮೆರವಣಿಗೆ ವಸ್ತ್ರಾಲಂಕಾರ ಸಾಮಗ್ರಿಗಳು ಒಂದು ಮೂಲೆಯಲ್ಲಿ ಇವತ್ತಿಗೂ ಕಂಗೊಳಿಸುತ್ತಿವೆ. ಸುಮಾರು ೪೦೦ ವರ್ಷಗಳ ಇತಿಹಾಸಹೊಂದಿದ ಈ ಅರಮನೆ ಅಂದಿನ ಪ್ರಸ್ತುತ ಸ್ಥಿತಿಯನ್ನು ಇಂದು ನೋಡಲು ಲಭ್ಯವಾಗಿವೆ. ಆದರೆ ಪ್ರಕೃತಿ ವಿಕೋಪದಿಂದ ಮನೆಯ ಕಟ್ಟಡಗೋಡೆಗಳು ಕುಸಿದು ನೆಲಕಪ್ಪುತ್ತಿವೆ. ರಕ್ಷಣೆಯ ರೂಪದಲ್ಲಿ ಕೆಲಸವಾದರೆ ಅಂದಿನ ಅರಮನೆಯ ಕಲೆ, ವಾಸ್ತು, ಶೈಲಿ, ವಿನ್ಯಾಸ ಪ್ರಸ್ತುತ ಕಲಾ ಅಧ್ಯಯನಕಾರರಿಗೆ ಈ ಅರಮನೆ ಮಾರ್ಗಸೂಚಿಯಾಗುತ್ತದೆ.

**ಭಿತ್ತಿ ಚಿತ್ರಗಳು**

ಈ ಅರಮನೆಯಲ್ಲಿ ಕಂಡುಬರುವ ಚಿತ್ರಗಳು. ೧. ಭಿತ್ತಿಯ ಮೇಲೆ ಚಿತ್ರ ೨. ಕಟ್ಟಿಗೆಯ ಮೇಲೆ ಚಿತ್ರ ವಿನ್ಯಾಸ, ಈ ಎರಡು ವಿಧಾನದಲ್ಲಿ ವರ್ಗಿಸಿಕೊಂಡು ವಿವರಣೆ ಮಾಡಲಾಗುವುದು.

**೧. ಭಿತ್ತಿಯ ಮೇಲಿನ ಚಿತ್ರ ವಿನ್ಯಾಸ**

ಈ ಚಿತ್ರವನ್ನು ಅಲೋಕಿಸುತ್ತ ಹೊರಟಾಗ ರಾಜನ ದರ್ಬಾರ್ ಹಾಲ್‌ನ ಮೇಲಿರುವ ಕೋಣೆಯ ಸಣ್ಣ ಕಟ್ಟಡವಿದೆ. ಕೋಣೆಯ ನಾಲ್ಕುಬದಿಯ ಗೋಡೆಗಳಿಗೆ ಚಿತ್ರಗಳು ಇದ್ದಿರಬೇಕು. ಆದರೆ ಪ್ರಸ್ತುತ ಒಂದು ಗೋಡೆ ಮತ್ತು ಮಾಳಿಗೆ ಬಿದ್ದು ನಶಿಸಿರುವುದರಿಂದ ಮೂರು ಭಿತ್ತಿಯ ಮೇಲೆ ವರ್ಣಚಿತ್ರ ರಚನೆಯಾಗಿವೆ. ಆ ಚಿತ್ರಗಳಲ್ಲಿ ರಾಜಾಲಕ್ಷ್ಮಣ ದೇಶಮುಖ ಅವರ ಭಾವಚಿತ್ರ ಮತ್ತು ಸಂಸ್ಥಾನದ ರಾಜ ಲಾಂಛನ ಗಂಡಭೇರುಂಡ ಚಿತ್ರಗಳಿವೆ. ಹಾಗೂ ಕಿಟಕಿ ಮತ್ತು ಮಾಡದ ಸುತ್ತಪಟ್ಟಿಯ ವರ್ಣರೇಖೆ, ಇನ್ನೂ ಹಲವು ವಿವಿಧತೆಯ ವರ್ಣಚಿತ್ರಗಳು ರಚನೆಗೊಂಡಿರಬಹುದು ಭಿತ್ತಿ ಉದುರಿಹೋಗುತ್ತಿರುವುದರಿಂದ ಚಿತ್ರಗಳು ಬಹುತೇಕ ಕಾಣುತ್ತಿಲ್ಲ.

**ರಾಜಾ ಲಕ್ಷ್ಮಣ ದೇಶಮುಖ ಭಾವಚಿತ್ರ**

ಈ ಭಾವಚಿತ್ರ ೨x೨ ಅಡಿ ಉದ್ದ, ಅಗಲ ಹೊಂದಿ ವೃತ್ತಾಕಾರದ ಒಳಗೆ ರೂಪಗೊಂಡ ರಾಜಾಲಕ್ಷ್ಮಣ ದೇಶಮುಖ ಅವರ ಬಾವಚಿತ್ರ ನೈಜತೆಗೆ ಸಾಕ್ಷಿಯಾಗಿದೆ. ದರ್ಬಾರ್ ಕೋಣೆಗೆ ಪ್ರವೇಶ ಮಾಡುವ ಮುನ್ನ ಸಿದ್ಧತೆಯಾದ ರೂಪರೇಶೆ ಕ್ಷಣಗಳನ್ನು ಈ ಚಿತ್ರದಲ್ಲಿ ಹಿಡಿದಂತಿದೆ. ರಾಜನ ಮುಖದಲ್ಲಿನ ನಾವಿನ್ಯತೆ, ಕಣ್ಣಲ್ಲಿನ ಸೆಳೆತ, ಉರಿಮೀಸೆ, ತಲೆಗೆ ಸುತ್ತಿದ ಪಟಗ (ಪೀಠ), ಹಣೆಯ ಮೇಲಿನ ವಿಭೂತಿ, ಭುಜದ ಮೇಲೆ ಎಳೆ, ಎಳೆಯಾಗಿ ಬಿದ್ದ ತಲೆಗೂದಲು, ಮೈಮೇಲೆ ಧರಿಸಿದ ಕೋಟ್ (ಉಡುಪು) ಕೊರಳಲ್ಲಿ ಬಿಳಿವರ್ಣ ಮುತ್ತುಗಳ ಮಾಲೆ, ಅಲಂಕಾರ ಮಾಡಿಕೊಂಡು ಕಲಾವಿದನ ಕುಂಚಕ್ಕೆ **(Model)** ರೂಪದರ್ಶಿಯಾಗಿ ಕುಳಿತಂತಿದೆ. ಅಂತೆಯೇ ಕಲಾವಿದನ ಸೃಷ್ಟಿಕ್ರಿಯೆಯಲ್ಲಿ ಮೂಡಿಬಂದ ಲಕ್ಷ್ಮಣ ದೇಶಮುಖ ಜೀವಂತ ಚಿತ್ರಕೃತಿಯಾಗಿದೆ. ಕೆಂಪು, ಹಳದಿ, ಗುಲಾಬಿ, ಕಪ್ಪು, ಬಿಳಿ ಹಲವು ಮಿಶ್ರಿತ ವರ್ಣಗಳಿಂದ ರಚಿಸಿದ ಭಾವಚಿತ್ರವಿದು, ಹಳದಿ ವರ್ಣದ ವೃತ್ತ, ಭಾವಚಿತ್ರದ ಮೌಲ್ಯಕ್ಕೆ ಕನ್ನಡಿಯ ರೂಪವಾಗಿದೆ. ವರ್ಣಲೇಪನ ಸಂದರ್ಭದಲ್ಲಿ ಹಲವು ರೇಖೆಗಳ ಕೌಶಲ್ಯಾಭಿವೃದ್ಧಿ ಗಮನಾರ್ಹವಾಗಿವೆ.

**ರಾಜಲಾಂಛನ ಚಿತ್ರ**

ಈ ಚಿತ್ರವು ೨ x ೩ ಅಡಿ ಉದ್ದಗಲದಲ್ಲಿ ರೂಪಗೊಂಡಿದೆ. ಕಾಕಲವಾರ ದೇಶಮುಖ ಮನೆತನದ ರಾಜಲಾಂಛನ ಗಂಡಭೇರುಂಡವಾಗಿದೆ. ಎರಡು ಮುಖಗಳುಳ್ಳ ಪಕ್ಷಿಗಳು ಒಂದೇ ದೇಹ ಹೊಂದಿ, ಬಾಯಲ್ಲಿ ಹೂವಿನ ಬಳ್ಳಿಗಳನ್ನು ಕಚ್ಚಿದಂತಿದೆ. ಹಳದಿ, ಹಸಿರು, ಕಪ್ಪು ಬಿಳಿ ಮಿಶ್ರಿತ ವರ್ಣ ಸಂಯೋಜನೆಗೊಂಡು ರೇಖೆಗಳ ಮಹತ್ವಪಡಿದಿದೆ. ಕಪ್ಪು ಬಣ್ಣದ ವೃತ್ತಾಕಾರದಲ್ಲಿ ರೂಪ ಪಡೆದ ಗಂಡಭೇರುಂಡವು, ಸುತ್ತ ಹಸಿರು ಎಲೆಯ, ಮತ್ತು ಸೂರ್ಯನ ಕಿರಣಗಳಂತೆ ಗೋಚರಿಸುತಿಹವು, ಅದರ ಹಿಂದೆ ಎರಡು ರಾಜನ ಖಡ್ಗಗಳು **X** ಆಕಾರದಲ್ಲಿವೆ. ಅವುಗಳು ಬಿಳಿ ಮತ್ತು ಕಪ್ಪು ಮಿಶ್ರಿತ ವರ್ಣ, ಹಳದಿ ವರ್ಣಗಳಿಂದ ರಚನೆಗೊಂಡಿವೆ. ಗಡುಸಾದ ಕರಿಬಣ್ಣದಲ್ಲಿ ಎರಡು ತಲೆಗಳುಳ್ಳ ಪಕ್ಷಿಗಳು ಎದ್ದು ಕಾಣುತ್ತಿವೆ.

**ಕಿಟಕಿ ಮತ್ತು ಮಾಡದ ಸುತ್ತ ವರ್ಣ ಪಟ್ಟಿಗಳು**

ಈ ಎರಡು ಭಿತ್ತಿ ಚಿತ್ರಗಳಲ್ಲದೇ ಇಡೀ ಮನೆಯ ಒಳಗೆ ಕಿಟಕಿ, ಬಾಗಿಲು, ಸಣ್ಣ–ಸಣ್ಣ, ಮಾಡದ ಸುತ್ತ, ಹಸಿರು, ನೀಲಿ, ಹಳದಿ, ಸೇರಿದಂತೆ ಹಲವು ವರ್ಣಗಳಿಂದ ರಚನೆಯಾದ ಪಟ್ಟಿಕೆ, ರೇಖೆಗಳು ಅವುಗಳ ಸೌಂದರ್ಯವನ್ನು ಹೆಚ್ಚಿವೆ. ಪಟ್ಟಿಯ ಮಧ್ಯೆ ಚುಕ್ಕಿ, ಆಯತ ವೃತ್ತ, ಹೀಗೆ ಜಾಮಿತಿಕ ಆಕಾರದಲ್ಲಿ ಹಲವು ವಿನ್ಯಾಸ ರಚನೆಯಾಗಿವೆ.

### ೨. ಕಟ್ಟಿಗೆಯ ಮೇಲೆ ವರ್ಣಚಿತ್ರ ವಿನ್ಯಾಸ

ದರ್ಬಾರ್ ಹಾಲ್‌ನಲ್ಲಿರುವ ಎತ್ತರದ ಮೇಲ್ಛಾವಣಿಯ ಕಮಾನುಗಳು, ಇಡೀ ಹಾಲ್‌ನಲ್ಲಿ ನಿಂತುಕೊಂಡಿರುವ ಕಂಬಗಳು, ಕಿಟಕಿ, ಬಾಗಿಲು ಎಲ್ಲವುಗಳು ಕಟ್ಟಿಗೆಗಳಿಂದ ನಿರ್ಮಾಣಗೊಂಡು, ವಿವಿಧ ಮೂರ್ತಿ, ವಿನ್ಯಾಸ, ಹೂವಿನ ಎಲೆ, ಬಳ್ಳಿಗಳನ್ನು ಹೊಂದಿ ವರ್ಣದಿಂದ ಕಂಗೊಳಿಸುತಿಹುದು. ಅಂದಿನ ವರ್ಣಲೇಪನ ವಿಧಾನದಲ್ಲಿ ಸೃಜನಶೀಲತೆ ಮತ್ತು ಕುತೂಹಲವನ್ನು ಪ್ರತಿಬಿಂಬಿಸುತ್ತದೆ.

**ಕಮಾನುಗಳಿಗೆ ರೂಪಗೊಂಡ ಚಿತ್ರಕಲೆ**

ದರ್ಬಾರ್ ಹಾಲ್‌ನೊಳಗೆ ಇರುವ ಎರಡು ವಿಕ್ಷಣಾ ಕಮಾನ್‌ಗಳು ಎತ್ತರದಲ್ಲಿ, ಮೇಲ್ಛಾವಣಿಯ ರೂಪದಲ್ಲಿ ಸಿದ್ಧತೆಗೊಂಡಿವೆ. ಸಣ್ಣ ಕೋಣೆಯ ಆಕಾರದಲ್ಲಿವೆ. ಸಂಪೂರ್ಣ ಕಟ್ಟಿಗೆಗಳಿಂದ ಮಾಡಲಾಗಿದೆ. ಸುಂದರ ಸುರುಳಿಗಳಂತ ಕೆತ್ತನೆಯಾದ ಕಟ್ಟಿಗೆಗಳಿಗೆ ವರ್ಣವನ್ನು ಲೇಪಿಸಿ ಮತ್ತಷ್ಟು ಚಿತ್ರ ಶಿಲೆಯನ್ನಾಗಿ ಮಾಡಿದ್ದಾರೆ. ಒಂದು ಕಮಾನು (ಕೋಣೆ)ಗೆ ಗಂಡಭೇರುಂಡ ರಾಜಲಾಂಛನ, ಎರಡು ಕಾಮಧೇನುವಿನ ಉಬ್ಬುಶಿಲ್ಪಗಳು ಕೆತ್ತನೆಯಾಗಿ ಹಲವು ತಿಳಿವರ್ಣಲೇಪನದಿಂದ ಆಕರ್ಷಿಸುತ್ತವೆ. ಬಹುಶಃ ಈ ಕಮಾನಿನಲ್ಲಿ ರಾಜ ಅಥವಾ ರಾಣಿಯರು ಕುಳಿತು ಸಭೇ ವೀಕ್ಷಿಸುತ್ತಿರಬಹುದೆಂದು ಅನಿಸುತ್ತದೆ. ಮತ್ತೊಂದು ಎದುರಿಗೆ ಇರುವ ಕಮಾನು (ಕೋಣೆ)ಗೆ ವರ್ಣ ವಿನ್ಯಾಸ ಮಾಡಲಾಗಿದೆ. ಕೆಳಗಿನ ಪಟ್ಟಿಗೆ ಗಣೇಶನ ವರ್ಣ ಚಿತ್ರವಿದೆ. ಅಲ್ಲದೇ ಇಡೀ ದರ್ಬಾರ್ ಹಾಲ್‌ನ ಎಲ್ಲಾ ಕಂಬಗಳು, ಬಾಗಿಲು, ಕಿಟಕಿ ಎಲ್ಲವು ವರ್ಣಚಿತ್ರ ವಿನ್ಯಾಸ ಹೊಂದಿದೆ. ನೋಡಲು ಇದು ಬಣ್ಣದ ಮನೆ ಎಂದು ಕಲಾವಿದರು ವರ್ಣಿಸಬಹುದು.

**ಪ್ರಸ್ತುತ ಚಿತ್ರಗಳ ಸ್ಥಿತಿಗತಿ**

ಈ ಮನೆಯ ಒಳ ಭಿತ್ತಿಯಲ್ಲಿ ರಚನೆಯಾದ ಭಿತ್ತಿಚಿತ್ರಗಳು ಪ್ರಾಕೃತಿಕ ವಿಕೋಪದಿಂದ ಭಿತ್ತಿ ಉದುರಿಹೋಗುತ್ತಿದೆ. ರಾಜಾ ಲಕ್ಷ್ಮಣ ದೇಶಮುಖ ಅವರ ಭಾವಚಿತ್ರ ಮತ್ತು ರಾಜಲಾಂಛನ ಚಿತ್ರ, ಸೇರಿದಂತ ಎಲ್ಲಾ ಭಿತ್ತಿ ಚಿತ್ರಗಳ ವರ್ಣ ಪದರು-ಪದರಾಗಿ ಉದುರಿ ನೆಲಕ್ಕೆ ಬೀಳುತ್ತಿದೆ. ರಾಜನ ಮುಖಭಾಗ ವರ್ಣ ಪೂರ್ತಿ ಉದುರಿದೆ. ಭಿತ್ತಿ ಉದುರುವಿಕೆ ಒಂದಡೆಯಾದರೆ, ವರ್ಣದ ಮೇಲ್ಪದರು ಕೂಡ ಕಿತ್ತುತಿದೆ. ಕಾರಣ ಎನಿಮಲ್ ಪೇಂಟ್ಸ್, ಅಥವಾ ಏಸಿಯನ್ ಪೇಂಟ್ಸ್ ಇರಬಹುದು. ಆ ಕಾರಣಕ್ಕಾಗಿ ಉದುರುತಿದೆ ಎಂದು ಅನಿಸುತ್ತದೆ. ಕಟ್ಟಿಗೆಯ ಕಲಾಕೃತಿಗಳಿಗೆ ಲೇಪಿಸಿದ ವರ್ಣಮಾತ್ರ ಗಟ್ಟಿಯಾಗಿ ಅಪ್ಪಿಕೊಂಡಿದೆ. ಅರಮನೆಯೇ ಮಳೆಗಾಳಿಗೆ ಬಿದ್ದಿರುವುದರಿಂದ ಕಟ್ಟಿಗೆ ಆಕೃತಿಗಳು ಅಂಕು-ಡೊಂಕಾಗಿ ಮುಖಮಾಡಿಕೊಂಡಿವೆ. ಬಿದ್ದ ಗೋಡೆಗಳ ಮಧ್ಯ ಬೀಸುವ ಗಾಳಿ ಕಲಾಕೃತಿಯನ್ನು ನೋಡಲು ಆನಂದ, ಅಷ್ಟೇ ದುಃಖ.

## ಜಿಲ್ಲೆಯ ಭಿತ್ತಿಚಿತ್ರಗಳ ಕೆಲವು ಲಕ್ಷಣಗಳು

* ಸುರಪುರ ಭಿತ್ತಿಚಿತ್ರಗಳಲ್ಲಿ ಹಲವು ಪುರಾಣ ಕಥೆ, ಧರ್ಮವನ್ನಾಧರಿಸಿದ ಚಿತ್ರಗಳಾಗಿವೆ.
* ಭಾರತೀಯ ಹಲವು ಸಾಂಪ್ರದಾಯಿಕ ಕಲೆಯ ಶೈಲಿಗಳಲ್ಲಿ ಸುರಪುರದ ಗರುಡಾದ್ರಿ ಚಿತ್ರಕಲೆ ತನ್ನದೇಯಾದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.
* ಹಳದಿ, ನೀಲಿ, ಹಸಿರು, ನಸುಗೆಂಪು, ಬಣ್ಣಗಳ ಸಂಪೂರ್ಣತೆಯನ್ನು ಪಡೆದಿವೆ.
* ಕಡುಗೆಂಪು, ನೀಲಿ ಪ್ರಮುಖ ಬಣ್ಣಗಳಾಗಿವೆ.
* ನಿಸರ್ಗ ಪ್ರೇರಿತ, ರಾಮಾಯಣ, ಮಹಾಭಾರತ ಕುರಿತಂತೆ ಭಿತ್ತಿಚಿತ್ರ ರಚನೆಯಾಗಿವೆ.
* ಉತ್ತರ ಕರ್ನಾಟಕದ ನಿಪ್ಪಾಣಿ, ರಾಯಚೂರು, ನರಗುಂದ, ಸುರಪುರ ಕಡೆಗಳಲ್ಲಿಯ ಮತ್ತು ವಾಡೆ, ಹಾಗೂ ಮೇಲು ಕೋಟೆಯ ಶ್ರೀಮಠದಲ್ಲಿನ ಚಿತ್ರಗಳು ವೈಷ್ಣವ ಪರವಾದ ಭಿತ್ತಿಚಿತ್ರಗಳನ್ನು ಕಾಣುತ್ತೇವೆ.[೧೬]
* ಸುರಪುರದ ಭಿತ್ತಿಚಿತ್ರಗಳು ಖನಿಜಮೂಲ, ಸಸ್ಯಮೂಲ, ರಾಸಾಯನಿಕ ಮೂಲ ಬಣ್ಣಗಳಿಂದ ರಚನೆಗೊಂಡಿವೆ.
* ಕಾಕಲವಾರ ದೇಶಮುಖ ಸಂಸ್ಥಾನದ ಭಿತ್ತಿಚಿತ್ರಗಳಲ್ಲಿ ರಾಜನ ಆಸಕ್ತಿಯುತವಾದ ಭಿತ್ತಿಚಿತ್ರಗಳು ರಚನೆಗೊಂಡಿವೆ.
* ಕಾಕಲವಾರದ ಭಿತ್ತಿಚಿತ್ರ ಮತ್ತು ಕಟ್ಟೆಗೆಗಳ ಮೇಲೆ ಲೇಪಿಸಿದ ವರ್ಣ ರಾಸಾಯನಿಕ ವರ್ಣಗಳಾಗಿವೆ.

ಹಲವಾರು ವೈವಿಧ್ಯಮಯವಾದ ಲಕ್ಷಣಗಳಿಂದ ಕೂಡಿದ ಯಾದಗಿರಿ ಜಿಲ್ಲೆಯ ಭಿತ್ತಿಚಿತ್ರಕಲೆ ಅತ್ಯಂತ ಪ್ರಭಾವ ಪ್ರೇರಿತ ಭಿತ್ತಿಚಿತ್ರ ನೆಲೆಯಾಗಿದೆ.

**ಟಿಪ್ಪಣಿಗಳು**

೧. ೨೦೦೯ – ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಪುಟ.ಸಂ.೪೮,೪೯,೫೦,೫೧.

೨. ಅದೇ ಪುಟ.ಸಂ.೩೦

೩. ಅದೇ ಪುಟ.ಸಂ.೪೬

೪. ಅದೇ ಪುಟ.ಸಂ.೫೧

೫. ಶೇಷಶಯನ ವಿಷ್ಣು, ಈ ಕಲಾಕೃತಿಯನ್ನು ವಿವರಿಸುವಾಗ ೨೦೦೦, ನೇ ಸಾಲಿನಲ್ಲಿ ಪ್ರಕಟಗೊಂಡ, ಕೆ.ವಿ. ಕಾಳೆ ಅವರ ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ ಎನ್ನುವ ಪುಸ್ತಕದಲ್ಲಿರುವ ಅಂದಿನ ಈ ಮೂಲರೂಪ ಶೇಷಶಯನ ವಿಷ್ಣು ಕಲಾಕೃತಿಯನ್ನು ನೋಡಿ ವಿವರಣೆ ನೀಡಲಾಗಿದೆ. ಅಲ್ಲದೇ ಡಾ. ಮಲ್ಲಿಕಾರ್ಜುನ ಸಿ.ಬಾಗೋಡಿ ಅವರ ಸುರಪುರ ಚಿತ್ರಕಲೆ, ಪುಟ ಸಂ: ೫೨ ನೋಡಿ ಕೆಲವು ಅಂಶಗಳನ್ನು ಬಳಸಿಕೊಂಡು ವಿವರ ನೀಡಲಾಗಿದೆ.

೬. ೨೦೦೯, ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ ಪುಟ ಸಂ. ೫೨, ೫೩

೭. ಅದೇ ನೋಡಿ, ಪುಟಸಂ ೫೪,೫೫, ೫೬, ೫೭. ಪ್ರಸ್ತುತ ರುದ್ರಸ್ವಾಮಿ ಮಠ, ಸಂಪೂರ್ಣ ಇಲ್ಲವಾಗಿರುವುದರಿಂದ ನವೀಕರಣ ಕಟ್ಟಡ ತಲೆ ಎತ್ತುತ್ತಿದೆ. ಆದ್ದರಿಂದ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರ ಸುರಪುರ ಚಿತ್ರಕಲೆ (ರುದ್ರಸ್ವಾಮಿಮಠದ ಕುರಿತವಾದ ವಿಷಯವನ್ನು) ಪುಸ್ತಕದಲ್ಲಿನ ನೈಜ ಬರಹವನ್ನು ಇಲ್ಲಿ ಬಳಸಿಕೊಂಡಿದ್ದೇನೆ.

೮. ಅದೇ ಪುಟ.ಸಂ.೫೭

೯. ಅದೇ ಪುಟ.ಸಂ.೫೮

೧೦. ಅದೇ ಪುಟ.ಸಂ.೬೦

೧೧. ಅದೇ ಪುಟ.ಸಂ.೬೨

೧೨. ಅದೇ ಪುಟ.ಸಂ.೬೨, ೬೩

೧೩. ಅದೇ ಪುಟ.ಸಂ.೬೪

೧೪. ಅದೇ ಪುಟ.ಸಂ.೬೪

೧೫. ೨೦೧೧, ಯಾದಗಿರಿ ಸಿರಿ, ಲೇಖಕ ಪಾಟೀಲ ಬಸವನಗೌಡ ಎಸ್. ಹುಣಸಗಿ, ಪುಟ ೬೧,೬೨

೧೬. ಕರ್ನಾಟಕ ಭಿತ್ತಿಚಿತ್ರ ಪರಂಪರೆ ಅ.ಲ.ನರಸಿಂಹನ್ ೧೯೯೮ ಪುಟ ೭೨.



ಕೀಚಕನ ವಧೆ



ಸಮುದ್ರ ಮಂಥನ

ಗರುಡಾದ್ರಿ ಲಾಂಛನ ಮತ್ತು ಕಾಮಧೇನು





ಸುರಪುರ ಹಳೆಯ ದರ್ಬಾರದ ಕಿಟಕಿ ಮೇಲಿನ ವರ್ಣ ವಿನ್ಯಾಸಗಳು





ಸುರಪುರದ ಹೊಸ ದರ್ಬಾರದೊಳಗಿನ ಶೇಷಶಯನ ವಿಷ್ಣುವಿನ ಭಿತ್ತಿಚಿತ್ರ



ಕಾಕಲವಾರ ದೇಶಮುಖ
ಸಂಸ್ಥಾನದ ಲಾಂಛನ




ರಾಜ ಲಕ್ಷ್ಮಣ್ ದೇಶಮುಖ



ಕಟ್ಟಿಗೆಯ ಮೇಲೆ ರಚಿಸಿದ
ಗಣೇಶನ ಚಿತ್ರ



ಅರಮನೆಯ ಪ್ರಸ್ತುತ ಸ್ಥಿತಿ



ರಾಜ ಲಕ್ಷ್ಮಣ ದೇಶಮುಖರವರ ತೈಲ ಚಿತ್ರ



ಕಟ್ಟಿಗೆಯ ಮೇಲಿನ ವರ್ಣ ವಿನ್ಯಾಸ



ಯಶೋದೆಯೊಂದಿಗೆ ಕೃಷ್ಣ



ರಂಗಂಪೇಟೆಯ ರುದ್ರಸ್ವಾಮಿ ಮಠದ ಪಡಸಾಲೆ

# ಅಧ್ಯಾಯ ೬
# ಯಾದಗಿರಿ ಜಿಲ್ಲೆಯ ಹಸ್ತಪ್ರತಿ ಚಿತ್ರಕಲೆ

'ಹಸ್ತಪ್ರತಿ' ಎಂಬ ಪದ ಆಂಗ್ಲ ಭಾಷೆಯಲ್ಲಿ Manuscript ಎಂದು ಕರೆಯುತ್ತಾರೆ. ಕ್ರಿ.ಶ. ೧೫೬೭ರ ಸುಮಾರಿಗೆ ಈ ಪದವನ್ನು ಮಧ್ಯಯುಗದ ಲ್ಯಾಟಿನ್ ಭಾಷೆಯ Manuscripts ಎಂಬ ಪದದಿಂದ ರೂಢಿಸಿಕೊಂಡಂತಿದೆ. ಎಂ.ಎಸ್. ಕತ್ರೆಯವರ ಅಭಿಪ್ರಾಯದಂತೆ ಗ್ರಂಥಗಳನ್ನು ಹಲವಾರು ಪ್ರತಿಗಳನ್ನಾಗಿ ಪಡೆಯಲು ತಾಂತ್ರಿಕ ಸೌಲಭ್ಯವು ಇಲ್ಲದಂತಹ ಕಾಲದಲ್ಲಿ ಕೈಯಿಂದ ಬರೆಯಲಾದ ಪ್ರತಿಗಳನ್ನು ಹಸ್ತಪ್ರತಿಗಳೆಂದು ಕರೆಯಲಾಗುತ್ತದೆ ಎಂದು ಹೇಳುತ್ತಾರೆ. ಹಸ್ತಪ್ರತಿಗಳು ನಮ್ಮ ಹಿರಿಯರು ನಮಗೆ ಬಿಟ್ಟುಹೋಗಿರುವ ಅಮೂಲ್ಯ ಆಸ್ತಿಗಳಾಗಿದ್ದು, ಇವು ನಮ್ಮ ಸಂಸ್ಕೃತಿಯ ಪ್ರತೀಕದಂತಿವೆ. ಇಂತಹ ಹಸ್ತಪ್ರತಿಗಳಲ್ಲಿ ಚಿತ್ರಗಳೂ ಕಾಣಿಸುವುದುಂಟು. ಹಸ್ತಪ್ರತಿಗಳ ಕಥಾವಸ್ತುವಿನ ಸನ್ನಿವೇಶಕ್ಕನುಗುಣವಾಗಿ ಚಿತ್ರಿಸಲಾದ ಚಿತ್ರಗಳಿಗೆ ಹಸ್ತಪ್ರತಿ ಚಿತ್ರಗಳೆಂದು ಕರೆಯಬಹುದಾಗಿದೆ. ಪ್ರಾಚೀನ ಕಾಲದಲ್ಲಿ ಪುರಾಣ, ಕಾವ್ಯವಗಳಲ್ಲಿನ ಸನ್ನಿವೇಶಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಬರೆಯಿಸಿ ಮೂಲ ಗ್ರಂಥಕ್ಕೆ ಸೇರಿಸಲಾಗುತ್ತಿತ್ತು, ಈ ರೀತಿಯ ಚಿತ್ರಿತ ಹಸ್ತಪ್ರತಿಗಳಲ್ಲಿ ಸಾಹಿತ್ಯ ಮತ್ತು ಚಿತ್ರಕಲೆ ಎರಡೂ ಸರಿಸಮನಾಗಿ ಗುರುತಿಸಲ್ಪಡುತ್ತವೆ. ಹಸ್ತಪ್ರತಿ ಚಿತ್ರಕಲೆ ಎಂದರೆ ನಮ್ಮ ಪೂರ್ವಜರ ಸಾಂಸ್ಕೃತಿಕ ಬದುಕಿನ ದಾಖಲೆಯಾಗಿದೆ. ಇಂತಹ ಹಸ್ತಪ್ರತಿ ಚಿತ್ರಗಳನ್ನು ರಚಿಸುವ ಮೂಲಕ ಕನ್ನಡಿಗರು ಕಲಾಕಾರರಾಗಿ, ಇವುಗಳನ್ನು ಬರೆಯಿಸುವುದರೊಂದಿಗೆ ಕಲಾಪೋಷಕರೂ ಎನಿಸಿಕೊಂಡಿದ್ದಾರೆ. ಮಾತ್ರವಲ್ಲದೇ ಈ ಪರಂಪರೆಯನ್ನು ಜೀವಂತವಾಗಿಸುವುದರ ಮೂಲಕ ನಮ್ಮ ನಾಡನ್ನು ಸಾಂಸ್ಕೃತಿಕವಾಗಿ ಶ್ರೀಮಂತಗೊಳಿಸಿದ್ದಾರೆ. ಹಸ್ತಪ್ರತಿಗಳಲ್ಲಿನ ಚಿತ್ರಗಳು ಆಯಾ ಕಾಲಘಟ್ಟಗಳ ಪರಿಮಿತಿಯಲ್ಲಿ ರಚಿಸಲ್ಪಟ್ಟಿರುವ, ಆಯಾ ಭಾಗದ ಜನಜೀವನದ ಕಲೆ, ಸಾಹಿತ್ಯ

ಮತ್ತು ಸಂಸ್ಕೃತಿಯನ್ನು ಸಾರುವ ಕಲಾ ಕೋಶಗಳಂತಿವೆ. ಸಾಹಿತ್ಯಿಕ ಬೆಳವಣಿಗೆಯಲ್ಲಿ ತಾಳೆಗರಿಯು ಅತ್ಯುತ್ತಮ ಮಾಧ್ಯಮವೆಂದು ಸ್ವೀಕೃತವಾದ ಬಳಿಕ ಹಸ್ತಪ್ರತಿ ಬರವಣಿಗೆಯಲ್ಲಿ ಮಹತ್ವ ಪೂರ್ಣ ಬದಲಾವಣೆ ಕಂಡುಬಂದವು. ಅದರಂತೆ ಹಸ್ತಪ್ರತಿಯೊಳಗೆ ಚಿತ್ರ ರಚಿಸುವ ಕಾರ್ಯವು ಕರ್ನಾಟಕದಲ್ಲಿ ವಿಭಿನ್ನ ನೆಲೆಯಲ್ಲಿ ಪ್ರಾರಂಭಗೊಂಡಿತು. ಕನ್ನಡ ಸಾಹಿತ್ಯದಲ್ಲಿ ಆದಿಕವಿ, ನಾಡೋಜ, ಕವಿಕುಲಗುರು ಎಂಬಿತ್ಯಾದಿ ಖ್ಯಾತಿಯನ್ನು ಹೊಂದಿದ ಪಂಪನ ಯುಗವನ್ನು 'ಮಹಾಕಾವ್ಯಗಳ ಯುಗ' ಕನ್ನಡ ಸಾಹಿತ್ಯದ ಸುವರ್ಣಯುಗ ಎಂದೇ ಬಿಂಬಿಸಲಾಗುತ್ತದೆ. ಈ ಯುಗದಲ್ಲಿ ಆದಿಪುರಾಣ, ವಿಕ್ರಮಾರ್ಜುನ ವಿಜಯ, ಶಾಂತಿ ಪುರಾಣ, ಮಲ್ಲಿನಾಥ ಪುರಾಣಗಳಂತಹ ಅನೇಕ ಕನ್ನಡದ ಮೇರು ಕೃತಿಗಳು ತಾಳೆಗರಿಯಲ್ಲಿ ರಚನೆಗೊಂಡವು. ಅದರಂತೆಯೇ ಕನ್ನಡ, ಪ್ರಾಕೃತ ಭಾಷೆಯ ಮತ್ತು ಅನೇಕ ಚಿತ್ರಗಳನ್ನು ಒಳಗೊಂಡ ಜೈನಧರ್ಮದ ಮಹಾನ್ ಗ್ರಂಥಗಳಾದ ಧವಳ, ಜಯಧವಳ ಮತ್ತು ಮಹಾಧವಳಗಳು ಜಗತ್ತಿನ ಹಸ್ತಪ್ರತಿ ಚರಿತ್ರೆಯಲ್ಲಿ ಇಂದಿಗೂ ಅದ್ವಿತೀಯವಾಗಿವೆ. ಈ ಮೇಲೆ ಹೇಳಿರುವಂತೆ ಸಾಹಿತ್ಯಿಕ ಬೆಳವಣಿಗೆಯಲ್ಲಿ ತಾಳೆಗರಿಯು ಅತ್ಯಂತ ಜನಪ್ರೀಯ ಮಾಧ್ಯಮವಾಗಿದ್ದು, ಈ ಮಾಧ್ಯಮದ ಹಸ್ತಪ್ರತಿಗಳಲ್ಲಿ ಎರಡು ಹಂತಗಳನ್ನು ಗುರುತಿಸಬಹುದು, ತಾಳೆಗರಿಯನ್ನು ಮರದಿಂದ ಬಿಡಿಸಿ ಆರೈಕೆಮಾಡಿ ಹದಗೊಳಿಸುವುದು ಪ್ರಾಥಮಿಕ ಹಂತವಾದರೆ, ಸಿದ್ಧಗೊಂಡ ತಾಳೆಗರಿಯಲ್ಲಿ ಕೃತಿಯ ಪಠ್ಯಕ್ಕೆ ಸಮನಾಗಿರುವಂತೆ, ಕವಿಯ ಪರಿಕಲ್ಪನೆಗೆ ರೂಪ ನೀಡುವುದು ಮತ್ತೊಂದು ಹಂತ, ಒಂದು ಸಾಹಿತ್ಯ ಕೃತಿಗೆ ಸ್ಥೂಲವಾಗಿ ಕೃತಿಯನ್ನು ಸಾಂಕೇತಿಸುವ, ಕೃತಿ ಪಾರಮ್ಯವನ್ನು ಸೂಚಿಸುವ ಕಲಾಕೃತಿ ಫಲಕದ ಮೇಲೆ ಇದ್ದರೆ, ಕೃತಿಗೆ ವಿವರವಾದ ಚಿತ್ರಗಳನ್ನು ತಾಳೆಗರಿ ಅಥವಾ ಕಾಗದದ ಮೇಲೆ ರಚಿಸಲಾಗಿರುತ್ತದೆ. ಸುರಪುರ ಆಸ್ಥಾನ ಕಲಾವಿದರಿಂದ ಈ ಎರಡೂ ಬಗೆಯಲ್ಲಿ ವಿಂಗಡಿಸಬಹುದಾಗಿದೆ. ೧. ಫಲಕದ ಮೇಲಿನ ಚಿತ್ರಗಳು, ೨. ಕಾಗದದ ಮೇಲಿನ ಚಿತ್ರಗಳು.[೧]

**೧. ಫಲಕದ ಮೇಲಿನ ಚಿತ್ರಗಳು**

ಹಸ್ತಪ್ರತಿಗಳು ತಾಳೆಗರಿ ಕಾಗದಗಳಂತಹ ಯಾವುದೇ ಮಾಧ್ಯಮದಲ್ಲಿ ಸಿದ್ಧಗೊಂಡಿದ್ದರೂ ಅವುಗಳನ್ನು ಸಂರಕ್ಷಿಸುವಲ್ಲಿ ಫಲಕಗಳು ಬಹುಮುಖ್ಯ ಪಾತ್ರವಹಿಸುತ್ತವೆ. ಹಸ್ತಪ್ರತಿಗಳಿಗೆ ಬಂದೊದಗುವ ಅನೇಕ ಬಗೆಯ ಆಪತ್ತುಗಳಿಂದ ಸಂರಕ್ಷಿಸಲೂ ಈ ಫಲಕಗಳು ರಕ್ಷಣೆ ನೀಡುತ್ತವೆ. ಮಾತ್ರವಲ್ಲದೇ ಮೂಲ ಹಸ್ತಪ್ರತಿಗಳ ಆಯುರ್ಮಾನವನ್ನು ವೃದ್ಧಿಸುತ್ತವೆ. ಮರ, ಲೋಹ, ಆನೆ, ದಂತಗಳಂತಹ ಫಲಕಗಳ ಮೇಲೆ ಆಯಾ ಹಸ್ತಪ್ರತಿಗಳ ಕಥಾವಸ್ತುವಿಗೆ ಸಂಬಂಧಿಸಿದಂತೆ ಚಿತ್ರಗಳು ರಚಿಸಿರುವುದುಂಟು, ಸುರಪುರ ಕಲೆಯಲ್ಲಿ ಚಿತ್ರಿತ ಹಸ್ತಪ್ರತಿಗಳು ಕಂಡುಬರುವುದು ಅತ್ಯಂತ ವಿರಳ, ಈ ಚಿತ್ರಿತ ಹಸ್ತಪ್ರತಿಗಳ ಸಂರಕ್ಷಣೆಗೆಂದು ಮಾಡಲಾದ ಮರದ ಕಟ್ಟುಗಳ ಮೇಲೆ ಚಿತ್ರಿಸಿದ ಒಂದೆರಡು ಫಲಕಗಳು ಕಂಡುಬಂದಿದ್ದು, ಈ ಚಿತ್ರಗಳ ವಿಷಯ, ಲಕ್ಷಣಗಳು ಇಂತಿವೆ.[೨]

೧. ಗಣೇಶ ಮತ್ತು ಸರಸ್ವತಿ

ಈ ಚಿತ್ರದ ಎಡಭಾಗದಲ್ಲಿರುವ ನವಿಲಿನ ಮೇಲೆ ಕುಳಿತಿರುವ ಸರಸ್ವತಿಯು ವೀಣೆಯನ್ನು ನುಡಿಸುತ್ತಿದ್ದಾಳೆ ಸರಸ್ವತಿಯು ಮೈ ಬಣ್ಣ ಗೌರವರ್ಣದಲ್ಲಿ ತೋರಿಸಿದರೆ, ನವಿಲನ್ನು ಹಸಿರು, ಹಳದಿ ಮತ್ತು ನೀಲಿ ವರ್ಣಗಳಿಂದ ಬಹು ಸುಂದರವಾಗಿ ಚಿತ್ರಿಸಿದೆ. ಸರಸ್ವತಿಯು ನುಡಿಸುತ್ತಿರುವ ವೀಣೆಯೂ ಹಳದಿ ವರ್ಣದಲ್ಲಿದೆ. ಚಿತ್ರದ ಬಲಭಾಗದಲ್ಲಿರುವ ಗಣೇಶನು ಕೆಂಪು ವರ್ಣದ ಮೈಬಣ್ಣವನ್ನು ಹೊಂದಿದ್ದು, ಧರಿಸಿರುವ ವಸ್ತ್ರಗಳು ಹಳದಿ ವರ್ಣದಲ್ಲಿವೆ. ಇವರೀರ್ವರ ಮಧ್ಯದಲ್ಲಿ ಅಲಂಕಾರಿಕ ಹೂಕುಂಡವೊಂದನ್ನು ತೋರಿಸಿದೆ. ಚಿತ್ರದ ಹಿನ್ನೆಲೆಯು ಕೆಂಪು ವರ್ಣದಲ್ಲಿದ್ದು, ಸುತ್ತಲೂ ಹಳದಿ ವರ್ಣದ ಪಟ್ಟಿಕೆಯಿದೆ.[೩]

೨. ಶಿವ ಪಾರ್ವತಿ

ಫಲಕದ ಮಧ್ಯದಲ್ಲಿ ಎತ್ತರವಾದ ಪೀಠವೊಂದರ ಮೇಲೆ ಎದುರು ಮುಖವಾಗಿ ಶಿವನು ಕುಳಿತಿದ್ದಾನೆ. ಕಂದುಗೆಂಪುವರ್ಣದ ಹಿನ್ನಲೆಯಲ್ಲಿ ಅತ್ಯಂತ ಕಿರಿದಾಗಿ ಚಿತ್ರಿಸಲಾದ ಈ ಚಿತ್ರದಲ್ಲಿ ಶಿವನ ತೊಡೆಯ ಮೇಲೆ ಪಾರ್ವತಿಯು ಕುಳಿತಿದ್ದಾಳೆ. ಹುಲಿಯ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿರುವ ಶಿವನ ಮೈ ಬಣ್ಣವು ಹಳದಿ ವರ್ಣದಲ್ಲಿದ್ದರೆ, ಪಾರ್ವತಿಯ ಮೈಬಣ್ಣ ಕೆಂಪು ವರ್ಣದಲ್ಲಿದೆ. ಪಾರ್ವತಿಯು ತೊಟ್ಟಿರುವ ಸೀರೆಯೂ ಕೆಂಪು ವರ್ಣದಲ್ಲಿದೆ. ಶಿವನ ಪಾದದ ಬಳಿ ನಂದಿಯನ್ನು ಹಳದಿ ವರ್ಣದಲ್ಲಿ ಅತ್ಯಂತ ಕಿರಿದಾಗಿ ಚಿತ್ರಿಸಿದೆ. ಹಸ್ತಪ್ರತಿ ಶಾಸ್ತ್ರಜ್ಞ ಡಾ.ಬಿ.ಕೆ. ಹಿರೇಮಠ ಅವರು ಈ ರೀತಿಯ ಚಿತ್ರಗಳನ್ನು ಮತಾತೀತ ವರ್ಣ ಚಿತ್ರಗಳೆಂದು ಕರೆದಿದ್ದಾರೆ.[೪]

೨. ಕಾಗದ ಮೇಲಿನ ಚಿತ್ರಗಳು

ಈ ಪ್ರಕಾರದಲ್ಲಿ ಎರಡು ರೀತಿಯಲ್ಲಿ ಚಿತ್ರಗಳು ಅಭಿವ್ಯಕ್ತಿಗೊಂಡಿರುವುದು ಕಂಡುಬರುತ್ತದೆ. ೧. ರೇಖಾಚಿತ್ರ ಹಸ್ತಪ್ರತಿ. ೨. ವರ್ಣಚಿತ್ರಗಳುಳ್ಳ ಹಸ್ತಪ್ರತಿಗಳು

೧. ರೇಖಾಚಿತ್ರಗಳುಳ್ಳ ಹಸ್ತಪ್ರತಿಗಳು

ಸುರಪುರ ರಾಜರ ಅಷ್ಟದಿಗ್ಬಂಧನ, ಹಸ್ತಪ್ರತಿಯೊಂದನ್ನು ಹೊರತು ಪಡಿಸಿದರೆ ರೇಖಾಚಿತ್ರಗಳುಳ್ಳ ಮತ್ತ್ಯಾವ ಹಸ್ತಪ್ರತಿಗಳು ಕಂಡುಬರುವುದಿಲ್ಲ.

* ಸುರಪುರ ರಾಜರ ಅಷ್ಟದಿಗ್ಬಂಧನ

ಸಂಸ್ಥಾನ ಕಾಲದಲ್ಲಿನ ಪ್ರಮುಖರೆಂದೇ ಗುರುತಿಸಲಾಗುವ ಪಾಪಯ್ಯ ಶಾಸ್ತ್ರಿಯವರು ಕವಿತ್ವಮಾಡಿ ಬರೆದ ಈ ಹಸ್ತಪ್ರತಿಯಲ್ಲಿ ಆಸ್ಥಾನ ಕಲಾವಿದ ಗರುಡಾದ್ರಿ ಬೆನಕಯ್ಯನಿಂದ ಚಿತ್ರಗಳನ್ನು ಬರೆಯಿಸಲಾಗಿದೆ. ಈ ಹಸ್ತಪ್ರತಿಯಿಂದ ಮುಡಬೂಳದ ಕಸ್ತೂರಿಗುಡಿ ಹವಲ್ದಾರ ಇವರ ಮನೆಯಲ್ಲಿ ಸಂಗ್ರಹಗೊಂಡಿದೆ.

ಸುಮಾರು ಹತ್ತು ಪುಟಗಳನ್ನು ಒಳಗೊಂಡ ಈ ಹಸ್ತಪ್ರತಿಯಲ್ಲಿನ ಚಿತ್ರಗಳು ರೇಖಾ ಪ್ರಧಾನವಾಗಿವೆ. ಈ ಚಿತ್ರಗಳಲ್ಲಿ ಸುರಪುರ ಸಂಸ್ಥಾನದ ಲಾಂಛನ, ಖಡ್ಗ, ಪಲ್ಲಕ್ಕಿ, ಮತ್ಸ್ಯ, ಶಂಖ ಇತ್ಯಾದಿ ಸಾಂಕೇತಿಕ ಅರ್ಥ ಕೊಡುವ ಚಿತ್ರಗಳೊಂದಿಗೆ ಬರವಣಿಗೆಯ ರೂಪದಲ್ಲಿ ದಿಗ್ಬಂಧನಗಳನ್ನು ಬರೆಯಲಾಗಿದೆ.[೫]

**೨ ವರ್ಣ ಚಿತ್ರಗಳುಳ್ಳ ಹಸ್ತಪ್ರತಿಗಳು**

ಲಕ್ಷ್ಮೀಶನ ಜೈಮಿನಿ ಭಾರತ, ವಿರೂಪಾಕ್ಷ ಪಂಡಿತ ವಿರಚಿತ ಚೆನ್ನಬಸವ ಪುರಾಣ, ಮತ್ತು ಸುರಪುರ ಪಂಚಾಂಗ, ಈ ಕೃತಿಗಳಲ್ಲಿ ವರ್ಣ ಪ್ರಧಾನವಾದ ಹಸ್ತಪ್ರತಿ ಚಿತ್ರಗಳು ಕಂಡುಬರುತ್ತವೆ. 'ಜೈಮಿನಿ ಭಾರತ' ಹಸ್ತಪ್ರತಿಯಲ್ಲಿನ ಚಿತ್ರಗಳು ರಾಮಾಯಣ, ಮಹಾಭಾರತ, ವಿಷಯ ಕುರಿತಾಗಿದ್ದರೆ, ಚೆನ್ನಬಸವ ಪುರಾಣ, ಹಸ್ತಪ್ರತಿಯಲ್ಲಿನ ಚಿತ್ರಗಳು ಶಿವನ ಲೀಲೆಗಳಿಗೆ ಸಂಬಂಧಿಸಿದಲ್ಲದೇ ಕಥಾನಾಯಕ ಚೆನ್ನಬಸವಣ್ಣ ಹಾಗೂ ಅಂದಿನ ಐತಿಹಾಸಿಕ ಘಟನೆಗಳನ್ನು ಒಳಗೊಂಡಿವೆ. ಸುರಪುರ ಪಂಚಾಂಗ ಹಸ್ತಪ್ರತಿಯಲ್ಲಿನ ಚಿತ್ರಗಳು ಪಂಚಾಂಗದ ಮೂಲ ಸ್ವರೂಪವನ್ನು ಪ್ರತಿಪಾದಿಸುತ್ತವೆ. ಈ ಎಲ್ಲಾ ಚಿತ್ರಗಳು ಸುರಪುರ ಆಸ್ಥಾನ ಕಲಾವಿದರಲ್ಲೇ ಶ್ರೇಷ್ಠನಾದ ಗರುಡಾದ್ರಿ ಮೊದಲ ಬಾನಯ್ಯನಿಂದ ಚಿತ್ರಿಸಲ್ಪಟ್ಟಿವೆ.[೬]

*** ಜೈಮಿನಿ ಭಾರತ**

ಜೈಮಿನಿ ಭಾರತವನ್ನು ರಚಿಸಿದವನು ಲಕ್ಷ್ಮೀಶನು. ಇವನು ನೂತನ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ದೇವಪುರದವನು. ಲಕ್ಷ್ಮೀಶ ಕವಿಯ ಕಾಲದ ಬಗ್ಗೆ ಯೋಚಿಸುವವರಿಗೆ ದೇವಪುರದಲ್ಲಿ ದೊರೆತ 'ಕನ್ನಡ ಜೈಮಿನಿ ಭಾರತ' ಹಸ್ತಪ್ರತಿಯೊಂದು ಕವಿಯ ಕಾಲವನ್ನು ಖಚಿತವಾಗಿ ನಿರ್ಧರಿಸುತ್ತದೆ. ಈ ಹಸ್ತಪ್ರತಿಯನ್ನು ದಿ. ಕಪಟರಾಳ ಕೃಷ್ಣರಾಯರು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂಗ್ರಹಿಸಿಕೊಟ್ಟಿದ್ದು. ಇಂದು ಆ ಮೂಲ ಹಸ್ತಪ್ರತಿಯು ಅಲ್ಲಿ ಕಂಡುಬರುತ್ತಿಲ್ಲ. ಆದರೆ ಗರುಡಾದ್ರಿಯವರಿಂದ ಚಿತ್ರಿಸಲ್ಪಟ್ಟ 'ಜೈಮಿನಿ ಭಾರತ' ಚಿತ್ರಿತ ಹಸ್ತಪ್ರತಿ ಖಾಸಗಿ ಸಂಗ್ರಹಕಾರರಲ್ಲಿದೆ. ಈ ಹಸ್ತಪ್ರತಿ ಹಾಳೆಯೊಂದರ ಹಿಂಬದಿಯಲ್ಲಿ ೧೮೦೧ರಲ್ಲಿ ಈ ಕೃತಿಯನ್ನು ಪೂರ್ಣಗೊಳಿಸಲಾಯಿತು. ಎಂದು ಬರೆಯಲಾಗಿದೆ.[೭]

**ಕಲಾಕೃತಿಗಳು:** ೧. ಅಶೋಕವನದಲ್ಲಿ ಸೀತೆ, ೨. ರಾಮಸೀತೆಯರ ದರ್ಶನ, ೩. ಬಬ್ರುವಾಹನ–ಅರ್ಜುನರ ಕಾಳಗ.

*** ಚೆನ್ನಬಸವ ಪುರಾಣ**

ವಿರೂಪಾಕ್ಷ ಪಂಡಿತ ವಿರಚಿತ ಚೆನ್ನಬಸವ ಪುರಾಣ ಹಸ್ತಪ್ರತಿಗಳಲ್ಲಿ ಚೆನ್ನಬಸವಣ್ಣನಿಗೆ

ಸಂಬಂಧಿಸಿಂದಂತೆ ಮತ್ತು ಅಂದಿನ ಐತಿಹಾಸಿಕ ಘಟನೆಗಳೂ ಒಳಗೊಂಡಂತೆ ಅನೇಕ ಚಿತ್ರಗಳು ಕಂಡುಬರುತ್ತವೆ.

**ಕಲಾಕೃತಿಗಳು:** ೧. ಶಿವನ ಒಡ್ಡೋಲಗ, ೨. ಸಿದ್ಧರಾಮೇಶ್ವರನಿಗೆ ಶಿವತತ್ವ ಬೋಧನೆ, ೩. ಪಾರ್ವತಿಯ ಪ್ರಶ್ನೆ, ೪. ಅಕ್ಕನಾಗಮ್ಮನ ಸ್ವಪ್ನ, ೫. ಬಿಜ್ಜಳನಿಗೆ ಚಾಡಿ ಹೇಳಿದ್ದು, ೬. ಚೆನ್ನಬಸವನ ಬಾಲಲೀಲೆ, ೭. ದಕ್ಷಾಧ್ವರ ಧ್ವಂಸ ಪ್ರಸಂಗ, ೮. ಬಿಜ್ಜಳನ ಸಭೆಗೆ ಬಸವಣ್ಣನವರು ಬಂದದ್ದು, ೯. ಚಂದ್ರೋದಯದ ವರ್ಣನೆ, ೧೦. ಉರಿಲಿಂಗ ಉದ್ಭವ, ೧೧. ಈಶ್ವರನ ಅರ್ಧನಾರೀಶ್ವರತ್ವ, ೧೨. ವಿಷ್ಣುವಿಗೆ ಚಕ್ರಪ್ರಧಾನ, ಹೀಗೆ ಹಲವಾರು ವರ್ಣ ಪ್ರಧಾನವಾದ ಚಿತ್ರಗಳಿವೆ.[೮]

*** ಸುರಪುರ ಪಂಚಾಂಗ**

ಈ ಮೇಲೆ ವಿವರಿಸಿದ ಜೈಮಿನಿ ಭಾರತ ಮತ್ತು ಚೆನ್ನಬಸವ ಪುರಾಣದ ಕಥಾವಸ್ತುವಿನ ಸನ್ನಿವೇಶಗಳಿಗೆ ಸಂಬಂಧಿಸಿದ ಚಿತ್ರಗಳೊಂದಿಗೆ ಪಂಚಾಂಗಕ್ಕೆ ಸಂಬಂಧಿಸಿದಂತೆಯೂ ಆಸ್ಥಾನ ಕಲಾವಿದರು ಚಿತ್ರರಚನೆ ಮಾಡಿದ್ದಾರೆ. ಸುರಪುರ ಆಸ್ಥಾನ ಪಂಡಿತರಾದ ಹೆಬ್ಬಾಳದ ರಾಮಶಾಸ್ತ್ರಿಗಳು ಜ್ಯೋತಿಷ್ಯ ಶಾಸ್ತ್ರದಲ್ಲಿ ಪಾಂಡಿತ್ಯವನ್ನುಳ್ಳವರು. ಈ ಮನೆತನದವರು ಪಂಚಾಂಗವನ್ನು ಸಹ ಹೊರಡಿಸುತ್ತಿದ್ದರು. ಇವರು ಪಂಚಾಗದಲ್ಲಿನ ವಿಷಯಕ್ಕೆ ಸಂಬಂಧಿಸಿದಂತೆ ಗರುಡಾದ್ರಿಯವರಿಂದ ಚಿತ್ರಗಳನ್ನು ಬರೆಯಿಸಿದ್ದಾರೆ. ಒಂದೆರಡು ಪಂಚಾಂಗಗಳು ಈಗಲೂ ನೋಡಲು ಸಿಗುತ್ತವೆ. ಸುರಪುರ ಪಂಚಾಂಗವೆಂದೇ ಪ್ರಸಿದ್ಧಿ ಪಡೆದ ಈ ಪಂಚಾಂಗವನ್ನು ಇಂದು ಅದೇ ವಂಶಸ್ಥರು ಪ್ರತೀವರ್ಷ ಹೊರಡಿಸುತ್ತ ಬಂದಿದ್ದಾರೆ. ಈಗ ನಮಗೆ ಕಂಡುಬಂದಿರುವ ಪಂಚಾಂಗ ಸುಮಾರು ಹದಿನೈದು ಪುಟಗಳನ್ನು ಹೊಂದಿದೆ. ಪಂಚಾಂಗದ ಮೊದಲ ಪುಟದಲ್ಲಿ ಗಣೇಶ ಸರಸ್ವತಿಯ ಚಿತ್ರಗಳಲ್ಲದೇ ಸುರಪುರ ಕಲೆಯಲ್ಲಿ ಕಾಣಸಿಗುವ ಹೂ–ಗಿಡಗಳ ಮಾದರಿಗಳು ಮತ್ತು ಅಕ್ಷರ ವಿನ್ಯಾಸಗಳಿವೆ. ಈ ಪಂಚಾಗ ಚಿತ್ರ ರಚನೆಗೆ ಕೆಂಪು, ಹಳದಿ ಹಾಗೂ ನೀಲಿವರ್ಣಗಳೊಂದಿಗೆ ಮಿಶ್ರವರ್ಣಗಳನ್ನು ಬಳಸಲಾಗಿದೆ.[೯]

ಯಾದಗಿರಿ ಜಿಲ್ಲೆಯಲ್ಲಿ ಹಸ್ತಪ್ರತಿ ಚಿತ್ರಕಲೆಯ ಪ್ರಮುಖ ನೆಲೆ ಸುರಪುರ ಎಂದು ಖ್ಯಾತಿ ಪಡೆದರೆ ಮತ್ತೊಂದು ಗಮನಾರ್ಹ ಹಸ್ತಪ್ರತಿ ಚಿತ್ರಕಲೆ ಪ್ರಸ್ತುತ ಅಧ್ಯಯನದಿಂದ ಬೆಳಕು ಕಾಣುತ್ತಿರುವುದು ಮತ್ತೊಂದು ಹರ್ಷದ ಸಂಗತಿಯಾಗಿದೆ. ಶಹಾಪುರ ತಾಲೂಕಿನ ಗೋಗಿ ಗ್ರಾಮದ ಖ್ಯಾತ ಸಂಶೋಧಕರಾದ ಡಿ.ಎನ್. ಅಕ್ಕಿಯವರ ಸಂಗ್ರಹದಲ್ಲಿರುವ ಹಸ್ತಪ್ರತಿಗಳಲ್ಲಿ ಹಲವು ಚಿತ್ರಗಳು ಕಂಡುಬರುತ್ತವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

*** ಮಾಟ–ಮಂತ್ರ ಪುಸ್ತಕ**

ಡಿ.ಎನ್. ಅಕ್ಕಿಯವರ ಮನೆಯಲ್ಲಿ ಸಂಗ್ರಹಗೊಂಡ ಈ ಮಾಟಮಂತ್ರ ಹಸ್ತಪ್ರತಿಗಳಲ್ಲಿ

ಹಲವಾರು ರೇಖಾಚಿತ್ರಗಳು ಕಂಡುಬರುತ್ತವೆ. ಗುಲಬರ್ಗಾ ಜಿಲ್ಲೆ ಜೇವರ್ಗಿ ತಾಲೂಕಿನ ಮಳ್ಳಿ ಗ್ರಾಮದಲ್ಲಿ ಚೋಳಪ್ಪ ಪಂಡಿತ ಎಂಬುವವರು ಮಂತ್ರಮೋಡಿಯಲ್ಲಿ ಪರಿಣಿತರು. ಈ ಮಾಟಮಂತ್ರದ ಹಸ್ತಪ್ರತಿ ಸುಮಾರು ೨೦೦ ವರ್ಷಗಳಷ್ಟು ಹಳೆಯದಾಗಿದೆ. ಇದನ್ನು ಜಯಣ್ಣ ಪಂಡಿತರು ಎಂಬುವರು ಡಿ.ಎನ್. ಅಕ್ಕಿಯವರಿಗೆ ಕೊಟ್ಟಿದ್ದಾರೆ. ಸುರಕ್ಷತೆಯಿಂದ ಕಾಪಾಡಿಕೊಂಡ ಅಕ್ಕಿಯವರ ಮನೆಯಲ್ಲಿ ಈಗಲೂ ನೋಡಲು ಲಭ್ಯವಿದೆ. ಈ ಹಸ್ತಪ್ರತಿ ಕನ್ನಡ ಲಿಪಿಯಾಗಿದ್ದು. ಭಾಷೆ ಸಂಸ್ಕೃತ ಮತ್ತು ಕನ್ನಡ ಬಳಕೆಗೊಂಡಿದೆ. ಸುಮಾರು ೧೯-೧೯ನೇ ಶತಮಾನದ್ದು ಎಂದು ಹೇಳಬಹುದಾಗಿದೆ.

ಹಸ್ತಪ್ರತಿಯನ್ನು ತೆರೆದು ನೋಡಿದಾಗ ಮೊದಲ ಹಾಳೆಗೆ ದೇವಿಯ ಕುರಿತಾದ ಸ್ತೋತ್ರ ಇದೆ. ಅದು ಈ ಕೆಳಗಿನಂತೆ ಬರೆಯಲಾಗಿದೆ.

ಶ್ರೀಚಂದ್ರಮತಿಬಾಯಿ ಜಿ ಪ್ರಸ
ನ್ನ ಶ್ರೀದೇವಿಯ ಪ್ರಸನ್ನರು॥
ವಾರಿಸ್ವನಾಥ ಪ್ರಸನ್ನ॥ ದನಂಜಯ
ವಿಶಮಕ್ಕೆ ಶುಭಾಮಸ್ತು ನಿರ್ವ್ವಿಜ್ಞಮಸ್ತು
ಕರ್ಮ್ಮ ಶಿದ್ದಿರಸ್ತು ತದ್ಯಥಾ ಮಾತ್ರ ತಂತು
ಚೌದಯ್ಯ ಪರಿಹಾರ್ಕಾರಸಂ ವಿಜಿತಂ
ನಾನಾರತ್ನ ವಿಚಿತ್ರಃ॥೧॥
ಶ್ರೀ ಚಂದ್ರಮತಿ ಬಾಯಿಜಿ ಪ್ರಸನ್ನಃ
ಶ್ರೀ ಮರಳಿ ವಾರಿಸ್ವನಾಥ ಪ್ರಸನ್ನ
ಶ್ರಿ ದೇವಿ ಪ್ರಸನ್ನಃ॥ ಶ್ರೀ ಶ್ರೀ ಶ್ರೀ॥

ಹೀಗೆ ಮಂತ್ರದ ಸಾಲುಗಳು ರಚನೆಗೊಂಡು ಅಕ್ಷರದ ಸುತ್ತ ಎರಡು ದೊಡ್ಡ ಪಟ್ಟಿಗಳಲ್ಲಿ ವಿವಿಧ ಹೂವಿನ ವಿನ್ಯಾಸ ರೇಖೆಗಳೊಂದಿಗೆ ಚಿತ್ರಿತವಾಗಿದೆ. ನಾಲ್ಕು ದಳದ ಹೂಗಳು ಎಲೆ, ಬಳ್ಳಿಗಳೊಂದಿಗೆ ಸಂಯೋಜನೆಗೊಂಡು ರೇಖೆಯಲ್ಲಿ ಅರಳಿವೆ. ಇದೇ ತರಹದ ಮತ್ತೊಂದು ಚಿಕ್ಕ ಕೃತಿಯ ಹಸ್ತಪ್ರತಿಗಳಲ್ಲಿ ಹಲವಾರು ಚಿತ್ರಗಳಿವೆ. ಮುಖಪುಟದ ರಟ್ಟು ತಿರುವುತಿದ್ದಂತೆ ಅದರ ಒಳಬದಿ ಪೂರ್ತಿ ರೇಖಾಚಿತ್ರಗಳಿಂದ ರಚನೆಗೊಂಡಿದೆ. ಎಲ್ಲಾ ಚಿತ್ರಗಳು ಒಂದೇ ಅಳತೆಯ ಕಪ್ಪು ವರ್ಣದ ಪೆನ್ನಿನಿಂದ ಸೃಷ್ಠಿಗೊಂಡಿವೆ. ಅದರಲ್ಲಿ ಕೆಲವು ಚಿತ್ರಗಳು ಈ ಕೆಳಗಿನಂತೆ ವಿಶ್ಲೇಷಣೆ ಮಾಡಲಾಗಿದೆ.

* **ಆನೆಯ ಚಿತ್ರ:** ರಟ್ಟಿನ ಮೇಲ್ಭಾಗದಲ್ಲಿ ರಚನೆಯಾದ ಆನೆಯ ಚಿತ್ರ ಅಲಂಕಾರಿಕವಾಗಿ ಸಿದ್ದಗೊಂಡು ಪ್ರಯಾಣಿಸುವಂತಿದೆ. ಮೈಕಟ್ಟು ಬಲಿಷ್ಟವಾಗಿಕಂಡರೂ ಅದರ ಕಾಲುಗಳು, ಸೊಂಡಿ

ಭಾಗ ಮಾತ್ರ ಅಂಕು-ಡೊಂಕಿನ ರೂಪದಲ್ಲಿ ನೈಜತೆಗೆ ಪರಿಪೂರ್ಣವಾಗಿರುವುದಿಲ್ಲ. ಆದರೂ ಅದರ ಹೊಟ್ಟೆ, ಕಣ್ಣಲ್ಲಿನ ಕಾಂತಿ. ಮೈ ಮೇಲೆ ಅಲಂಕಾರಿಕ ಸಾಮಗ್ರಿಗಳಿಂದ ಕಂಗೋಳಿಸುತಿಹದು. ರೇಖೆಗಳ ಚಲನಾತ್ಮಕ ಶಕ್ತಿ ವೃದ್ಧಿಗೊಳ್ಳದಿದ್ದರೂ ತನ್ನ ಆಕಾರರೂಪ ಸಹಜವಾಗಿ ರಚನೆಗೊಂಡಿರುವುದು ಕಂಡುಬರುತ್ತದೆ. ತಲೆ, ಕೊರಳು, ಮೈಮೇಲಿನ ವಿವಿಧ ವಿನ್ಯಾಸ ಚಿತ್ರಗಳು ದಸರಾ ವೈಭವಕ್ಕೆ ಸಿದ್ಧತೆಯಾದ ಸಾಂದರ್ಭಿಕ ಸನ್ನಿವೇಶದಂತಿವೆ.

* **ಮಹಿಳೆಯ ಚಿತ್ರ** : ಆನೆಯ ಕೆಳಬದಿ ರಚನೆಯಾದ ಈ ಮಹಿಳೆ ಚಿತ್ರ ದೇವತೆಯ ರೂಪದಲ್ಲಿ ತಲೆಯ ಮೇಲೆ ಕಿರಿಟವನ್ನು ಹೊಂದಿದ್ದಾಳೆ. ಮತ್ತು ನರ್ತನೆ ಮಾಡುವ ರೂಪದಲ್ಲಿ ಕಂಡುಬರುವ ಈ ಮಹಿಳೆ ಹಲವು ಸೃಜನಾತ್ಮಕ ಚಿಂತನೆಗೆ ಹಚ್ಚುವಂತೆ ಚಿತ್ರಿತವಾಗಿವೆ. ಟೊಂಕಕ್ಕೆ ಸುತ್ತಿಕೊಂಡ ವಸ್ತ್ರ, ಎರಡು ಕೈಗಳ ಚಲನ-ವಲನ ಹಲವು ವಿಚಾರಗಳಿಗೆ ಈಡಾಗುತ್ತವೆ. ಕಿರಿಟ ವಿವಿಧ ವಿನ್ಯಾಸಗಳಿಂದ ಅಲಂಕಾರಿಕವಾಗಿ ರಚನೆಯಾಗಿದೆ. ಈ ಮಹಿಳೆಯ ಸುತ್ತ ನವಿಲು, ಸೂರ್ಯಕಾಂತಿ ಹೂಗಳು, ಶಂಖ. ಎಂಟು ಹಳದಿ ಹೂ, ಹೀಗೆ ಹಲವಾರು ವಿನ್ಯಾಸದ ಮಧ್ಯೆ ಮಹಿಳೆ ಚಿತ್ರ ರೂಪಪಡೆದಿದೆ.

* **ನವಿಲು ಚಿತ್ರ:** ಗರಿಬಿಚ್ಚಿ ಓಡಾಡುತ್ತಿರುವ ಈ ನವಿಲು ಚಿತ್ರ ಅತ್ಯಂತ ಆಕರ್ಷಕ ಚಿತ್ರವಾಗಿದೆ. ಎಳೆ-ಎಳೆಯಾದ ರೇಖೆಗಳಿಂದ ರಚನೆಯಾದ ನವಿಲು ಹಲವು ಹೂ ಸುರುಳಿಗಳಿಂದ ರೂಪಗೊಂಡು ಸುಂದರವಾಗಿ ಕಾಣುತಿಹದು. ಮುಖ, ಕಣ್ಣು, ರಕ್ಕೆ, ಮೈ ಮೇಲಿನ ವಿವಿಧ ವಿನ್ಯಾಸ. ಅದರ ಗರಿಬಿಚ್ಚುವಿಕೆ ನೋಡುಗನ ಮನಸ್ಸನ್ನು ಅರಳಿಸುತ್ತದೆ. ಚಿತ್ರದ ಸುತ್ತ ಹಲವು ಚಿತ್ರಗಳು ರಚನೆಗೊಂಡರೂ ಸಹ ನವಿಲಿನ ಚೆಲವು ಬಹಳ ಮುಖ್ಯವಾಗಿ ಆಕರ್ಷಿಸುತ್ತವೆ.

* **ಓಡುತ್ತಿರುವ ಕುದುರೆ** : ನವಿಲಿಗಿಂತ ಚಿಕ್ಕಗಾತ್ರದಲ್ಲಿರುವ ಈ ಕುದುರೆ ಅತೀ ವೇಗವಾಗಿ ಚಲಿಸುತ್ತಿರುವ ಸನ್ನಿವೇಶ ಚಿತ್ರವಾಗಿದೆ. ಮುಖದಲ್ಲಿನ ಛಾಯೆಯನ್ನು ಗಮನಿಸಿದಾಗ ನಿಟ್ಟಿಸಿರು ಬಿಡುವ ಮೂಲಕ, ಮತ್ತು ಗರ್ಜನೆಯ ರೂಪದಲ್ಲಿ ಓಡುತ್ತಿರುವಂತೆ ಕಾಣಿಸುತ್ತದೆ. ಮೂಗಿಗೆ ಹಾಕಿದ ಹಗ್ಗ, ಕೊರಳಲ್ಲಿನ ಗಂಟೆ. ಅಲಂಕಾರಿಕ ವಿನ್ಯಾಸ ಕುದುರೆಯ ಅಂದವನ್ನು ಹೆಚ್ಚಿಸುತ್ತಿವೆ.

* **ಗಿಳಿಯ ಚಿತ್ರ** : ಪೂರ್ತಿ ಹಾಳೆಯ ಕೆಳಬದಿಯಲ್ಲಿ ರಚನೆಯಾದ ಗಿಳಿಯ ಚಿತ್ರವಿದ್ದು, ಅದರ ಮುಖ, ಕಣ್ಣು, ರೆಕ್ಕೆ, ದೇಹ, ಯಥಾವತ್ತಾಗಿ ರೂಪಗೊಂಡಿದೆ. ಮುಂದೆ ಹೂವಿನ ಗಿಡ ಅರಳಿ ನಿಂತಂತಿದೆ. ಸುತ್ತ ಅಕ್ಷರಗಳ ಸಾಲು. ವಿವಿಧ ಹೂ ಬಳ್ಳಿಗಳ ಸುರುಳಿ ಆನೆ. ಹೀಗೆ ಹಲವಾರು ಚಿತ್ರಗಳು ರಚನೆಗೊಂಡಿವೆ.

ಒಟ್ಟಾರೆಯಾಗಿ ಈ ಹಸ್ತಪ್ರತಿಗಳಲ್ಲಿ ಪೆನ್ನಿನಿಂದ ರಚಿಸಿದ ರೇಖಾಚಿತ್ರಗಳೇ ಕಾಣಬಹುದು. ರೇಖೆಯ ಕೌಶಲ್ಯ ಅತ್ಯಂತ ಆಕರ್ಷಕವಾದದ್ದು.

* **ಹಲವು ಚಿತ್ರಗಳು** : ಆನೆ, ನವಿಲು, ಗಿಳಿ, ಕುದುರೆ, ಮಹಿಳೆ, ಈ ಚಿತ್ರಗಳನ್ನು ಹೊರತುಪಡಿಸಿ ಇನ್ನು ಹಲವು ಸಣ್ಣ ಪ್ರಮಾಣದಲ್ಲಿ ರಚನೆಯಾದ ರೇಖಾಚಿತ್ರಗಳಿವೆ. ಆದರೆ ಮೇಲೆ ಹೇಳಿದಂತಹ ಚಿತ್ರಗಳಷ್ಟು ಆಕರ್ಷಕ ಚೆಲುವು ಕಾಣಿಸುವುದಿಲ್ಲ. ಹಾಗಂತ ಚಿಕ್ಕ ಗಾತ್ರದ ಚಿತ್ರಗಳು ಮರೆಯುವಂತಿಲ್ಲ. ಅವುಗಳ ಆಕಾರ, ರಚನಾಶೈಲಿ, ತಂತ್ರಗಾರಿಕೆ ರೇಖೆಯ ಮಹತ್ವ, ಅತ್ಯಂತ ಮಹತ್ವದವುಗಳೇ ಹೌದು. ಈ ಹಸ್ತಪ್ರತಿಯನ್ನು ಮೋಡಿ, ಮಾಟ, ಮಂತ್ರ ಜಪಿಸುವಾಗ ಕಡ್ಡಿಯನ್ನು ಹಾಕಿ ತೆಗೆದು ಅಕ್ಷರ ಓದಿ ನಂತರ ಈ ಚಿತ್ರಗಳಿಂದ ವಿವರಣೆ ಮಾಡಿರಬಹುದೆಂದು ಅನಿಸುತ್ತದೆ. ಮಾಟ ಮಂತ್ರದ ಹಸ್ತಪ್ರತಿಯಲ್ಲಿನ ಈ ರೇಖಾಚಿತ್ರಗಳು ನೋಡಲು ಚೆಲುವನ್ನು ಹೊಂದಿವೆ.

**ಹಸ್ತಪ್ರತಿಯ ಕೆಲವು ಲಕ್ಷಣಗಳು**

* ಜೈಮಿನಿ ಭಾರತ ಮತ್ತು ಚೆನ್ನಬಸವ ಪುರಾಣ ಹಾಗೂ ಸುರಪುರ ಪಂಚಾಂಗ ವಿಷಯಾಧಾರಿತ ಹಸ್ತಪ್ರತಿ ಚಿತ್ರಗಳು ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರ ಸಂಶೋಧನಾ ಪ್ರಬಂಧದಿಂದ ಬೆಳಕು ಚೆಲ್ಲಿರುವುದು ಕಂಡುಬರುತ್ತದೆ.
* ಈ ಹಸ್ತಪ್ರತಿ ಚಿತ್ರಗಳಲ್ಲಿ ವರ್ಣ ಲೇಪನ ವಿಧಾನವನ್ನು ನೋಡಿದಾಗ ತಿಳಿವರ್ಣದ ಬಳಿಯುವಿಕೆ ಪ್ರಮುಖವಾಗಿ ಗೋಚರಿಸುತ್ತದೆ.
* ಮುಖಗಳಲ್ಲಿನ ಕಾಂತಿ, ಮೈಕಟ್ಟು, ಕೈಕಾಲುಗಳ ಚಲನ ವಲನ, ಜೀವಂತಿಕೆ ಪಡೆದಿವೆ.
* ಸಂಪೂರ್ಣ ಹಸ್ತಪ್ರತಿ ಚಿತ್ರಗಳಲ್ಲಿ ರೇಖೆಗಳು ಸೃಷ್ಟಿಗೊಂಡಿರುವುದು ರೇಖೆಗಳ ಮಹತ್ವವನ್ನು ತಿಳಿದುಕೊಳ್ಳಬಹುದು. ರೇಖೆ, ರಚನಾ ವಿಧಾನ, ತಂತ್ರ, ಶೈಲಿ, ಗಾತ್ರ, ಅವಧಿ, ಹೀಗೆ ಎಲ್ಲವನ್ನು ಗ್ರಹಿಸಬಹುದು.
* ಹಸ್ತಪ್ರತಿ ಚಿತ್ರಗಳಲ್ಲಿ ರಚನೆಯಾದ ಕಟ್ಟಡ ಶೈಲಿ ಹಲವು ರಾಜಾಶ್ರಯ ನೆಲೆಗಳು ಪ್ರಭಾವ ಪಡೆದುಕೊಂಡಂತೆ ಕಾಣುತ್ತವೆ.
* ಹಸಿರು, ಕೆಂಪು, ನೀಲಿ ಹಲವು ಮಿಶ್ರಿತ ವರ್ಣಗಳೊಂದಿಗೆ ಚಿತ್ರಗಳು ರಚನೆಯಾಗಿವೆ.
* ಸುರಪುರ ಸಮೀಪದ ರಂಗಂಪೇಟೆಯ ಅಣ್ಣಯ್ಯನ ಮಠದಲ್ಲಿ ರಚನೆಗೊಂಡಿರುವ ಭಿತ್ತಿ ಚಿತ್ರಗಳ ಹೋಲಿಕೆಯ ಕೆಲವೊಂದು ಚಿತ್ರಗಳು ಚೆನ್ನಬಸವ ಪುರಾಣ ಹಸ್ತಪ್ರತಿಯಲ್ಲಿಯೂ ಕಾಣಸಿಗುತ್ತವೆ. ಉದಾ: ಚಂದ್ರೋದಯ ವರ್ಣನೆ ಚಿತ್ರದಲ್ಲಿನ ರತಿ ಕ್ರೀಡೆಯಲ್ಲಿ ತೊಡಗಿದ ಪ್ರೇಯಸಿಯರ ಆಕೃತಿಗಳು: ಅಣ್ಣಯ್ಯನ ಮಠದಲ್ಲಿ ಚಿತ್ರಿಸಲಾದ ಪ್ರೇಯಸಿಯೊಂದಿಗೆ ಸರಸದಲ್ಲಿ ತೊಡಗಿದ ಕೃಷ್ಣನ ಚಿತ್ರವನ್ನು ಹೋಲುತ್ತವೆ. ಪ್ರಸ್ತುತ ಹಸ್ತಪ್ರತಿಯಲ್ಲಿ ಸುಮಾರು ಐದಾರು ಚಿತ್ರಪಟಗಳು ಈ ರೀತಿಯ ಸನ್ನಿವೇಶಗಳನ್ನು ಒಳಗೊಂಡಿವೆ.[೧೧]

* ಡಿ.ಎನ್. ಅಕ್ಕಿಯವರ ಮನೆಯಲ್ಲಿ ಸಂಗ್ರಹಗೊಂಡಿರುವ ಮಾಟಮಂತ್ರದ ಹಸ್ತಪ್ರತಿ ಚಿತ್ರಗಳು ಪ್ರಸ್ತುತ ಈ ಅಧ್ಯಯನದಿಂದ ಬೆಳಕು ಚೆಲ್ಲುತ್ತಿವೆ.

* ಈ ಎಲ್ಲಾ ಚಿತ್ರಗಳು ಪೆನ್ನಿನಿಂದ ರಚನೆಯಾದ ರೇಖಾಚಿತ್ರಗಳಾಗಿವೆ.

* ರೇಖಾ ರಚನಾ ವಿಧಾನ, ತಂತ್ರಗಾರಿಕೆ, ಗಾತ್ರ ಎಲ್ಲವೂ ಆಕರ್ಷಕ.

**ಟಿಪ್ಪಣಿಗಳು**

೧. ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯, ಸುರಪುರ ಚಿತ್ರಕಲೆ, ಸರಚಂದ್ರ ಪ್ರಕಾಶನ ಚಿತ್ತಾಪುರ, ಪುಟ .ಸಂ. ೬೮ ರಿಂದ ೬೯

೨. ಅದೇ ಪುಟ ಸಂ. ೭೦

೩. ಅದೇ ಪುಟ ಸಂ. ೭೦

೪. ಅದೇ ಪುಟ ಸಂ. ೭೦

೫. ಅದೇ ಪುಟ ಸಂ. ೭೧

೬. ಅದೇ ಪುಟ ಸಂ. ೭೧

೭. ಅದೇ ಪುಟ ಸಂ. ೭೨

೮. ಕಲಾಕೃತಿಗಳ ವಿವರಣೆಗಾಗಿ: ಸುರಪುರ ಚಿತ್ರಕಲೆ ನೋಡಿ ಪುಟ ಸಂ. ೭೩ ರಿಂದ ೮೨ರ ವರೆಗೆ

೯. ಅದೇ ಪುಟ ಸಂ. ೮೩ ರಿಂದ ೮೪

೧೦. ಮಾಟ-ಮಂತ್ರದ ಹಸ್ತಪ್ರತಿ ಚಿತ್ರಗಳ ಕುರಿತಂತೆ ಸಂಶೋಧಕರಾದ ಡಿ.ಎನ್. ಅಕ್ಕಿ ಅವರೊಂದಿಗೆ ಸಂದರ್ಶನ ಮಾಡಲಾಯಿತು.

೧೧. ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯, ಸುರಪುರ ಚಿತ್ರಕಲೆ, ಸರಚಂದ್ರ ಪ್ರಕಾಶನ ಚಿತ್ತಾಪುರ, ಪುಟ ಸಂ. ೮೪



ಫಲಕದ ಮೇಲಿನ ವಿನ್ಯಾಸ



ಸುರಪುರ ರಾಜರ ಅಷ್ಟದಿಗ್ಬಂಧನ ವಿಷಯಾಧಾರಿತ ಚಿತ್ರ



ಚನ್ನಬಸವ ಪುರಾಣ ವಿಷಯಾಧಾರಿತ ಚಿತ್ರ



ಜೈಮಿನಿ ಭಾರತ ವಿಷಯಾಧಾರಿತ ಚಿತ್ರ



ವಿಷ್ಣುವಿಗೆ ಚಕ್ರ ಪ್ರಧಾನ



ಸುರಪುರ ಪಂಚಾಂಗ ವಿನ್ಯಾಸ



ಸಿದ್ಧರಾಮೇಶ್ವರನಿಗೆ ಶಿವತತ್ವ ಬೋಧನೆ



ಪಾರ್ವತಿಯ ಪ್ರಶ್ನೆ



ಅಕ್ಕನಾಗಮ್ಮನ ಸ್ವಪ್ನ

ಡಿ.ಎನ್. ಅಕ್ಕಿಯವರ ಮನೆಯಲ್ಲಿರುವ
ಮಾಟ ಮಂತ್ರದ ಹಸ್ತಪ್ರತಿ ಚಿತ್ರಗಳು









ಕಲಾವಿದ ಡಿ.ಎನ್. ಅಕ್ಕಿಯವರೊಂದಿಗೆ
ಡಾ. ಎಸ್. ಸಿ. ಪಾಟೀಲರು

# ಅಧ್ಯಾಯ ೭

# ಯಾದಗಿರಿ ಜಿಲ್ಲೆಯ ಸಂಕೀರ್ಣ ಚಿತ್ರಕಲೆ

ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಹಲವು ಮಾಧ್ಯಮ ಮತ್ತು ಭಿನ್ನವಾದ ಕಲಾಕೃತಿಗಳ ಕುರಿತು ಸಂಕೀರ್ಣ ಚಿತ್ರಕಲೆ ಎಂದು ವಿಂಗಡಿಸಿ ವಿಶ್ಲೇಷಿಸಲಾಗಿದೆ. ಅವುಗಳಲ್ಲಿ ಸುರಪುರದ ಅನೇಕ ಪ್ರಮುಖರ ಮನೆಗಳಲ್ಲಿರುವ ರಾಜರ, ಮತ್ತು ಮಠಾಧೀಶರ ಭಾವಚಿತ್ರಗಳು, ಮೆಡೋಸ್ ಟೇಲರನ ಕಲಾಕೃತಿಗಳು, ಯಾದಗಿರಿ ಹಾಗೂ ಸುರಪುರದಲ್ಲಿ ಸಂಗ್ರಹಗೊಂಡ ಗಾಜಿನ ಮೇಲಿನ ಚಿತ್ರಕಲಾಕೃತಿಗಳು ಡಿ.ಎನ್. ಅಕ್ಕಿಯವರ ಮನೆಯಲ್ಲಿನ ಕಲಾಕೃತಿಗಳು, ಯಾದಗಿರಿ ವೀರಶೈವ ಕಲ್ಯಾಣ ಮಂಟಪದಲ್ಲಿರುವ ಕಲಾಕೃತಿಗಳು ಹೀಗೆ ಹಲವು ಪ್ರಕಾರಗಳನ್ನು ಹಂತ-ಹಂತವಾಗಿ ವಿವರ ನೀಡಲಾಗಿದೆ.

**೧. ಸುರಪುರದ ಪ್ರಮುಖರ ಮನೆಗಳು ಮತ್ತು ಮಠಗಳಲ್ಲಿನ ಕಲಾಕೃತಿಗಳು**

ಯಾದಗಿರಿ ಜಿಲ್ಲೆಯಲ್ಲಿ ಚಿತ್ರಕಲೆಗೆ ಮಹತ್ವದ ಸ್ಥಾನ ನೀಡಿರುವುದು ಸುರಪುರದ ಗರುಡಾದ್ರಿ ಚಿತ್ರಕಲೆ ಗರುಡಾದ್ರಿ ಕಲಾವಿದರಿಂದ ರಚನೆಗೊಂಡ ಹಲವು ಪ್ರಕಾರ ಕಲಾಕೃತಿಗಳಲ್ಲಿ ಭಾವಚಿತ್ರ ರಚನಾ ಶೈಲಿಯು ಅತ್ಯಂತ ಆಕರ್ಷಕ ಮತ್ತು ಮೌಖಿಕವಾದದ್ದಾಗಿವೆ. ಹಸರಂಗಿ ಪಾಮನಾಯಕ, ನಾಲ್ವಡಿ ವೆಂಕಟಪ್ಪನಾಯಕ, ಸುರಪುರನಾಯಕ. ಮೊಂಡುಗೈ ವೆಂಕಟಪ್ಪನಾಯಕ, ಪೀತಾಂಬರ ಬಹಿರಿ ಪಿಡ್ಡನಾಯಕ, ನಾಲ್ವರು ರೆಡ್ಡಿರಾಜರು, ಜಗನ್ನಾಥ ದಾಸರು, ಹಯಗ್ರೀವಾಚಾರ್ಯರು, ದೀಪಚಂದ ಜೈನ್, ಸಿದ್ಧಲಿಂಗಪ್ಪ ದೇಶಮುಖ. ಗೋಗಿಬಸಪ್ಪನವರು, ಮಾಣಿಕ ಪ್ರಭುಗಳು, ಕಿಲ್ಲೆಮಠದ ಸ್ವಾಮಿಗಳು, ಮದ್ರಿಕಿಸ್ವಾಮಿಗಳು, ಶಾಂತಮಲ್ಲ ಶಿವಾಚಾರ್ಯರು, ಮಾರ್ತಾಂಡ ಪ್ರಭುಗಳು. ಮೂವರು ಪ್ರಭುಗಳು, ಶ್ರೀ ರಾಮಸೀತೆ, ಶೇಷಶಯನ ವಿಷ್ಣು, ಶ್ರೀರಾಮ ಪಟ್ಟಾಭಿಷೇಕ, ವೈಕುಂಠನಾರಾಯಣ, ದತ್ತಾತ್ರೇಯ, ಮಠಾಧೀಶರ, ಅರಸರ, ಪ್ರಮುಖರ, ಹಾಗೂ ದೇವಾನು ದೇವತೆಗಳ ಹೀಗೆ ಹಲವಾರು ಕಲಾಕೃತಿಗಳು ರಚನೆಗೊಂಡಿವೆ.

* ಕೆಲವು ಕಲಾಕೃತಿಗಳ ವಿಶ್ಲೇಷಣೆ

೧. ಮಾಣಿಕ ಪ್ರಭುಗಳು

ಕೆಂಬಣ್ಣದ ಆಸನದಲ್ಲಿ ಕುಳಿತಿರುವ ಶ್ರೀ ಮಾಣಿಕ ಪ್ರಭುಗಳು ಬಲಗೈಯಲ್ಲಿ ಗುಲಾಬಿ ಹೂ ಹಿಡಿದಿದ್ದಾರೆ. ತಲೆಗೆ ಸುತ್ತಿದ (ಪಟಗಾ) ರುಮಾಲು ಬಿಳಿ ಮತ್ತು ಹಳದಿ ವರ್ಣ ಮಿಶ್ರಿತ ಹಲವು ಹೂ ಸುರುಳಿಗಳಿಂದ ಕಂಗೊಳಿಸುತಿಹುದು, ಮೈಗೆ ಧರಿಸಿದ ಉಡುಪು, ಆಭರಣ, ಮುತ್ತಿನ ಮಾಲೆ, ಹಾರ, ಹೆಗಲ ಮೇಲೆ ಜಾರಿಬಿದ್ದ ವಸ್ತ್ರ ಅಲಂಕಾರಿಕವಾಗಿದೆ. ಕೆಂಬಣ್ಣದ ವಿನ್ಯಾಸ ಹೊಂದಿದ ಆಸನ ಬಂಗಾರ ವರ್ಣ ಲೇಪಿತವಾಗಿದೆ. ಪ್ರಭುವಿನ ಮುಖದ ಕಾಂತಿ. ಕಣ್ಣಲ್ಲಿನ ಛಾಯೆ. ಕುಳಿತ ಭಂಗಿ ವಿಶೇಷವಾಗಿದೆ. ಹಿಂಬದಿ ಹಸಿರು ವರ್ಣ, ಕೆಳಬದಿ ಬಿಳಿಪಟ್ಟಿಕೆ, ಅದರ ಮೇಲೆ ಕುಳಿತಿಹನು. ಹೂವು ಹಣ್ಣು–ಹಂಪಲು, ಪೂಜಾ ಸಾಮಗ್ರಿಗಳಾಗಿವೆ. ಕೆಂಪು ನೀಲಿ, ಹಳದಿ ಗಾಜಿನ ತೂಗುದೀಪಗಳಾಗಿವೆ. ಮೇಲ್ಭಾಗ ವಿವಿಧ ವಿನ್ಯಾಸದ ಪ್ರಭಾವಳಿಗಳಿಂದ ಶೃಂಗಾರಗೊಂಡಿದೆ. ಪೂರ್ತಿ ಕೆಳಭಾಗ ಹಚ್ಚಹಸಿರಿನ ಬೃಂದಾವನದಂತೆ ನೀರು ಕಾರಂಜಿಯಂತೆ ಗೋಚರಿಸುತಿಹದು.ಅದರ ಎಡ–ಬಲದಲ್ಲಿ ಹಲವು ವರ್ಣಗಳ ಹೂ ಅರಳಿನಿಂತಿವೆ. ಈ ಕಲಾಕೃತಿ ಹೈದ್ರಾಬಾದ ಕಲಾಶೈಲಿಯ ಪ್ರಭಾವವು ಎದ್ದುಕಾಣುತ್ತದೆ.[೧]

೨. ಹಸರಂಗಿ ಪಾಮನಾಯಕ

ಈ ಚಿತ್ರದಲ್ಲಿ ರಾಜಾಪಾಮನಾಯಕನು ಸುಂದರ ಕಮಾನುಗಳುಳ್ಳ ಮಂಟಪದೊಳಗೆ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಹಿಂದೆ ಮುಂದೆ ಸೇವಕರಿದ್ದು, ಮುಂದೆ ನಿಂತಿರುವ ಸೇವಕ ರಾಜನಿಗೆ ಅಹವಾಲೊಂದನ್ನು ಒಪ್ಪಿಸುತ್ತಿರುವಂತೆ ಕಾಣುತ್ತದೆ. ಚಿಗುರೆಲೆಯ ಮರದಡಿ ಪಕ್ಷಿಗಳು ಹಾರಾಡುತ್ತಿವೆ. ಕೆಳಬದಿಯಲ್ಲಿರುವ ಪಟ್ಟಿಕೆಯಲ್ಲಿ ಹಲವು ಪಕ್ಷಿಗಳಿವೆ. ಮತ್ತು ಜಿಂಕೆಗಳು ರಾಜನ ಸಮಾಲೋಚನವನ್ನು ಗಮನಿಸುತಿರುವಂತೆ ಕಾಣುತ್ತವೆ. ಈ ಕಲಾಕೃತಿಯು ಬಿಜಾಪುರ ಶೈಲಿಯ ಪ್ರಭಾವ ಹೊಂದಿದಂತೆ ಗೋಚರಿಸುವುದಕ್ಕೆ ಕಟ್ಟಡದ ಶೈಲಿ ಅರಿವಾಗುತ್ತದೆ.

೩. ಮೊಂಡುಗೈ ವೆಂಕಟಪ್ಪನಾಯಕ

ರಾಜಾವೆಂಕಟಪ್ಪ ನಾಯಕನು ಸಿಂಹಾಸನದ ಮೇಲೆ ಕುಳಿತುಕೊಂಡಿದ್ದಾನೆ. ಮುತ್ತು ರತ್ನಗಳನ್ನು ಹೊಂದಿದ ತಲೆಯ ಮೇಲಿನ ಪೀಠ, ನಿಲುವಂಗಿ, ಕೊರಳಲ್ಲಿನ ಅಲಂಕಾರಿಕ ವಿನ್ಯಾಸದ ಮಾಲೆಗಳು, ಸಿಂಹಾಸನದ ಪಕ್ಕದಲ್ಲಿ ನಿಂತಿರುವ ಯುವರಾಜ, ವಿವಿಧ ಹೂ, ಪಟ್ಟಿಗಳನ್ನು ಹೊಂದಿದ ನೆಲಚಿತ್ರ ರಾಜನ ಮುಖದಲ್ಲಿನ ತೀಕ್ಷ್ಣತೆ, ಕಣ್ಣಲ್ಲಿನ ಕಾಂತಿ. ಅತ್ಯಂತ ಚೆಲುವಾಗಿ ಕಂಗೋಳಿಸುತಿಹನು ಕಂಪನಿ ಕಲಾಶೈಲಿಯ ಪ್ರಭಾವದಂತೆ ಕಾಣುತ್ತದೆ.

**೪. ದೀಪಚಂದ ಜೈನ್**

ಹಾದಿಯಲ್ಲಿ ಹೊರಟ ಕುದುರೆ ಮೇಲೆತ್ತರಕ್ಕೆ ಅಪ್ಪಳಿಸಿದಂತಿದೆ. ದೀಪಚಂದರು ಲಗಾಮು ಹಿಡಿದು ಎಳೆಯುತ್ತಿರುವ ಸಂದರ್ಭ, ಮೇಲೆ ಕುಳಿತ ದೀಪಚಂದನ ಮೈ ಮೇಲಿನ ನಿಲುವಂಗಿ ಹಳದಿ ವರ್ಣದ ಆಕರ್ಷಕ ವಿನ್ಯಾಸ ಹೊಂದಿದೆ. ಕೆಳಬದಿ ತನ್ನ ಸೇವಕ ನಿಂತಿದ್ದಾನೆ. ಕಪ್ಪು ಬಣ್ಣದ ಅಂಗಿತೊಟ್ಟು ಟೊಂಕಕ್ಕೆ ಬಿಳಿವಸ್ತ್ರ ಕಟ್ಟಿಕೊಂಡಿದ್ದಾನೆ. ಕುದುರೆ ಬಿಳಿಬಣ್ಣದಾಗಿದೆ. ಕೊರಳು ಮತ್ತು ಮೈಮೇಲೆ ಅಲಂಕಾರಿಕ ವಸ್ತ್ರಾಸನ ಹಾಕಲಾಗಿದೆ. ನೀಲಿ ಆಕಾಶ. ಹಚ್ಚ ಹಸಿರಿನ ವನದ ಮಧ್ಯೆ ದಾರಿಯಲ್ಲಿ ದೀಪಚಂದ ಜೈನರವರು ಕುದುರೆಸವಾರಿ ಮಾಡುತಿದ್ದಾರೆ. ಹಳದಿ, ಹಸಿರು, ಬಳಿ, ಕಪ್ಪು, ಹೀಗೆ ಹಲವು ಮಿಶ್ರಿತ ವರ್ಣ ವಿನ್ಯಾಸಹೊಂದಿದೆ. ದೀಪಚಂದ ಮತ್ತು ಗುಮಾಸ್ತನ ಮುಖ ಭಾಗದಲ್ಲಿ ಛಾಯಾ ಚಿತ್ರ ಅಂಟಿಸಿ ಚಿತ್ರಪೂರ್ಣ ಮಾಡಿರುವ ವಿಧಾನ ಗರುಡಾದ್ರಿ ಕಲಾಕೃತಿಗಳಲ್ಲಿ ಮೆಡೋಸ್ ಟೇಲರನ ಅನುಕರಣೆ ಎಂದು ಹಲವು ಅಧ್ಯಯನಕಾರರು ಹೇಳುತ್ತಾರೆ.

**೫. ಹಯಗ್ರೀವಾಚಾರ್ಯರು**

ಇವರು ಸುರಪುರ ಆಸ್ಥಾನ ಪಂಡಿತರು, ಪಾರ್ಶ್ವನೋಟದಲ್ಲಿ ಚಿತ್ರಿಸಲಾಗಿರುವ ಹಯಗ್ರೀವಾಚಾರ್ಯರ ಮೈಬಣ್ಣ ಗೌರವರ್ಣದಲ್ಲಿದ್ದು ತಮ್ಮ ಎದೆಯ ಅರ್ಧಭಾಗವನ್ನು ಕಾಣುವಂತೆ ವಸ್ತ್ರವೊಂದನ್ನು ಮೈಗೆ ಸುತ್ತಿಕೊಂಡಿದ್ದಾರೆ. ಇವರ ರಟ್ಟೆ, ಹಣೆ ಹಾಗೂ ಎದೆಯ ಭಾಗದಲ್ಲಿ ಹಳದಿ ಹಾಗೂ ಬಿಳಿ ವರ್ಣದಿಂದ ನಾಮಗಳನ್ನೂ, ಕೊರಳಲ್ಲಿ ಮಾಲೆ, ಮತ್ತು ಜನಿವಾರವನ್ನು ತೋರಿಸಿದೆ ತೊಟ್ಟಿರುವ ಪಂಚೆಯು ಬಿಳಿ ವರ್ಣದಲ್ಲಿದ್ದು ಹಳದಿ ಹಾಗೂ ತೆಳುನೀಲಿ ವರ್ಣದ ಅಂಚನ್ನು ಹೊಂದಿದೆ. ಎಡಗೈಯಲ್ಲಿ ಹಸ್ತಲಿಖಿತ ಪತ್ರವೊಂದನ್ನು ಹಿಡಿದಿರುವಂತೆಯೂ ಬಲಗೈಯಿಂದ ಅದರ ಸಾರಾಂಶವನ್ನು ತಿಳಿಸುವಂತೆ ತೋರುತ್ತದೆ. ಚಿತ್ರದ ಹಿನ್ನೆಲೆಯ ಮೇಲ್ಪಧರ ಭಾಗ ತೆಳುವಾದ ಬಿಳಿ ವರ್ಣದ ಲೇಪನ ಹಾಗೂ ಕೆಳಗಿನ ಇನ್ನರ್ಧ ಭಾಗ ಕೆಂಪು ವರ್ಣದ ತೆಳುವಾದ ಲೇಪನವನ್ನು ಹೊಂದಿದೆ.[೨]

**೬. ರಾಜಾ ವೆಂಕಟಪ್ಪ ನಾಯಕ**

ಸುರಪುರದ ಹೊಸ ಅರಮನೆಯ ಪಡಸಾಲೆಯಲ್ಲಿರುವ ಈ ಕಲಾಕೃತಿ ಅತ್ಯಂತ ಪ್ರಮುಖ ಚಿತ್ರವಾಗಿದೆ. ಎಲ್ಲಾ ಕಲಾಕೃತಿಗಳಿಗಿಂತ ದೊಡ್ಡದಾಗಿರುವ ಈ ಕಲಾಕೃತಿ, ವೆಂಕಟಪ್ಪನಾಯಕನು ಸಿಂಹಾಸನದ ಮೇಲೆ ಕುಳಿತಿಹನು, ರಾಜಪೋಷಾಕಿನಲ್ಲಿ ಕಾಣುತ್ತಾನೆ. ಬಂಗಾರ ವರ್ಣಲೇಪನ ಕಾರ್ಯ ಇದಾಗಿದೆ. ರಾಜನ ಮೈಬಣ್ಣ ತಿಳಿ ಗೌರವರ್ಣದಾಗಿದೆ. ಕೈಯಲ್ಲಿನ ಖಡ್ಗ, ಮೈಮೇಲೆ ಧರಿಸಿದ ಉಡುಪು, ತಲೆ ಮೇಲಿನ ಬಂಗಾರ ಪೀಠ, ಇಡೀ ರಾಜನು ಅಲಂಕರಿಸುತಿಹುದು. ಬಂಗಾರ ವರ್ಣದ ವಸ್ತ್ರಾಲಂಕಾರದಿಂದ. ವಿವಿಧ ವಿನ್ಯಾಸದ ಸುರುಳಿಗಳು, ಮುತ್ತಿನ ಮಾಲೆ,

ಎಲ್ಲವು ಆಕರ್ಷಕವಾಗಿ ಮೂಡಿಬಂದಿವೆ. ಈ ಕಲಾಕೃತಿಯಲ್ಲಿ ಹಳದಿ, ಹಸಿರು, ಬಿಳಿ, ಸೇರಿದಂತೆ ಹಲವು ಮಿಶ್ರಿತ ವರ್ಣವಿನ್ಯಾಸವಿದೆ.

**೭. ಶ್ರೀರಾಮ ಪಟ್ಟಾಭಿಷೇಕ**

ಈ ಸಂಯೋಜನೆಯು ಅಡ್ಡದಾದ ಮೂರು ಪಟ್ಟಿಕೆಗಳನ್ನು ಹೊಂದಿ. ಹೆಚ್ಚು ಆಕೃತಿಗಳನ್ನು ಒಳಗೊಂಡಿದೆ. ಮಧ್ಯದ ಪಟ್ಟಿಕೆಯೊಂದರಲ್ಲಿ ಎತ್ತರವಾದ ಬಂಗಾರ ವರ್ಣದ ಪೀಠವೊಂದರ ಮೇಲೆ ಎದುರು ಮುಖವಾಗಿ ಶ್ರೀರಾಮನು ಕುಳಿತಿದ್ದಾನೆ. ರಾಮನ ತೊಡೆಯ ಮೇಲೆ ಸೀತೆಯು ಕುಳಿತಿದ್ದಾಳೆ. ರಾಮನ ಮೈ ಬಣ್ಣ ಹಸಿರು ವರ್ಣದಲ್ಲಿದ್ದರೆ, ಸೀತೆಯ ಮೈಬಣ್ಣ ಗೌರವರ್ಣದಲ್ಲಿದೆ. ರಾಮನ ಹಿಂಭಾಗದಲ್ಲಿ ಬಂಗಾರ ವರ್ಣದ ಪ್ರಭಾವಳಿಯೊಂದಿದ್ದು. ಈ ಪ್ರಭಾವಳಿಯೊಳಗಿನ ಹಿನ್ನಲೆಯು ಬಿಳಿ ವರ್ಣದ ಚುಕ್ಕೆಗಳುಳ್ಳ ಕೆಂಪು ವರ್ಣದಲ್ಲಿದೆ. ರಾಮನ ಬಲಬದಿಯಲ್ಲಿ ವಶಿಷ್ಠ ಮಹರ್ಷಿಗಳೊಂದಿಗೆ ಇನ್ನಿತರ ಋಷಿ–ಮುನಿಗಳನ್ನು ಚಿತ್ರಿಸಿದೆ. ರಾಮನ ಎಡಬದಿಯಲ್ಲಿ ಲಕ್ಷ್ಮಣ, ಜಾಂಬವಂತ ವಿಭೀಷಣರು ಕೈಯಲ್ಲಿ ಛತ್ರಿ–ಚಾಮರ ಹಿಡಿದು ನಿಂತಿರುವರು. ಚಿತ್ರದ ಕೆಳಭಾಗದ ಪಟ್ಟಿಕೆಯು ಹಳದಿ ವರ್ಣದ ಹಿನ್ನಲೆಯಿದ್ದು, ಈ ಪಟ್ಟಿಕೆಯ ಮಧ್ಯದಲ್ಲಿ ಹನುಮನು ಶ್ರೀರಾಮನಿಗೆ ಕೈಮುಗಿಯುತ್ತಿದ್ದಾನೆ. ಇವನ ಮೈಬಣ್ಣ ಹಸಿರು ವರ್ಣದಲ್ಲಿದೆ. ಈ ಪಟ್ಟಿಕೆಯ ಎರಡೂ ಬದಿಯಲ್ಲಿ ತಲಾ ನಾಲ್ವರನ್ನು ತೋರಿಸಿದ್ದು, ಇವರೆಲ್ಲರೂ ರಾಮ–ಸೀತೆಯರ ಆರಾಧನೆಯಲ್ಲಿ ತೊಡಗಿದ್ದಾರೆ. ಇದೇ ಪಟ್ಟಿಕೆಯ ತೀರ ಕೆಳಭಾಗದಲ್ಲಿ ಅಶ್ವ ಹಾಗೂ ಆನೆಯೊಂದನ್ನು ಬಿಳಿ ವರ್ಣದಿಂದ ಅತ್ಯಂತ ಕಿರಿದಾಗಿ ಚಿತ್ರಿಸಿದೆ. ಚಿತ್ರದ ಮೇಲ್ಭಾಗದಲ್ಲಿನ ಪಟ್ಟಿಕೆಯೊಂದರಲ್ಲಿ ಅರಮನೆಯಂತೆ ಮೂರು ಮಹಡಿಗಳನ್ನು ಚಿತ್ರಿಸಿದ್ದಲ್ಲದೇ ಮಹಿಳೆಯರೀರ್ವರು ಶ್ರೀರಾಮ ಪಟ್ಟಾಭಿಷೇಕ ದೃಶ್ಯವನ್ನು ನೋಡುತ್ತಿರುವರು. ಅಲ್ಲದೇ ಕಿನ್ನರರು, ಪುಷ್ಪವನ್ನು ಸುರಿಯುತ್ತಿದ್ದಾರೆ. ಈ ಚಿತ್ರವು ಸುರಪುರ ಚಿತ್ರಗಳಲ್ಲೇ ಅತ್ಯಂತ ಪೂರ್ವದೆನ್ನಬಹುದಲ್ಲದೇ ಹೆಚ್ಚು ಮನುಷ್ಯಾಕೃತಿಗಳನ್ನು ಒಳಗೊಂಡಿದೆ.[೩] ಇಂತಹ ಅನೇಕ ಕಲಾಕೃತಿಗಳನ್ನು ರಚಿಸಿದ ಗರುಡಾದ್ರಿ ಕಲಾವಿದರು ತಮ್ಮದೇಯಾದ ಸ್ವತಂತ್ರ ಶೈಲಿಯನ್ನಾಗಿ ಪ್ರತಿಬಿಂಬಿಸಿದ್ದಾರೆ.

**೨. ಮೆಡೋಸ್ ಟೇಲರ್ ಮತ್ತು ಕಲಾಕೃತಿಗಳು**

ಕ್ರಿ.ಶ. ೧೮೦೮, ಸೆಪ್ಟಂಬರ್ ೨೫ರಂದು ಇಂಗ್ಲೆಂಡಿನ ಲಿವರ್‌ಪೂಲ್ ಎಂಬ ಪಟ್ಟಣದಲ್ಲಿ ಜನಿಸಿದ. ಮೆಡೋಸ್ ಟೇಲರ್, ಪೂರ್ಣ ಹೆಸರು ಫಿಲಿಪ್ ಮೆಡೋಸ್ ಟೇಲರ್, ಕಡು ಬಡತನದಲ್ಲಿ ಜನಿಸಿದ ಟೇಲರ್ ಪರಿಪೂರ್ಣ ಶಿಕ್ಷಣ ಪಡೆಯಲಿಲ್ಲ. ಆರು ಜನ ಮಕ್ಕಳಲ್ಲಿ ಇವನೇ ಹಿರಿಯವನಾಗಿದ್ದವನು ಟೇಲರ್ ೧೫ನೇಯ ವಯಸ್ಸಿನಲ್ಲಿ ಲಿವರ್ ಪೋಲಿನ ಯೇಂಟ್ಸ್ ಬ್ರದರ್ಸ್ ಕಂಪನಿಯಲ್ಲಿ ಕ್ಲಾರ್ಕ್ ಹುದ್ದೆಯಲ್ಲಿ ಕೆಲಕಾಲ ಕಾರ್ಯ ನಿರ್ವಹಿಸಿದ್ದುಂಟು. ತನ್ನ ತಂದೆಯ

ಗೆಳೆಯ ಮಿ. ಬಾಕ್ಸರ್ ಎಂಬ ವ್ಯಕ್ತಿಯು ಮುಂಬಯಿಯಲ್ಲಿ ನೆಲೆಸಿದ್ದ. ಅವನ ಕರೆಯ ಮೇರೆಗೆ ಟೇಲರನು ೧೮೨೪ರಲ್ಲಿ ಅಂದರೆ ತನ್ನ ೧೫ನೇಯ ವಯಸ್ಸಿನಲ್ಲಿ ಭಾರತಕ್ಕೆ ಬಂದನು. ೧೮೨೪ ಸಪ್ಟಂಬರ ೧ ರಂದು ಮುಂಬೈ ತಲುಪಿದ ಟೇಲರನು ಮುಂದೊಮ್ಮೆ ಹೈದ್ರಾಬಾದ ನಿಜಾಮ ಸೈನ್ಯಕ್ಕೆ ಸೇರಿ ಸುಮಾರು ಹದಿನೇಳು ವರ್ಷಗಳ ಕಾಲ ನಿಜಾಮ ಸೈನ್ಯದಲ್ಲಿ ಕೆಲಸ ನಿರ್ವಹಿಸಿದಲ್ಲದೆ ಕ್ಯಾಪ್ಟನ್ ಹುದ್ದೆಯನ್ನೂ ಅಲಂಕರಿಸುತ್ತಾನೆ. ೧೮೩೨ರ ಸುಮಾರಿಗೆ ಹೈದ್ರಾಬಾದ್‌ನಲ್ಲಿ ಪ್ರಮುಖ ಬ್ಯಾಂಕರ್‌ನಾಗಿದ್ದ ಮಿ. ಪಾಮರ್, ಎಂಬುವವನ ಮಗಳು ಲೂಸಿಯೊಂದಿಗೆ ಟೇಲರನು ವಿವಾಹವಾಗುತ್ತಾನೆ. ೧೮೪೧ರಲ್ಲಿ ಬ್ರಿಟಿಷ್ ಸರಕಾರ ಟೇಲರನನ್ನು ಪೊಲಿಟಿಕಲ್ ಏಜೆಂಟ್‌ನೆಂದು ಸುರಪುರಕ್ಕೆ ಕಳುಹಿಸಿಕೊಟ್ಟಿತು. ೧೮೪೦-೫೦ರ ಅವಧಿಯಲ್ಲಿ ಸುರಪುರ ಸಂಸ್ಥಾನದಲ್ಲಿ ಬ್ರಿಟೀಷ್ ಸರಕಾರದ ರಾಜಕೀಯ ಪ್ರತಿನಿಧಿಯಾಗಿ, ಸಂಸ್ಥಾನದ ಏಳಿಗೆಗಾಗಿ ಸಾಕಷ್ಟು ಶ್ರಮಿಸಿದ್ದಾನೆ. ಸುರಪುರ ಸಂಸ್ಥಾನವು ಸಂಕ್ರಮಣ ಸ್ಥಿತಿಯಲ್ಲಿರುವಾಗ ಸಂಸ್ಥಾನದ ಆರ್ಥಿಕ ಪರಸ್ಥಿತಿಯನ್ನು ಸುಧಾರಿಸುವಲ್ಲಿ ಟೇಲರನು ವಹಿಸಿದ ಪಾತ್ರ ಬಹುಮುಖ್ಯವಾದದ್ದು.[೪] ಅಷ್ಟೇ ಅಲ್ಲದೇ ಮೆಡೋಸ್ ಟೇಲರ್ ಭಾರತೀಯ ಇತಿಹಾಸ ಮತ್ತು ಸಮಕಾಲೀನ ಸಮಾಜದ ಸಂದರ್ಭಗಳನ್ನು ವಸ್ತುವನ್ನಾಗಿಸಿಕೊಂಡು ಒಬ್ಬ ಪ್ರಮುಖ ಕಾದಂಬರಿಕಾರನಾಗಿಯೂ ಹೆಸರುವಾಸಿ, ಕ್ರಿ.ಶ. ೧೮೫೧ ರಿಂದ ೧೮೬೨ರ ವರೆಗೆ ಸುರಪುರ ಪ್ರದೇಶದ ಹಗರಟಗಿ, ರಾಜನಕೊಳೂರು, ಚಿಕ್ಕನಹಳ್ಳಿ, ಶಹಾಪುರ ತಾಲೂಕಿನ ವಿಭೂತಿಹಳ್ಳಿ, ಜೇವರ್ಗಿ, ಆಂದೋಲಾ, ಭೀಮರಾಯನ ಗುಡಿ, ಸೇರಿದಂತೆ ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಬೃಹತ್ ಶಿಲಾ ಸಂಸ್ಕೃತಿಯ ಕಲ್ಗೋರಿ, ಮತ್ತು ಪ್ರಾಗೈತಿಹಾಸಿಕ ನೆಲೆಗಳನ್ನು ಕಂಡುಹಿಡಿದಿದ್ದಾನೆ. ಅಲ್ಲದೇ ಚರಿತ್ರೆಕಾರ ಮತ್ತು ಉತ್ತಮ ಚಿತ್ರಕಲಾವಿದನು ಆಗಿದ್ದನು.

**ಕಲಾಕೃತಿಗಳು:** ರೇಖಾಚಿತ್ರಗಳು, ಕಲಾದಗಿಯ ಪ್ರಾಚೀನ ದೇವಾಲಯದ ಮಹಾದ್ವಾರ, ಶಹಾಪುರ ತಾಲೂಕಿನ ಭೀಮರಾಯನ ಗುಡಿ ಸಮೀಪದ ಕಲ್ಲುಬಂಡೆಗಳ ಸಮೂಹ ಚಿತ್ರ, ರಾಜನಕೊಳೂರು ಕಲ್ಗೋರಿ ಚಿತ್ರ, ಗೋಲ್ಕೊಂಡ ಕೋಟೆ, ಹೈದ್ರಾಬಾದ್ ಚಾರಮಿನಾರ್, ಹೀಗೆ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಬ್ರಿಟೀಷ್ ಸರಕಾರದ ರಾಜಕೀಯ ಪ್ರತಿನಿಧಿಯಾಗಿ ಸುರಪುರಕ್ಕೆ ಬರುವ ಮುನ್ನ ರೇಖಾಚಿತ್ರ ರಚನಾ ಕಾರ್ಯದಲ್ಲಿ ಪ್ರಾವಿಣ್ಯತೆ ಪಡೆದ ಟೇಲರ್ ಸುರಪುರಕ್ಕೆ ಬಂದು ಗರುಡಾದ್ರಿ ಮನೆತನದ ಕಲಾ ಶೈಲಿಯಲ್ಲಿ ಛಾಯಾಚಿತ್ರದ ಬಳಕೆ ಬೆಳಕಿಗೆ ತಂದನು. ೧೮೫೦-೬೦ರ ದಶಕದಲ್ಲೇ ಮೆಡೋಸ್ ಟೇಲರ್‌ನ ಮೂಲಕ ಛಾಯಾಚಿತ್ರಕಲೆಯು ಸುರಪುರಕ್ಕೆ ಪರಿಚಯವಾಯಿತೆಂದು ಹೇಳಬಹುದು.[೫] ಮೆಡೋಸ್ ಟೇಲರನು ನಿಸರ್ಗ ಚಿತ್ರ, ರೇಖಾಚಿತ್ರಗಳು ಕಲಾವಲಯದಲ್ಲಿ ಮಹತ್ವದ ಕಲಾಕೃತಿಗಳಾಗಿವೆ.

### ೩. ಗಾಜಿನ ಚಿತ್ರಕಲೆ

ಭಾರತೀಯ ಚಿತ್ರಕಲಾ ಪ್ರಕಾರಗಳಲ್ಲಿ ಹಲವು ವಿಧದ ಚಿತ್ರಕಲೆ ರೂಪತಾಳಿ ತಮ್ಮದೇಯಾದ ಸ್ವರೂಪವನ್ನು ಪಡೆದುಕೊಂಡಿವೆ. ಭಿತ್ತಿಚಿತ್ರಕಲೆ, ಭಾವಚಿತ್ರ ಜನಪದ ಚಿತ್ರಕಲೆ, ಹಚ್ಚೆ ಚಿತ್ರಕಲೆ, ಮದರಂಗಿ ಚಿತ್ರಕಲೆ ಹೀಗೆ ಅವುಗಳಂತೆ ಪ್ರಮುಖವಾಗಿ ಗಾಜಿನ ಮೇಲೆ ರಚಿಸುವ ಚಿತ್ರಗಳು ಕಾಲಾನುಕ್ರಮವಾಗಿ ಬಳಕಿಗೆ ಬರುತ್ತವೆ. ೧೮, ೧೯ ಶತಮಾನದ ಸುಮಾರಿಗೆ ಕಾಣಿಸಿಕೊಂಡ ಗಾಜಿನ ಚಿತ್ರಕಲೆ ಧಾರ್ಮಿಕತೆ, ಮತ್ತು ಸಮಕಾಲೀನ ದೃಶ್ಯಾವಳಿಗಳನ್ನು ಪಸರಿಸಲು ಮುಂದಾಯಿತು. ಪಾಶ್ಚಿಮಾತ್ಯ ದೇಶದಿಂದ ಭಾರತಕ್ಕೆ ಮುಂದುವರೆದುಕೊಂಡು ಬಂದ ಗಾಜಿನ ಚಿತ್ರಕಲೆ ಧರ್ಮದ ಹಿನ್ನಲೆಯಾಗಿ ರೂಪಗೊಂಡು ಮುಂದೆ ಪರಂಪರೆಯನ್ನು ಮುರಿದುಕೊಳ್ಳುವ ನಿಟ್ಟಿನಲ್ಲಿ ಪ್ರಸ್ತುತ ಸಮಕಾಲೀನ ಸಂದರ್ಭ ಆಧಾರಿತ ಚಿತ್ರಗಳು ಬೆಳಕಿಗೆ ಬರುತ್ತವೆ. ಗಾಜಿನ ಹಿಂಭಾಗದಲ್ಲಿ ಚಿತ್ರಿಸಿದರೆ (Refluent Form) ಅದು ಮುಂಭಾಗದಲ್ಲಿ ಚಿತ್ರದ ಪ್ರತಿಬಿಂಬ (Introspective) ಮೂಡಿಸುವಂತಹ ರಚನಾ ತಂತ್ರಗಾರಿಕೆ ಹೊಂದಿದೆ. ತಿಳಿವರ್ಣಗಳಿಂದ ತುಂಬಿಕೊಂಡ ಗಾಜಿನ ಮೇಲೆ ಹಲವು ರೇಖೆಗಳ ಕೌಶಲ್ಯ ಆಕರ್ಷಕವಾಗಿರುತ್ತವೆ. ಇಂತಹ ಗಾಜಿನ ಚಿತ್ರಕಲೆಯ ಹಲವು ನೆಲೆಗಳು ಯಾದಗಿರಿ ಜಿಲ್ಲೆಯಲ್ಲಿ ಕಾಣಿಸಿಕೊಳ್ಳುತ್ತವೆ.

**ಗಾಜಿನ ಚಿತ್ರಗಳ ನೆಲೆಗಳು**

೧. ಸುರಪುರದ ಶ್ರೀ ತಾರಾಚಂದ್. ದೇವಿಚಂದ್ ಅವರ ಮನೆಯಲ್ಲಿರುವ ಗಾಜಿನ ಚಿತ್ರಗಳು.

೨. ಸುರಪುರದ ಶ್ರೀ ಶಾಂತಿಲಾಲ್. ಗೋಮರಾಜ್ ಜೈನ್ ಅವರ ಮನೆಯಲ್ಲಿನ ಚಿತ್ರಗಳು.

೩. ಯಾದಗಿರಿ ಗಾಂಧಿ ಬಜಾರದಲ್ಲಿರುವ ಗಾಜಿನ ಚಿತ್ರಗಳು.

೪. ಗೋಗಿಯ ಸಂತ ಸಯ್ಯದ್ ಚಂದಾ ಹುಸೇನಿ ದರ್ಗಾದೊಳಗಿನ ಗಾಜಿನ ಚಿತ್ರಕಲೆ ಒಟ್ಟು ನಾಲ್ಕು ಸ್ಥಳಗಳಲ್ಲಿ ಗಾಜಿನ ಚಿತ್ರಕಲೆ ಇರುವುದು ಕಂಡುಬರುತ್ತವೆ. ಅವುಗಳಲ್ಲಿ ಹಲವು ಕಲಾಕೃತಿಗಳ ವಿಶ್ಲೇಷಣೆ ಇಲ್ಲಿ ಮಾಡಲಾಗುತ್ತದೆ.

**೧. ಸುರಪುರದ ಶ್ರೀ ತಾರಾಚಂದ್ ದೇವಿಚಂದ್ ಅವರ ಮನೆಯಲ್ಲಿನ ಕಲಾಕೃತಿಗಳು**

*** ವಿಷ್ಣು, ಶ್ರೀದೇವಿ–ಭೂದೇವಿ ಚಿತ್ರ**

ಚತುರ್ಭುಜಧಾರಿಯಾದ ವಿಷ್ಣು ಸ್ವರ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಎಡ ಮತ್ತು ಬಲಬದಿ ಶ್ರೀದೇವಿ ಹಾಗೂ ಭೂದೇವಿ ನಿಂತಿದ್ದಾರೆ. ವಿಷ್ಣು ಮತ್ಸ್ಯರೂಪದಲ್ಲಿರುವಂತೆ ಗೋಚರಿಸುತ್ತಾನೆ. ಕೊರಳಲ್ಲಿನ ಹಾರ, ವಸ್ತ್ರಾಲಂಕಾರ, ವಿವಿಧ ವಿನ್ಯಾಸ, ಹಳದಿ, ನೀಲಿ, ಹಸಿರು, ಬಿಳಿ ವರ್ಣಗಳಿಂದ ರಚನೆಯಾಗಿದೆ. ಶ್ರೀದೇವಿ ಮತ್ತು ಭೂದೇವಿಯರ ಕೈಯಲ್ಲಿನ ಕಮಲದ ಹೂಗಳು ಬಿಳಿವರ್ಣದಲ್ಲಿವೆ.

ವಿಷ್ಣು ಮತ್ತು ದೇವಿಯರ ತಲೆಯ ಮೇಲಿನ ಕಿರೀಟ, ಮುಖದಲ್ಲಿನ ಸೌಮ್ಯತೆ, ಭಾವ ಕಂಗೊಳಿಸುತಿಹದು, ಹಿಂದೆ ಎರಡು ಕಂಬಗಳ ದ್ವಾರದಲ್ಲಿ ಆನೆ ಸ್ವಾಗತಿಸುತ್ತಿರುವಂತೆ, ಪರದೆ, ವಿಷ್ಣುವಿನ ಕಾಲಕೆಳಗೆ ಹೂವಿನ ದಳ, ಎಲ್ಲವೂ ಉತ್ತಮ ಸಂಯೋಜನಾ ಚಿತ್ರವಾಗಿದೆ.

*** ವಿಷ್ಣು ಮತ್ತು ನಾರದ**

ನೀಲಿವರ್ಣ ಮೈಯಿಂದ ರೂಪಗೊಂಡ ವಿಷ್ಣು ನಾರದರೊಂದಿಗೆ ಸಮಾಲೋಚನ ಸಂದರ್ಭ ಚಿತ್ರ ಇದಾಗಿದೆ. ನಾಲ್ಕು ಕೈಗಳುಳ್ಳ ವಿಷ್ಣು ಶಂಖ, ಚಕ್ರ, ಗಧೆ ಹಿಡಿದಿದ್ದಾನೆ. ಕೆಂಪು, ಹಳದಿ, ಹಸಿರುವರ್ಣಗಳಿಂದ ರೂಪಗೊಂಡ ವಸ್ತ್ರಗಳು ಹಲವು ಸುರುಳಿಗಳಿಂದ ವಿನ್ಯಾಸಗೊಂಡಿವೆ. ಕೊರಳಲ್ಲಿನ ಆಭರಣ, ತಲೆಯ ಮೇಲಿನ ಕಿರೀಟ, ಮುಖದಲ್ಲಿನ ಚೈತನ್ಯ, ಕಣ್ಣಲ್ಲಿನ ಉತ್ಸಾಹ, ನಿಂತುಕೊಂಡ ಭಂಗಿ ಗಮನಾರ್ಹವಾಗಿವೆ. ನಾರದನು ವೀಣೆಯನ್ನು ನುಡಿಸುತ್ತ ನಿಂತಿರುವ ದೃಶ್ಯ ತಿಳಿ ನೀಲಿ ವರ್ಣದ ಮೈಮೇಲಿನ ವಸ್ತ್ರ, ಬಿಳಿಧೋತರ, ಜಡೆ ಕಟ್ಟಿದ ತಲೆ ಕೂದಲು ಹಣೆಯ ಮೇಲಿನ ನಾಮ, ಕಣ್ಣಲ್ಲಿನ ಸೆಳೆತ, ವಿಷ್ಣುವಿನತ್ತ ನೋಟವಿದೆ. ವಿಷ್ಣು ಮತ್ತು ನಾರದರ ಮಧ್ಯೆ ಬಾಳೆಗೊನೆ, ಗಾಜಿನ ತೂಗುದೀಪಗಳು, ಹಿಂದಿನ ಗೋಪುರ ವಿನ್ಯಾಸ, ಪೂಜಾ ಸಾಮಗ್ರಿಗಳಾದ ಹಣ್ಣು-ಹಂಪಲು, ಆರತಿ, ಹೀಗೆ ಹಲವು ಮಿಶ್ರಿತ ವರ್ಣದಿಂದ ರೂಪುಗೊಂಡಿದೆ.

*** ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರು**

ಕೃಷ್ಣನು ಇಬ್ಬರು ಗೋಪಿಕಾ ಸ್ತ್ರೀಯರನ್ನು ಅಪ್ಪಿಕೊಂಡು ನಿಂತಿರುವ ದೃಶ್ಯಚಿತ್ರ ಇದಾಗಿದೆ. ಹಸಿರು ಕುಪ್ಪಸ ತೊಟ್ಟ ಗೋಪಿಕೆಯರು ಅಲಂಕಾರಿಕ ಸೀರೆಯನ್ನುಟ್ಟು ಕೃಷ್ಣನ ತೆಕ್ಕೆಯೊಳಗೆ ನಸುನಗು ಚೆಲ್ಲುತಿಹರು. ಮಧ್ಯೆ ನಿಂತ ಕೃಷ್ಣ, ಹಸಿರು, ಹಳದಿ ವರ್ಣದ ವಸ್ತ್ರಾಭರಣದಿಂದ ಶೋಭಿಸುತಿಹನು. ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರ ಮುಖದಲ್ಲಿ ನಗೆಯ ಕಂಪು ಸೂಸಿದೆ. ಬಂಗಾರ ವರ್ಣ ಲೇಪಿತ ಈ ಕಲಾಕೃತಿ ಹೆಚ್ಚು ಅಲಂಕಾರಿಕವಾಗಿದೆ.

*** ಕೃಷ್ಣ ಯಶೋಧೆ**

ಕೃಷ್ಣನು ಯಶೋಧೆಯ ಹೆಗಲ ಮೇಲೆ ಕೈ ಹಾಕಿ ನಿಂತಿರುವ ಭಂಗಿಯಾಗಿದೆ. ಯಶೋಧೆಯು ಕೈ ಚಲನೆ ಹಾಗೆಯೇ ಇದೆ. ಇಬ್ಬರು ನಿಂತಿರುವ ದೃಶ್ಯ ಏಕರೂಪವಾಗಿದೆ. ಸಮನ್ವಯ ಸಾಂಕೇತಿಕ ಮನಸ್ಸಿನ ಕೃಷ್ಣ-ಯಶೋಧೆ ಪರಸ್ಪರ ಪ್ರೀತಿಯ ಸ್ವರೂಪವನ್ನು ತಿಳಿಸುತ್ತದೆ. ಕೃಷ್ಣನ ಮೈ ಬಣ್ಣ ನೀಲಿಯಾದರೆ ಯಶೋಧೆಯ ಬಣ್ಣ ಗೌರವರ್ಣದಾಗಿದೆ. ವಸ್ತ್ರಾಲಂಕಾರ ವಿವಿಧ ವಿನ್ಯಾಸಗಳಿಂದ ಶೃಂಗಾರಗೊಂಡಿದೆ.

* **ನಿಸರ್ಗ ಚಿತ್ರ**

ಧರ್ಮ ಆಧಾರಿತ ಕಲಾಕೃತಿಗಳ ಎದುರಿಗೆ ಮತ್ತಲವು ಕಲಾಕೃತಿಗಳು ಇವೆ. ಅವು ನಿಸರ್ಗ ಚಿತ್ರಗಳು ಒಂದು ಕಾಲದ ನಿರ್ದಿಷ್ಟ ಮನೆಗಳು ನೈಜವಾಗಿ ರೂಪಗೊಂಡಿವೆ ಎಂದು ಅನಿಸಿದರೂ ಮತ್ತೊಂದು ಕಡೆ ಕಲಾವಿದರ ಸೃಜನಶೀಲಭಾವ ಪ್ರಚೋದನೆಯಾಗಿದೆ ಎಂದು ಅನಿಸುತ್ತದೆ. ಕಟ್ಟಡ ವಿನ್ಯಾಸ, ಶೈಲಿಯನ್ನು ಗಮನಿಸಿದಾಗ ನಗರ ಪ್ರದೇಶದ ಮನೆಗಳಂತೆ ಈ ಚಿತ್ರದಲ್ಲಿ ಮನೆಗಳು ಚಿತ್ರಣಗೊಂಡಿವೆ ಮನೆಯ ಮುಂದಿನ ಕಟ್ಟೆ, ಕಾರಂಜಿ, ಹಸಿರು ಗಿಡಗಳು, ಹಳದಿ, ನೀಲಿ, ಹಸಿರು ಹಲವು ಮಿಶ್ರಣ ವರ್ಣಲೇಪನ ಮಾಡಲಾಗಿದೆ. ಇಂತಹ ಅನೇಕ ಚಿತ್ರಗಳು ಗಾಜಿನ ಮೇಲೆ ಚಿತ್ರಣಗೊಂಡಿವೆ. ಈ ಮೇಲೆ ವಿವರಿಸಿದ ಎಲ್ಲಾ ಚಿತ್ರಗಳ ಸುರಪುರದ ತಾರಾಚಂದ, ದೇವಿಚಂದ ಅವರ ಮನೆಯಲ್ಲಿ ಸಂಗ್ರಹಗೊಂಡಿವೆ.

**೨. ಸುರಪುರದ ಶ್ರೀ ಶಾಂತಿಲಾಲ, ಗೋಮರಾಜ ಜೈನ ಅವರ ಮನೆಯಲ್ಲಿನ ಗಾಜಿನ ಚಿತ್ರಗಳು**

* **ಗಜಲಕ್ಷ್ಮೀ ಚಿತ್ರ**

ಬಿಳಿವರ್ಣದ ಕಮಲದ ಮೇಲೆ ಕುಳಿತಿರುವ ಲಕ್ಷ್ಮೀ ನಾಲ್ಕು ಕೈಗಳನ್ನು ಹೊಂದಿದ್ದಾಳೆ. ಬಲಗೈಯಿಂದ ಆಶೀರ್ವದಿಸಿದರೆ ಎಡಗೈಯಿಂದ ಹಣ ಸುರಿದಂತೆ ಕಾಣುತ್ತದೆ. ಮತ್ತೊಂದು ಹಿಂಬದಿಯ ಬಲಗೈ ಮತ್ತು ಎಡಗೈಯಲ್ಲಿ ಬಿಳಿವರ್ಣದ ಕಮಲದ ಹೂಗಳನ್ನು ಹಿಡಿದಿದ್ದಾಳೆ. ಹಸಿರು ವರ್ಣದ ಕುಪ್ಪಸ. ಕೆಂಬಣ್ಣದ ಸೀರೆ ಮೈಮೇಲಿನ ಆಭರಣ, ತಲೆಯ ಮೇಲೆ ಕಿರೀಟ ಧರಿಸಿದ್ದಾಳೆ ಎರಡು ಬದಿಯಲ್ಲಿ ಹಿಂಭಾಗ ಆನೆಗಳು ಪುಷ್ಪವನ್ನು ಸುರಿದಂತೆ ಕಾಣುತ್ತದೆ. ಬಂಗಾರ ವರ್ಣಲೇಪಿತ ಪ್ರಭಾವಳಿ ಹೂವಿನ ಹಾರ, ಕೆಂಬಣ್ಣದ ಪರದೆ ಎಲ್ಲವೂ ಆಕರ್ಷಕವಾಗಿವೆ.

* **ಕೃಷ್ಣ ಮತ್ತು ಗೋಪಿಕೆಯರು**

ಸಿಂಹಾಸನ ಮೇಲೆ ಕುಳಿತ ಕೃಷ್ಣ ತನ್ನ ಸುತ್ತ ಎಂಟು ಜನ ಗೋಪಿಕೆಯರು ಕೈಯಲ್ಲಿ ಬೆಣ್ಣೆ ಹಿಡಿದುಕೊಂಡು ನಿಂತಿದ್ದಾರೆ. ಅಲಂಕಾರಿಕ ಉಡುಪುಗಳನ್ನು ಧರಿಸಿದ ಗೋಪಿಕೆಯರು ಕೃಷ್ಣನ ಮನದ ಆಸೆಯನ್ನು ಪೂರೈಸಿದಂತೆ ಹಲವು ಸಂದರ್ಭಗಳು ಕಾಣಿಸುತ್ತವೆ. ಹಿಂಬದಿಯ ಕಟ್ಟಡ ವಿನ್ಯಾಸ ಹಸಿರು, ಹಳದಿ, ಕೆಂಪು ವರ್ಣದಿಂದ ರೂಪುಗೊಂಡಿದೆ, ಕೃಷ್ಣ ಕುಳಿತಿರುವ ಭಂಗಿ, ಆಸನ, ಎಲ್ಲವೂ ಅಲಂಕಾರಿಕವಾಗಿವೆ.

* **ಕೊಳಲು ನುಡಿಸುತ್ತಿರುವ ಕೃಷ್ಣ**

ನೀಲಿ ವರ್ಣದ ಚೆಲುವ ಕೃಷ್ಣನು ಕೊಳಲನ್ನು ನುಡಿಸುತಿಹನು. ಕೊಳಲುನಾದಕ್ಕೆ ಗೋಪಿಕೆಯರು

ಹೆಜ್ಜೆಯನ್ನು ಹಾಕುತಿದ್ದಾರೆ. ಗೋವು ಕೃಷ್ಣನ ಎಡಗಾಲಿಗೆ ಮುತ್ತನಿಡುತ್ತಿರುವ ದೃಶ್ಯ, ಗೋಪಿಕೆಯರ ಕೈಯಲ್ಲಿನ ಬೆಣ್ಣಿ. ಅವರು ಧರಿಸಿರುವ ಅಲಂಕಾರಿಕ ಕೆಂಬಣ್ಣದ ಸೀರೆ, ಹಳದಿ ವರ್ಣದ ಆಭರಣಗಳು, ಕೃಷ್ಣನ ಹಿಂದಿರುವ ಮರ, ಕೃಷ್ಣನ ಮೈಮೇಲಿನ ವಿನ್ಯಾಸದ ವಸ್ತ್ರ ಬಂಗಾರ ವರ್ಣಲೇಪಿತವಾದಂತಿದೆ. ಈ ಮೂರು ಚಿತ್ರಗಳಲ್ಲದೇ ಇನ್ನು ಎರಡು ಚಿತ್ರಗಳು ಕೃಷ್ಣನು ಗೋಪಿಕೆಯೊಂದಿಗೆ ಇರುವ ಚಿತ್ರಗಳಾಗಿವೆ. ಈ ಮೇಲೆ ವಿವರಿಸಿದ ಒಟ್ಟು ಐದು ಚಿತ್ರಗಳು ಸುರಪುರದ ಶ್ರೀ ಶಾಂತಿಲಾಲ, ಗೋಮರಾಜ ಜೈನ್ ಅವರ ಮನೆಯಲ್ಲಿ ಸಂಗ್ರಹಗೊಂಡಿವೆ. ಗಾಜಿನ ಚಿತ್ರಗಳ ಮಧ್ಯೆ ಗರುಡಾದ್ರಿಯವರು ರಚಿಸಿದ ದೀಪಚಂದ ಜೈನ್ ಅವರ ವರ್ಣ ಕಲಾಕೃತಿ ಸಂಗ್ರಹಗೊಂಡಿದೆ.

**೩. ಯಾದಗಿರಿ ಗಾಂಧಿ ಬಂಜಾರದಲ್ಲಿರುವ ಕಲಾಕೃತಿಗಳು**

ಜಿಲ್ಲಾ ಕೇಂದ್ರವಾದ ಯಾದಗಿರಿ ನಗರದ ಗಾಂಧಿ ಚೌಕ್ ಹತ್ತಿರುವ ಬಂಗಾರದ ಅಂಗಡಿಯಲ್ಲಿ ಸುಮಾರು ಹತ್ತಕ್ಕೂ ಹೆಚ್ಚು ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಸುಮಾರು ೨೫೦ ವರ್ಷಗಳ ಹಳೆಯದಾದ ಚಿತ್ರಗಳಾಗಿವೆ. ಶ್ರೀರಾಮ ಸೀತೆ ಕೃಷ್ಣ ಮತ್ತು ಯಶೋಧೆ, ಗೋಪಿಕ ಸ್ತ್ರೀಯರೊಂದಿಗೆ ಕೃಷ್ಣ, ನಿಸರ್ಗ ಚಿತ್ರಗಳು ಹೀಗೆ ಸೇರಿದಂತೆ ಹಲವಾರು ಚಿತ್ರಗಳು ಸಂಗ್ರಹಗೊಂಡ ನೆಲೆಯಾಗಿದೆ. ಎಲ್ಲಾ ಚಿತ್ರಗಳು ಅಲಂಕಾರಿಕ ವಸ್ತ್ರ ವಿನ್ಯಾಸಹೊಂದಿದ ಚಿತ್ರಗಳಾಗಿವೆ. ಹಸಿರು, ನೀಲಿ, ಕಡುಗೆಂಪು ಸೇರಿದಂತೆ ಹಲವು ಮಿಶ್ರಿತ ವರ್ಣ ವಿನ್ಯಾಸ ಹೊಂದಿವೆ.

**೪. ಗೋಗಿಯ ಸಯ್ಯದ್ ಚಂದಾ ಹುಸೇನಿ ದರ್ಗಾದೊಳಗಿನ ಗಾಜಿನ ಚಿತ್ರಕಲೆ**

ಶಹಾಪುರ ತಾಲೂಕಿನ ಗೋಗಿ ಗ್ರಾಮವು ಹಿಂದು, ಮುಸ್ಲಿಂ ಭಾವೈಕ್ಯತೆಯ ಕೇಂದ್ರವಾಗಿದೆ. ಈ ಗ್ರಾಮದಲ್ಲಿರುವ ಬಾರಬಾರಿ ಮಸೀದಿ, ಸಂತ ಚಂದಾ ಹುಸೇನಿ (ಸಮಾಧಿ) ದರ್ಗಾ, ಸಂತನ ಹೆಂಡತಿ ಮತ್ತು ಮಗನ ಗೋರಿ ಇರುವಂತ ಗುಮ್ಮಟ, ಈ ಕಟ್ಟಡಗಳು ಉತ್ತಮ ಕಲಾತ್ಮಕ ವಾಸ್ತುಶೈಲಿಯಾಗಿವೆ. ಕ್ರಿ.ಶ. ೧೪,೧೫ನೇ ಶತಮಾನದಲ್ಲಿ ತಲೆ ಎತ್ತಿದ ಬಾರಾಬರಿ (ಮಸೀದಿ) ಆದಿಲ್‌ಶಾಹಿಗಳ ವಾಸ್ತುಶಿಲ್ಪ ಶೈಲಿಯಾಗಿದೆ. ಸೇದಿಕಲ್ಲು ಮತ್ತು ಕೆಂಪು, ಕಪ್ಪು ಕಲ್ಲುಗಳಿಂದ ನಿರ್ಮಾಣಗೊಂಡ ಈ ಕಟ್ಟಡ ಶಿಲ್ಪಿಗಳ ಕೈಚಳಕದಲ್ಲಿ ಸೃಜನಾತ್ಮಕ ಕಲೆಯ ಆಗರವಾಗಿದೆ. ೧೨ ಕಮಾನು, ೧೬ ಮಿನಾರ್‌ಗಳು ಮೇಲ್ಛಾವಣಿಯಲ್ಲಿ ಕುದುರೆಗಲ್ಲಿನ ಸಾಲು, ಹೂದಳದ ವಿನ್ಯಾಸ, ಸೂಕ್ಷ್ಮವಾಗಿ ಹಬ್ಬಿದ ಬಳ್ಳಿ, ಎಲೆ ಹೂ, ಎಲ್ಲವೂ ಕಲಾ ಚಿಂತನೆಗೆ ಹಚ್ಚುತ್ತದೆ. ಅದರಂತೆ ಸಂತ ಸಯ್ಯದ್ ಚಂದಾ ಹುಸೇನಿ (ಸಮಾಧಿ) ದರ್ಗಾವು ಬಹಮನಿ ಅರಸರ ವಾಸ್ತುಶಿಲ್ಪ ಶೈಲಿಯಾಗಿದೆ. ಈ ವಾಸ್ತು ಕಟ್ಟಡ ಕ್ರಿ.ಶ. ೧೩ ೧೪ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಸುತ್ತಲೂ ಕಿಟಕಿಯ ವಿನ್ಯಾಸ ಹಲವು ಸೃಜನಶೀಲ ಆಕೃತಿಗಳಿಂದ ಗಾಳಿ ಸೂಸುತ್ತದೆ. ಸಂತ ಸಯ್ಯದ್ ಚಂದಾ ಹುಸೇನಿ

ಮತ್ತು ಮಗನ ಗೋರಿ ಇರುವ ಗುಮ್ಮಟವು ಕಲಾ ದೃಷ್ಟಿಯಿಂದ ಉತ್ತಮ ವಾಸ್ತುಶೈಲಿ ಶಿಲ್ಪವಾಗಿದೆ. ಕಪ್ಪು ಬಣ್ಣದ ಕಲ್ಲಿನ ಈ ಬೃಹತ್ ಗೊಮ್ಮಟ ಶಿಲೆ ಕಲಾವಿದರ ಕಲಾ ತಜ್ಞತೆಗೆ ಪೂರಕವಾಗುತ್ತದೆ. ವಿಶಾಲವಾದ ಪರಿಸರ ದರ್ಗಾದ ಪಕ್ಕದಲ್ಲಿಯೇ ಸಂಗಮನಾಥನ ದೇವಾಲಯವಿದ್ದು, ಹಿಂದು-ಮುಸ್ಲಿಂ ಭಾವೈಕ್ಯತೆಯನ್ನು ಸಾರುವ ಸಮನ್ವಯತೆಗೆ ಈ ಸ್ಥಳ ಪ್ರಮುಖವಾದದ್ದು, ಅಲ್ಲದೆ ಬಾಣತಿ ಭಾವಿ ಇದೆ. ಇದಕ್ಕೆ ತನ್ನದೆಯಾದ ಐತಿಹ್ಯ ವಿಚಾರಗಳಿವೆ. ಅದರಂತೆ ಜನರು ನಡೆದುಕೊಳ್ಳುತ್ತಾರೆ. ಸುತ್ತಲೂ ರಕ್ಷಣಾ ಗೋಡೆಯು ಕಲಾತ್ಮಕ ಕಟ್ಟಡವಾಗಿದೆ. ದೂರದಿಂದಲೇ ಕಪ್ಪು ಬಣ್ಣದ ಶಿಲೆಯಾಗಿ ಆಕರ್ಷಿಸುವ ಗೋಗಿಯ ಗುಮ್ಮಟಗಳು ಸಮೀಪವಾದಂತೆ ಹಲವಾರು ವೈವಿಧ್ಯ ವಿಷಯಗಳನ್ನು ತಿಳಿಸುವ ಪ್ರಸಿದ್ಧ ಸ್ಥಳವಾಗಿದೆ.

*** ಗಾಜಿನ ಚಿತ್ರಕಲೆ**

ಸಂತ ಸಯ್ಯದ್ ಹುಸೇನಿ (ಸಮಾಧಿ) ಇರುವ ದರ್ಗಾದ ಮೇಲ್ಭಾಗವೆಲ್ಲ ಪೂರ್ತಿ ಗಾಜಿನ ಚಿತ್ರಕಲೆಯಿಂದ ಅಲಂಕಾರವಾಗಿದೆ. ಕಟ್ಟಡ ಶೈಲಿ ಗಾತ್ರ, ವಿನ್ಯಾಸ, ಆಕಾರ ಎಲ್ಲವನ್ನು ಗಮನಿಸುತ್ತಾ, ಸಮಾಧಿ ಸಮೀಪ ಹೋದಂತೆ ಒಳಗಡೆ ಮೇಲ್ಭಾಗ ಗಾಜಿನ ಚಿತ್ರಕಲೆಯ ಮೂಲಕ ಆ ಸಮಾಧಿಗಳಿಗೆ ಮತ್ತಷ್ಟು ಕಲಾತ್ಮಕತೆಯಿಂದ ಮೆರಗುಗೊಳಿಸಿದ್ದಾರೆ. ಸುತ್ತಲೂ ಕಮಾನುಗಳ ತಳಹದಿಯಿಂದ ಮೇಲೆ ಹೋದಂತೆಲ್ಲ ವಿವಿಧ ವಿನ್ಯಾಸ, ತ್ರಿಕೋನ ರೂಪದಲ್ಲಿರುವ ಕಟ್ಟಡಕ್ಕೆ ಗಾಜಿನಿಂದ ರೂಪಗೊಳಿಸಲಾಗಿದೆ. ಮೇಲೆ ಚತ್ತಿಗೆ ನಟ್ಟನಡುವೆ ಹೂದಳಗಳನ್ನು ಗಾಜಿನ ವಿವಿಧ ವರ್ಣಗಳಿಂದ ರಚಿಸಲಾಗಿದೆ. ನೀಲಿ, ಹಸಿರು, ಕೆಂಪು, ಹಳದಿ, ಬಿಳಿ, ಸೇರಿದಂತೆ ಅನೇಕ ವರ್ಣಗಳಿಂದ ಕೂಡಿದ ಗಾಜಿನ ವಿನ್ಯಾಸದ ಚೂರುಗಳಿಂದ ಸಂಪೂರ್ಣ ಕಲಾಕುಸುರಿಯನ್ನಾಗಿ ಮಾಡಲಾಗಿದೆ. ಗಾಜಿನ ಚಿತ್ರಕಲೆಯ ರಚಿಸುವಿಕೆಯಲ್ಲಿ ಈ ದರ್ಗಾದ ಗಾಜಿನ ಚಿತ್ರಕಲೆ ಪ್ರಮುಖವಾಗಿದೆ. ಸಮಕಾಲೀನ ಕಲಾವಿದರ ಕೈ ಚಳಕದಿಂದ ಈ ಚಿತ್ರ ಮೂಡಿಬಂದಿದೆ. ಅಲ್ಲದೇ ದರ್ಗಾ ಹೊರಗಡೆಯಿರುವ ಎಣ್ಣೆ ಹಾಕುವ ಮತ್ತು ಹರಕೆ ಮುಟ್ಟಿಸುವ ಕಂಬವಿದೆ. ಎಣ್ಣೆ ಸುರಿದು ಅಲ್ಲಲ್ಲಿ ಕಪ್ಪು ಆಕಾರ ಹೊಂದಿದೆ. ಅದರ ಮುಂದಿರುವ ಕಟ್ಟಿಗೆಯ (ತುಂಡು)ಗೆ ವಿವಿಧ ತೊಟ್ಟಿಲು, ಕುದುರೆ, ಕಣ್ಣು ಇಂತಹ ವಿನ್ಯಾಸ ಹೊಂದಿದ ಕಬ್ಬಿಣ, ತಾಮ್ರ, ವಿವಿಧ ಮಾಧ್ಯಮದ ಆಕೃತಿಗಳನ್ನು ಮೊಳೆಯಿಂದ ಕಟ್ಟಿಗೆಗೆ ಹೊಡೆಯಲಾಗಿದೆ. ಹಾಗಾಗಿ ಈ ಕಟ್ಟಿಗೆಯ ತುಂಡು ಕೂಡ ಸಮಕಾಲೀನ ಸ್ಪಂದನೆಯ ಮರಗೆತ್ತನೆ ಶಿಲ್ಪವಾಗಿ ಗೋಚರಿಸಿ ಕಲಾಸೂಕ್ಷ್ಮಜ್ಞರ ಮನದಲ್ಲಿ ಸೃಜನಶೀಲ ಭಾವಗಳು ಸೃಷ್ಟಿಯಾಗುತ್ತವೆ. ಹಾಗೂ ವಿಶಾಲವಾದ ಆಲಯದಲ್ಲಿ ಬೃಹತ್ ಬೇವಿನ ಮರಕ್ಕೆ ಮಕ್ಕಳಾಗದೇ ಇರುವವರು ಮಕ್ಕಳಾಗಲಿ ಎಂಬ ನಂಬಿಕೆಯಿಂದ ಹಲವಾರು ಚಿಕ್ಕ ಗಾತ್ರದ ತೊಟ್ಟಿಲುಗಳನ್ನು ಕಟ್ಟಿದ್ದಾರೆ. ಗಾಳಿಬಿಟ್ಟಾಗ ಈ ತೊಟ್ಟಿಲು ಅಲುಗಾಡಿದಂತೆಲ್ಲ. ನೋಡುಗನ ಮನದಲ್ಲಿ ಸಂತೋಷ ಉಂಟಾಗುತ್ತದೆ.

೪. ಡಿ.ಎನ್. ಅಕ್ಕಿಯವರ ಮನೆಯಲ್ಲಿನ ಕಲಾಕೃತಿಗಳು

ಸಗರನಾಡಿನ ಖ್ಯಾತ ಸಂಶೋಧಕರಾದ ಡಿ.ಎನ್. ಅಕ್ಕಿಯವರ ಮನೆಯಲ್ಲಿ ಸಂಗ್ರಹಗೊಂಡ ವರ್ಣಕಲಾಕೃತಿಗಳು ಸುಮಾರು ೧೮-೧೯ನೇ ಶತಮಾನದವುಗಳು ಗುಲಬರ್ಗಾ ಜಿಲ್ಲೆ ಜೇವರ್ಗಿ ತಾಲೂಕಿನ ಮಳ್ಳಿಗ್ರಾಮದ ಜೈನಮಂದಿರದಲ್ಲಿದ್ದ ಈ ಕಲಾಕೃತಿಗಳನ್ನು ಜಯಣ್ಣ ಪಂಡಿತರು ಎನ್ನುವವರು ಅಕ್ಕಿಯವರಿಗೆ ಕೊಟ್ಟಿದ್ದಾರೆ. ಈ ಕಲಾಕೃತಿಗಳು ಜೈನ ಧರ್ಮದ ಪೂಜಾವಿಧಾನವನ್ನು ತಿಳಿಹೇಳುತ್ತವೆ. ಪೂಜಾ ಮಾಡುವ ಸಂದರ್ಭದಲ್ಲಿ ಅಗ್ನಿಯ ಸುತ್ತ ಎಲ್ಲಾ ದಿಕ್ಕುಗಳಿಗೆ ಈ ಚಿತ್ರಪಟಗಳನ್ನು ಇಟ್ಟು ಮಂತ್ರ ಪಟಿಸುತ್ತಿದ್ದರು. ವೈದಿಕರಲ್ಲಿ ಅಷ್ಟದಿಕ್ಪಾಲಕರು ಎಂದು ಕರೆದರೆ ಜೈನ ಧರ್ಮದಲ್ಲಿ ದಶದಿಕ್ಪಾಲಕರು ಇರುತ್ತಾರೆ. ದಶದಿಕ್ಕುಗಳಿಗೆ ದಿಕ್ಪಾಲಕರ ಚಿತ್ರಗಳನ್ನು ಇಟ್ಟು ಪೂಜಾಮಾಡುವ ವಿಧಾನ ವಿರುವ ಕಾರಣದಿಂದಾಗಿ ಈ ಕಲಾಕೃತಿಗಳು ಹುಟ್ಟಿಕೊಂಡಿವೆ. ಕಲಾಕೃತಿಗಳ ವಿವರಣೆ ಈ ಕೆಳಗಿನಂತೆ ವಿವರಿಸಲಾಗಿದೆ.

* ಕಲಾಕೃತಿಗಳು

ಇಂದ್ರ, ಅಗ್ನಿ, ಯಮ, ನೈರುತ್ಯ (ನಿರುತಿ), ವರುಣ, ವಾಯುವ್ಯ (ಪವನ), ಕುಬೇರ, ಈಶಾನ್ಯ (ಶಿವ-ಪಾವರ್ತಿ) ಧರಣೇಂದ್ರ, ಹೀಗೆ ಒಂಬತ್ತು ದಿಕ್ಪಾಲಕರ ವರ್ಣಚಿತ್ರಗಳಿವೆ. ಆದರೆ ದಶದಿಕ್ಪಾಲಕನ ವರ್ಣಚಿತ್ರ (ಸೋಮ) ದೊರೆತಿಲ್ಲ. ಈ ದಶದಿಕ್ಪಾಲಕರ ವರ್ಣ ಕಲಾಕೃತಿಗಳು ಎರಡು ವಿಧಾನದಲ್ಲಿ ಕಂಡುಬರುತ್ತವೆ.

೧. ವರ್ಣಾಲಂಕಾರಿಕ ಚಿತ್ರಗಳು. ೨. ಮಿತವರ್ಣಾಲಂಕಾರಿಕ ಚಿತ್ರಗಳು.

೧ ವರ್ಣಾಲಂಕಾರಿಕ ಚಿತ್ರಗಳು

ವರ್ಣಾಲಂಕಾರಿಕ ಚಿತ್ರಗಳಲ್ಲಿ ಹೆಚ್ಚು ಬಣ್ಣ ಮತ್ತು ರೇಖೆಗಳಿಂದ ರಚನೆಯಾಗಿವೆ. ಕಣ್ಣಿಗೆ ಚಿತ್ರಗಳು ದಟ್ಟ ಪರಿಣಾಮ ಬೀರುತ್ತವೆ.

೨. ಮಿತವರ್ಣಾಲಂಕಾರಿಕ ಚಿತ್ರಗಳು

ಈ ಚಿತ್ರಗಳು ಬಣ್ಣಗಳಿಂದಲೇ ರಚನೆಯಾದರೆ ಇತಿ-ಮಿತಿ ವರ್ಣಲೇಪನ ಈ ಕಲಾಕೃತಿಗಳಲ್ಲಿ ಬಳಕೆಯಾಗಿದೆ. ಹೆಚ್ಚು ವರ್ಣಕ್ಕಿಂತ ರೇಖೆಗಳಿಂದ ಚಿತ್ರಗಳು ಸಷ್ಟವಾಗಿ ಕಾಣುತ್ತವೆ.

* ಇಂದ್ರನ ಚಿತ್ರ

ಆನೆಯ ಮೇಲೆ ಕುಳಿತು ಹೊರಟ ಇಂದ್ರನು ಕಿರೀಟಧಾರಿಯಾಗಿ ಶೋಭಿಸುತ್ತಿದ್ದಾನೆ. ಮೈ ಬಣ್ಣ ಕೇಸರಿಯಾಗಿದೆ. ನಾಲ್ಕು ಕೈಗಳುಳ್ಳ ಇಂದ್ರನು ತನ್ನ ಬೆರಳುಗಳಿಂದ ವಿವಿಧ ಅನುಭವವನ್ನು

ತಿಳಿಹೇಳುವಂತೆ ಭಾಸವಾಗುತ್ತದೆ. ತನ್ನ ಪತ್ನಿಯನ್ನು ಮುಂದೆ ಕೂಡಿಸಿಕೊಂಡು ಪ್ರಯಾಣ ಮಾಡುತ್ತಿರುವ ಸನ್ನಿವೇಶ, ಸೇವಕ ಧ್ವಜವನ್ನು ಹಿಡಿದು ಮುಂದೆ ಮುಂದೆ ಹೊರಟಿದ್ದಾನೆ. ನೀಲಿ ವರ್ಣದಿಂದ ರಚನೆಯಾದ ಆನೆ, ತಲೆಭಾಗ, ಮೈಮೇಲೆ ಕೆಂಪು ಬಣ್ಣದ ವಸ್ತ್ರಾಲಂಕಾರ, ಹಳದಿ ಗೋಪುರ ಹಸಿರು, ಕೆಂಪು, ವರ್ಣದಿಂದ ಎದ್ದು ಕಾಣುತ್ತವೆ. ಹಿಂದಿನ ಹೂವಿನ ಸಾಲು ಕೆಳಮುಖ ಮಾಡಿ, ಇಂದ್ರನನ್ನು ಶೋಭಿಸುತ್ತವೆ. ಈ ಇಂದ್ರನ ಚಿತ್ರಪಟವು ಪೂರ್ವದಿಕ್ಕನ್ನು ಸೂಚಿಸುತ್ತದೆ.

*** ಅಗ್ನಿ ದೇವ**

ಈ ಅಗ್ನಿ ದೇವನು ಟಗರಿನ ಮೇಲೆ ಕುಳಿತು ಪ್ರಯಾಣಿಸುವ ಸನ್ನಿವೇಶ ಚಿತ್ರ ಇದಾಗಿದೆ. ತಿಳಿನೀಲಿ, ಹಳದಿ ಕಪ್ಪು ಕೋಡು, ಕೆಂಬಣ್ಣದ ಇಂದ್ರನ ಉಡುಪು, ಗೌರವರ್ಣ ಮುಖ ಹೊಂದಿದ ಅಗ್ನಿದೇವನ ಪತ್ನಿ, ಮುಂದೆ ಹೊರಟ ಸೇವಕ, ಕೆಂಬಣ್ಣದ ಬಾವುಟ, ಹಿಂಬದಿಯ ಹೂವ, ಎಲೆ, ಬಳ್ಳಿ ಗೋಪುರ ವಿನ್ಯಾಸ ಅಲಂಕಾರಿಕವಾಗಿದೆ. ಈ ಅಗ್ನಿದೇವನ ಚಿತ್ರಪಟವನ್ನು ಆಗ್ನೇಯ ದಿಕ್ಕಿಗೆ ಇಟ್ಟು ಪೂಜೆ ಮಾಡುತ್ತಿದ್ದರು.

*** ಯಮ**

ಯಮರಾಜನು ತನ್ನ ಪತ್ನಿದೇವಿಯನ್ನು ಮುಂದೆ ಕೂಡಿಸಿಕೊಂಡು ಕೋಣದ ಮೇಲೆ ಸವಾರಿ ಮಾಡುತ್ತಿದ್ದಾನೆ. ಗೌರವರ್ಣದ ಪತ್ನಿದೇವಿಯ ತಿಳಿಗೆಂಪು ವರ್ಣದ ಸೀರೆ, ಹಳದಿ ಕುಪ್ಪಸ, ತೊಟ್ಟು ಅಲಂಕಾರಿಕವಾಗಿದ್ದಾಳೆ. ಯಮನು ಕೈಯಲ್ಲಿ ಸುಂದರ ವಿನ್ಯಾಸ ಹೊಂದಿದ ಬೆತ್ತ ಹಿಡಿದು, ಕಿರೀಟಧಾರಿಯಾಗಿ, ಮೈ ತುಂಬ ಬಂಗಾರ ಆಭರಣಗಳನ್ನು ಹಾಕಿಕೊಂಡು ಕಂಗೊಳಿಸುತ್ತಿದ್ದಾನೆ. ಕೋಣ ನೀಲಿ ವರ್ಣದಿಂದ ರಚನೆಯಾಗಿದೆ. ಸೇವಕ ಮತ್ತು ಯಮರಾಜನು ಕೇಸರಿ ಬಣ್ಣ ಮೈ ಹೊಂದಿದ್ದರೆ. ಹಸಿರು, ಕೆಂಪು, ನೀಲಿ ವರ್ಣಗಳಿಂದ ಹೂ, ಎಲೆ, ಕಾಯಿ, ಗೋಪುರ ವಿನ್ಯಾಸ ಹೊಂದಿದೆ. ಈ ಯಮನ ಚಿತ್ರವನ್ನು ದಕ್ಷಿಣ ದಿಕ್ಕನ್ನು ಪ್ರತಿನಿಧಿಸುತ್ತದೆ.

*** ನೈರುತ್ಯದೇವ**

ನೈರುತ್ಯ ದೇವನು ಗಟ್ಟಿಮುಟ್ಟಾದ ಸೇವಕನ ಹೆಗಲ ಮೇಲೆ ತನ್ನ ಪತ್ನಿಯನ್ನು ಕೂಡಿಸಿಕೊಂಡು ಹೊರಟಿದ್ದಾನೆ. ಒಂದು ಕೈಯಲ್ಲಿ ಗಧೆ ಹಿಡಿದು, ಮತ್ತೆ ಮೂರು ಕೈಗಳು ಬೆರಳುಗಳ ಚಲನಾತ್ಮಕತೆ ಹಲವು ಸೂಚನೆಗಳನ್ನು ತಿಳಿಸುತ್ತವೆ. ಹಸಿರು ರುಮಾಲು ಸುತ್ತಿ ಹೊರಟ ಸೇವಕ ನೈರುತ್ಯ ದೇವನನ್ನು ಹೊತ್ತ ರೂಪ ನೋಡುಗನನ್ನು ಆಕರ್ಷಿಸುತ್ತದೆ. ಅವನ ಮುಂದೆ ಹೊರಟ ಮತ್ತೊಬ್ಬ ಬಾಲ ಸೇವಕನು ಕೈಯಲ್ಲಿ ಕಡುಗೆಂಪು ವರ್ಣದ ಧ್ವಜ ಹಿಡಿದು ಹೊರಟಿದ್ದಾನೆ. ಕೇಸರಿ, ಹಳದಿ, ಹಸಿರು ವರ್ಣಗಳು ಹೆಚ್ಚು ಬಳಕೆಯಾದದ್ದು ಕಂಡುಬರುತ್ತದೆ. ಹಿಂದಿನ ಗೋಪುರ ವಿನ್ಯಾಸ

ಹಲವು ಕಲಾಕೃತಿಗಳಂತೆ ಸಮನ್ವಯತೆ ಕಾಣುತ್ತದೆ. ಈ ನೈರುತ್ಯ ದೇವನ ಚಿತ್ರ ನೈರುತ್ಯ ದಿಕ್ಕನ್ನು ಸೂಚಿಸುತ್ತದೆ.

* **ಪವನರಾಜ**

ಈ ಪವನರಾಜನು ಪತ್ನಿಯ ಜೊತೆ ಸಾರಂಗ (ಚಿಗರೆ) ಮೇಲೆ ಕುಳಿತು ಹೊರಟಿದ್ದಾರೆ. ಕೇಸರಿ ವರ್ಣ ಮೈ ಬಣ್ಣಹೊಂದಿದ ಪವನರಾಜ, ಸಾರಂಗ, ಸೇವಕ, ಗೌರವರ್ಣದ ಪತ್ನಿ, ನೀಲಿ ಕುಪ್ಪಸ, ಸಾರಂಗ ಮತ್ತು ರಾಜನ ಉಡುಪು, ಕಿರೀಟ ಬಂಗಾರ ವರ್ಣದ ಲೇಪನವಾಗಿದೆ. ಹಸಿರು, ನೀಲಿ, ಗುಲಾಬಿ ವರ್ಣ, ಕಪ್ಪು, ಕೇಸರಿ ಹಲವು ಮಿಶ್ರವರ್ಣಗಳಿಂದ ಈ ಕಲಾಕೃತಿ ರಚನೆಯಾಗಿದೆ. ಕೆಂಬಣ್ಣದ ಧ್ವಜ ಸೇವಕನ ಕೈಯಲ್ಲಿ ಹಾರಾಡುತ್ತಿದೆ. ರೇಖೆಗಳ ರಚನಾಕಾರ್ಯ ಉತ್ತಮವಾಗಿದೆ. ಈ ಪವನ (ಗಾಳಿ) ರಾಜನ ಚಿತ್ರ ವಾಯುವ್ಯ ದಿಕ್ಕನ್ನು ಪ್ರತಿನಿಧಿಸುತ್ತದೆ.

* **ಕುಬೇರ**

ಕುದುರೆ ತನ್ನ ವಾಹನವನ್ನಾಗಿಸಿಕೊಂಡು ಹೆಂಡತಿಯ ಜೊತೆ ಹೊರಟ ಕುಬೇರ ನಾಲ್ಕು ಕೈ ಹೊಂದಿದ್ದಾನೆ. ಕೇಸರಿ ವರ್ಣ ಮೈ ಬಣ್ಣ ಹೊಂದಿ, ಹಳದಿ ಉಡುಪು ಧರಿಸಿ, ಕಿರೀಟ ಅಲಂಕಾರಿಕ ಆಭರಣಗಳನ್ನು ಮೈತುಂಬ ಹಾಕಿಕೊಂಡಿದ್ದಾನೆ. ಹಸಿರು ಸೀರೆಯನ್ನುಟ್ಟು ಕೆಂಪು ಕುಪ್ಪಸ ತೊಟ್ಟು, ಗೌರವರ್ಣದ ಪತ್ನಿದೇವಿ ಕುಬೇರನೊಂದಿಗೆ ಪ್ರಯಾಣಿಸುತ್ತಿದ್ದಾಳೆ. ಬಿಳಿ ಬಣ್ಣದ ಕುದುರೆ ಮೈತುಂಬ ನೀಲಿವರ್ಣದ ಸಹಾಯದಿಂದ ಹಲವು ಹೂ ವಿನ್ಯಾಸ ರಚನೆಗೊಂಡಿವೆ. ಹಸಿರು ವರ್ಣದ ಧ್ವಜ ಹಿಡಿದ ಸೇವಕ ಮುಂದೆ ಹೊರಟಿದ್ದಾನೆ. ಕುದುರೆಯ ಕಾಲಿನ ಕೆಳಗೆ ಕಪ್ಪು ವರ್ಣದಿಂದ ಹೂಬಳ್ಳಿ ಹಬ್ಬಿಕೊಂಡಿದೆ. ಉತ್ತರ ದಿಕ್ಕನ್ನು ಪ್ರತಿನಿಧಿಸುವ ಈ ಕುಬೇರನ ಚಿತ್ರದಲ್ಲಿ ರೇಖಾಚಿತ್ರ ರಚನೆ ಆಕರ್ಷಕವಾಗಿದೆ.

* **ವರುಣ**

ವರುಣನು ಪತ್ನಿಯೊಂದಿಗೆ ಆನೆಯ ಮೇಲೆ ಹೊರಟಿದ್ದಾನೆ. ಮತ್ತೊಂದು ಮಿತವರ್ಣ ವರುಣನ ಚಿತ್ರಪಟದಲ್ಲಿ ವರುಣ ನಾಯಿಯ ಮೇಲೆ ಕುಳಿತು ಹೊರಟಿರುವ ಚಿತ್ರವಿದ್ದು, ಇವೆರಡು ಚಿತ್ರದಲ್ಲಿ ವರುಣನು ಭಿನ್ನತೆಯಿಂದ ಕಾಣುತ್ತಾನೆ. ಆದರೆ ಆನೆಯ ಮೇಲೆ ಹೊರಟ ವರುಣನು ಅಲಂಕಾರಿಕವಾಗಿದ್ದಾನೆ. ನೀಲಿ, ಹಸಿರು, ಕೆಂಪು, ಹಳದಿ ಹಲವು ವರ್ಣ ವಿನ್ಯಾಸದಿಂದ ಸಂಯೋಜನೆಗೊಂಡಿದೆ. ಈ ವರುಣನ ಚಿತ್ರಪಟ ಪಶ್ಚಿಮ ದಿಕ್ಕು ಪ್ರತಿನಿಧಿಸುತ್ತದೆ.

* **ಶಿವ ಪಾರ್ವತಿ**

ನಾಲ್ಕು ಕೈಗುಳುಳ್ಳ ಶಿವನು ಕೇಸರಿ ಮೈಬಣ್ಣ, ಮುಂದೆ ಹೊರಟಿರುವ ಸೇವಕನು ಕೇಸರಿ

ಮೈಬಣ್ಣ ಹೊಂದಿದ್ದಾನೆ. ನಂದಿಯ ಮೇಲೆ ಕುಳಿತ ಶಿವಪಾರ್ವತಿ ಅಲಂಕಾರಿಕ ಉಡುಪುಗಳನ್ನು ಧರಿಸಿದ್ದಾರೆ. ಹಸಿರು ವರ್ಣದ ವಸ್ತ್ರ ನಂದಿಯ ಚೆಲುವನ್ನು ಸಾಕ್ಷಿಕರಿಸುತ್ತದೆ. ಹಿಂದಿನ ಗೋಪುರ ತೂಗುದೀಪ, ಹೂವಿನ ಗೋನೆ ಅಲಂಕಾರಿಕ ವಿನ್ಯಾಸ ಹೊಂದಿದೆ. ಬಿಳಿವರ್ಣದ ನಂದಿಯ ಮೈಕಟ್ಟು ಬಲಿಷ್ಠ ಮತ್ತು ಅಂದವಾಗಿ ಕಾಣುತ್ತದೆ. ವರ್ಣದ ಜೊತೆಗೆ ರೇಖೆ ಹುಟ್ಟಿಕೊಂಡ ರೀತಿ ಆಕರ್ಷಕವಾಗಿವೆ. ಈ ಚಿತ್ರ ಈಶಾನ್ಯ ದಿಕ್ಕನ್ನು ಸೂಚಿಸುತ್ತದೆ.

*** ಧರಣೇಂದ್ರ**

ಭೂಮಿಯ ಸಾಂಕೇತಿಕ ರೂಪವಾದ ಧರಣೇಂದ್ರನು ಆಮೆಯ ಮೇಲೆ ತನ್ನ ಪತ್ನಿಯನ್ನು ಕೂಡಿಸಿಕೊಂಡು ಹೊರಟಂತಿದೆ. ನೀಲಿ ವರ್ಣದ ಆಮೆ. ನಾಲ್ಕು ಕೈಗಳುಳ್ಳ ಧರಣೇಂದ್ರ, ತಲೆಯ ಕಿರೀಟದ ಹಿಂಭಾಗ ಐದು ಹೆಡೆಯುಳ್ಳ ಹಾವನ್ನು ಚಿತ್ರಿಸಲಾಗಿದೆ. ಹಸಿರು ವರ್ಣ ಈ ಕಲಾಕೃತಿಯಲ್ಲಿ ಎದ್ದು ಕಾಣುತ್ತದೆ. ರೇಖೆಗಳ ಚೆಲುವು ಪ್ರಮುಖವಾಗಿದೆ. ಹಸಿರು, ನೀಲಿ, ಕೆಂಪು, ಹಳದಿ, ಹಲವು ಮಿಶ್ರ ವರ್ಣ ಬಳಕೆಗೊಂಡಿವೆ. ಹಿಂಬದಿಯ ಗೋಪುರ, ವಿನ್ಯಾಸ ವಿವರಿಸಿದ ಎಲ್ಲಾ ಚಿತ್ರಗಳು ವರ್ಣಾಲಂಕಾರವಾದ ಚಿತ್ರಗಳಾಗಿವೆ.

*** ಮಿತ ವರ್ಣಾಲಂಕಾರ ಚಿತ್ರಗಳಲ್ಲಿ ದಶದಿಕ್ಪಾಲಕರ ಚಿತ್ರ**

ಮೇಲೆ ವಿಶ್ಲೇಷಣೆ ಮಾಡಿದ ಒಟ್ಟು ಒಂಬತ್ತು ದಿಕ್ಪಾಲಕರ ಚಿತ್ರಗಳನ್ನು ವಿವರಣೆ ಮಾಡಲಾಗಿದೆ. ಅವುಗಳಂತೆಯೇ ಮಿತವರ್ಣಾಲಂಕಾರದಲ್ಲಿ ರೂಪಗೊಂಡ ೯ ದಿಕ್ಪಾಲಕರ ಚಿತ್ರವಿವರಣೆ ಸಂಕ್ಷಿಪ್ತವಾಗಿ ಸಮೂಹ ಚಿತ್ರಗಳೊಂದಿಗೆ ಈ ಕೆಳಗಿನಂತೆ ಭಿನ್ನತೆ ವಿವರಿಸಲಾಗಿದೆ.

* ವರ್ಣಾಲಂಕಾರಿಕ ಚಿತ್ರದಲ್ಲಿ ದಿಕ್ಪಾಲಕರು ತಮ್ಮ-ತಮ್ಮ ಪತ್ನಿಯರೊಂದಿಗೆ ಹೊರಟರೆ ಈ ಇತಿ-ಮಿತಿ ವರ್ಣಾಲಂಕಾರ ಚಿತ್ರಗಳಲ್ಲಿ ಇಂದ್ರ, ಅಗ್ನಿ, ಯಮ, ನೈರುತ್ಯ, ವಾಯುದೇವ (ಪವನ) ಕುಬೇರ, ವರುಣ, ಈಶ್ವರ, ಧರಣೇಂದ್ರ ಎಲ್ಲಾರು ಪತ್ನಿಯು ಇಲ್ಲದೇ ತಾವೊಬ್ಬೊಬ್ಬರೇ ಹೊರಟಿರುವ ದೃಶ್ಯ ಚಿತ್ರಗಳು ರಚನೆಯಾಗಿವೆ.
* ವರ್ಣಾಲಂಕಾರ ಚಿತ್ರಗಳಲ್ಲಿ ವರ್ಣದ ಬಳಕೆ ಹೆಚ್ಚು ಇದ್ದರೆ ಈ ಚಿತ್ರಗಳಲ್ಲಿ ಮಿತವಾದ ಬಣ್ಣ ಬಳಕೆ ಕಾಣುತ್ತದೆ.
* ಮಿತವರ್ಣಾಲಂಕಾರ ಚಿತ್ರಗಳಲ್ಲಿ ಆಯಾ ದೇವನ ಕೈಗಳಲ್ಲಿ ಅವರದೇಯಾದ ವಸ್ತುಗಳು ಹಿಡಿದುಕೊಂಡು ಹೊರಟಿದ್ದಾರೆ.
* ಮಿತವಾಗಿ ಬಣ್ಣ ಲೇಪನವಾದರೂ ರೇಖೆಗಳ ಬಳಸಿಕೊಳ್ಳುವಿಕೆ ಕಾರ್ಯ ಸೃಜನಾತ್ಮಕವಾಗಿದೆ.
* ವರ್ಣಾಲಂಕಾರ ಚಿತ್ರಗಳಿಗಿಂತ ಭಿನ್ನವಾಗಿ ಕಾಣಿಸಿಕೊಳ್ಳುವುದಕ್ಕೆ ಮಿತ ವರ್ಣಾಲಂಕಾರ ಚಿತ್ರಗಳ

ರಚನಾ ಶೈಲಿ ತನ್ನ ಸ್ವರೂಪವನ್ನು ತಾನೆ ಭಿನ್ನವಾಗಿಸಿಕೊಂಡಿದೆ. ಎಲ್ಲಾ ಚಿತ್ರಗಳು ಜಲವರ್ಣ ಮಾಧ್ಯಮದಿಂದ ರಚನೆಯಾಗಿವೆ.

* **ದಿಕ್ಪಾಲಕರ ಚಿತ್ರಗಳಲ್ಲದೆ ಮತ್ತೆ ಎರಡು ಚಿತ್ರಗಳು ಆಕರ್ಷಕವಾಗಿವೆ.**

**೧. ಪ್ರಾಣದೇವನ ಚಿತ್ರ, ೨. ಸಾಮ್ರಾಟ ರಾಜನ ಚಿತ್ರ** ಈ ಎರಡು ಚಿತ್ರಗಳು ಭಿನ್ನವಾಗಿ ಕಾಣಿಸಿಕೊಂಡು ಹಲವು ಶೈಲಿಗಳ ಪ್ರಭಾವ ಪ್ರೇರಣೆಯಂತೆ ಹೋಲುತ್ತವೆ. ಚಿತ್ರ ರಚನೆಗೊಂಡ ವಿಧಾನ, ವರ್ಣ, ರೇಖೆ, ಅಮೂಲ್ಯವಾದವುಗಳಾಗಿವೆ.

**೫. ಯಾದಗಿರಿ ವೀರಶೈವ ಕಲ್ಯಾಣ ಮಂಟಪದಲ್ಲಿನ ಚಿತ್ರ ಕಲಾಕೃತಿಗಳು**

ಜಿಲ್ಲಾ ಕೇಂದ್ರವಾದ ಯಾದಗಿರಿ ನಗರದಲ್ಲಿ ವೀರಶೈವ ಕಲ್ಯಾಣ ಮಂಟಪವಿದ್ದು, ಇಲ್ಲಿ ಹಲವಾರು ಶರಣರ ಕುರಿತಾದ ಕಲಾಕೃತಿಗಳು ಸಂಗ್ರಹಗೊಂಡಿವೆ. ಜಗಜ್ಯೋತಿ ಬಸವೇಶ್ವರರು. ಶ್ರೀ ಶರಣಬಸವೇಶ್ವರರು, ನಾಲತವಾಡ ವೀರೇಶ್ವರ ಮಹಾಶಿವಶರಣರು, ಮಹಾತ್ಮಾ ಶ್ರೀ ಚರಬಸವೇಶ್ವರರು ಶಹಾಪುರ, ಶ್ರೀ ಶಿವಶರಣೆ ಅಕ್ಕಮಹಾದೇವಿ, ಮಹಾತ್ಮ ಶ್ರೀ ಸದ್ಗುರು ತಿಂಥಣಿ ಮೌನೇಶ್ವರರು, ಹೀಗೆ ಹಲವಾರು ಶಿವಶರಣರ ಕಲಾಕೃತಿಗಳಿವೆ. ದಿವಂಗತ ಎಸ್. ಮುಕುಂದ ಬಳಿಚಕ್ರ, ಎಸ್.ಡಿ. ಪಾಟೀಲ್, ರವಿಶೀಲವಂತ ಹೀಗೆ ಅನೇಕ ಕಲಾವಿದರು ರಚಿಸಿದ್ದಾರೆ. ಎಲ್ಲಾ ಕಲಾಕೃತಿಗಳು ರಾಸಾಯನಿಕ ವರ್ಣಗಾರಿಕೆಯಿಂದ ರೂಪಗೊಂಡಿವೆ. ಇಂತಹ ಕಲಾಕೃತಿಗಳು ಯಾದಗಿರಿ, ಸುರಪುರ, ಶಹಾಪುರ, ಗುರುಮಠಕಲ್, ಯಾನಾಗುಂದಿ, ನಾಲವಾರ ಅಬ್ಬೆತುಮಕೂರು, ಅಂತಹ ಸ್ಥಳಗಳಲ್ಲಿನ ದೇವಾಲಯ ಮತ್ತು ಕಲ್ಯಾಣ ಮಂಟಪಗಳಲ್ಲಿ ದೊರೆಯುತ್ತವೆ.

* **ಸಂಕೀರ್ಣ ಚಿತ್ರಕಲೆಯ ಪ್ರಮುಖ ಲಕ್ಷಣಗಳು**

* ಸುರಪುರ ಪರಿಸರದಲ್ಲಿ ಕಂಡುಬರುವ ಗರುಡಾದ್ರಿ ಮನೆತನದವರು ರಚಿಸಿದ ಹಲವು ಕಲಾಕೃತಿಗಳು ನೋಡಲು ಸಿಕ್ಕರೂ ಅವುಗಳ ಸ್ಥಿತಿ-ಗತಿ ಮಳೆ, ಗಾಳಿಗೆ ಹಾನಿಯಾಗಿ ಕೆಲವು ಕಲಾಕೃತಿಗಳು ತನ್ನ ನೈಜತೆ ಕಳೆದುಕೊಂಡಿವೆ.

* ಯಾದಗಿರಿ, ಸುರಪುರಗಳಲ್ಲಿರುವ ಗಾಜಿನ ಚಿತ್ರಕಲೆಯ ನೆಲೆಗಳನ್ನು ಗಮನಿಸಿದಾಗ ಕಲಾಕೃತಿಗಳ ವಸ್ತು ವಿಷಯ, ಧಾರ್ಮಿಕ ಹಿನ್ನಲೆಯಾಗಿ ರೂಪಗೊಂಡಂತಿವೆ. ಅವುಗಳ ಕಾಲಮಾನ ಸುಮಾರು ೧೮-೧೯ನೇ ಶತಮಾನದವುಗಳಾಗಿವೆ.

* ಮೆಡೋಸ್ ಟೇಲರ್‌ನ ರೇಖಾಚಿತ್ರ ರಚನಾ ಕೌಶಲ್ಯ ಪ್ರಸ್ತುತ ಯುವ ಕಲಾವಿದರಿಗೆ ಮಾರ್ಗ ಸೂಚಿಯಾಗಿವೆ.

* ಡಿ.ಎನ್. ಅಕ್ಕಿಯವರ ಮನೆಯಲ್ಲಿ ಸಂಗ್ರಹಗೊಂಡ ಚಿತ್ರಗಳನ್ನು ನೋಡಿದಾಗ ಜೈನ ಧರ್ಮದ ಪೂಜಾವಿಧಾನವನ್ನು ತಿಳಿಸುತ್ತವೆ. ಸುಮಾರು ೨೦೦ ವರ್ಷಗಳಷ್ಟು ಹಳೆಯದಾದ ಚಿತ್ರಗಳಾಗಿವೆ. ಎಲ್ಲವುಗಳಲ್ಲಿ ರೇಖೆಗಳು ಹೆಚ್ಚು ಸೃಷ್ಟಿಯಾಗಿವೆ. ಕೆಲವು ಸುರಪುರ ಸಂಸ್ಥಾನದ ಗರುಡಾದ್ರಿ ಚಿತ್ರಕಲೆಯ ಸುಳಿವುಗಳು ಕಂಡುಬರುತ್ತವೆ.
* ಯಾದಗಿರಿ ಸುರುಪರ, ಶಹಾಪುರ, ಭಾಗಗಳಲ್ಲಿರುವ ಹಲವು ಮಠಗಳಲ್ಲಿ ಸಂಗ್ರಹಗೊಂಡ ಕಲಾಕೃತಿಗಳು ಧಾರ್ಮಿಕ ಹಿನ್ನಲೆಯ ಕಲಾಕೃತಿಗಳಾಗಿವೆ.
* ಸಂಕೀರ್ಣ ಮಾಧ್ಯಮದ ಚಿತ್ರಗಳು ಹಲವು ವಿಧಾನದಲ್ಲಿ ಅಭಿವ್ಯಕ್ತಿಗೊಂಡರೂ ಸಹ ಅದರ ಮೌಲ್ಯ ಅತ್ಯುತ್ತಮವಾದವುಗಳಾಗಿವೆ.

**ಟಿಪ್ಪಣಿಗಳು**

೧. ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯, ಸುರಪುರ ಚಿತ್ರಕಲೆ ಸರಚಂದ ಪ್ರಕಾಶನ ಚಿತ್ತಾಪುರ

೨. ಅದೇ ಪುಟ ಸಂ. ೯೧

೩. ಅದೇ ಪುಟ ಸಂ. ೧೦೦

೪. ಅದೇ ಪುಟ ಸಂ. ೪೦

೫. ಅದೇ ಪುಟ ಸಂ. ೪೦

೬. ಡಿ.ಎನ್. ಅಕ್ಕಿಯವರ ಮನೆಯಲ್ಲಿನ ದಶದಿಕ್ಪಾಲಕರ ಚಿತ್ರಗಳ ಕುರಿತು ಅಕ್ಕಿಯವರೊಂದಿಗೆ ಸಂದರ್ಶನ ಮಾಡಲಾಯಿತು ಮತ್ತು ಡಾ. ಎಸ್.ಸಿ.ಪಾಟೀಲ ಅವರು ಮೊದಲ ಕ್ಷೇತ್ರಕಾರ್ಯದ ಕಾಳಜಿಯಿಂದ ಅವರೊಂದಿಗೆ ಅಕ್ಕಿಯವರಿಗೆ ಭೇಟಿ ನೀಡಿದಾಗ ಈ ಕಲಾಕೃತಿಗಳು ಬೆಳಕಿಗೆ ಬಂದವು.



ಇಂದ್ರ ದೇವ



ಅಗ್ನಿ ದೇವ



ಯಮ



ನೈರುತ್ಯ



ವರುಣ



ವಾಯುವ್ಯ



ಕುಬೇರ



ಈಶಾನ್ಯ

ಧರಣೇಂದ್ರ





ಮಿಶ್ರವರ್ಣ ಅಲಂಕಾರಿಕ ದಶದಿಕ್ಪಾಲಕರ ಚಿತ್ರಗಳು



ಶ್ರೀ ಮಾಣಿಕ ಪ್ರಭುಗಳು



ಶ್ರೀ ಮಾರ್ತಾಂಡ ಪ್ರಭುಗಳು



ರಾಜ ನಾಲ್ವಡಿ ವೆಂಕಟಪ್ಪ ನಾಯಕ



ಶ್ರೀ ದೀಪಚಂದ್ ಜೈನ್









ಸುರಪುರದ ಶ್ರೀ ವೇಣುಗೋಪಾಲ
ದೇವಾಲಯದಲ್ಲಿನ ಕಾಷ್ಠ ಶಿಲ್ಪಗಳು

ಶ್ರೀ ರಾಮ ಸೀತೆಯರ ದರ್ಶನ



ಶ್ರೀ ರಾಮನ ಪಟ್ಟಾಭಿಷೇಕ



## ಅಧ್ಯಾಯ ೮

# ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ, ಕಲಾಶಿಕ್ಷಣ, ಮತ್ತು ಕಲಾವಿದರು

ನೂತನ ಯಾದಗಿರಿ ಜಿಲ್ಲೆಯಲ್ಲಿ ಚಿತ್ರಕಲಾ ಸಾಹಿತ್ಯ, ಕಲಾಶಿಕ್ಷಣ ಮತ್ತು ಅನೇಕ ಕಲಾವಿದರು ಇರುವುದು ಕಂಡುಬರುತ್ತದೆ. ಸಾತ್ವಿಕ ಕಲೆಯಿಂದ ಆಯಾ ಜಿಲ್ಲೆಗಳು ತಮ್ಮದೇಯಾದ ಕೊಡುಗೆಗಳನ್ನು ನೀಡಿರುತ್ತವೆ. ಅಂತೆಯೇ ಯಾದಗಿರಿ ಜಿಲ್ಲೆಯ ಕಲಾ ಮಹತ್ವವನ್ನು ಈ ರೀತಿಯಲ್ಲಿ ಪಸರಿಸಿಕೊಂಡಿದೆ.



## ಚಿತ್ರಕಲಾ ಸಾಹಿತ್ಯ

ಯಾದಗಿರಿ ಜಿಲ್ಲೆಯಲ್ಲಿ ಚಿತ್ರಕಲಾ ಸಾಹಿತ್ಯದ ಕೃತಿಗಳು ಬಹಳ ಕಡಿಮೆ ಪ್ರಮಾಣದಲ್ಲಿ ಬಂದರೂ ಸಹ ಹತ್ತಾರು ಗ್ರಂಥಗಳು ಹುಟ್ಟಿಕೊಂಡು ತನ್ನ ತಾತ್ವಿಕ ವಿವೇಚನೆಗೆ ಒಳಪಟ್ಟಿವೆ. ಅವುಗಳಲ್ಲಿ ಈ ಕೆಳಗಿನ ಕೃತಿಗಳು.

### ೧. ಸಂಶೋಧನ ಚಿತ್ರಕಲಾ ಸಾಹಿತ್ಯ

### ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ[೧]

ಈ ಗ್ರಂಥವು ೧೯೯೪ರಲ್ಲಿ ಅ.ಸುಂದರ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಬರೆದಿದ್ದಾರೆ. ಈ ಕೃತಿಯಲ್ಲಿ ಕರ್ನಾಟಕದ ಪ್ರಾಗಿತಿಹಾಸ ನೆಲೆಗಳನ್ನು ಕುರಿತು ವಿವರವಾಗಿ ಚರ್ಚಿಸಿದ್ದಾರೆ. ಮತ್ತು ಗುರುತಿಸಿದ್ದಾರೆ. ಪ್ರಾಗಿತಿಹಾಸ ಚಿತ್ರಗಳ ಹುಟ್ಟು ಮತ್ತು ಬೆಳವಣಿಗೆಯ ಚಿತ್ರಗಳ ವಸ್ತು, ವಿಷಯ, ಆಕಾರ, ಶೈಲಿ, ತಂತ್ರ, ವರ್ಣಸಂಯೋಜನೆ, ಸೇರಿದಂತೆ ಎಲ್ಲಾ ರೀತಿಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಅಂತೆಯೇ ಯಾದಗಿರಿ ಜಿಲ್ಲೆಯ ಬಿಳಿಚಕ್ರ ಗ್ರಾಮದ ಪ್ರಾಗಿತಿಹಾಸ ಚಿತ್ರನೆಲೆಯ ಬಗ್ಗೆ ತಮ್ಮದೇಯಾದ ರೀತಿಯಲ್ಲಿ ವಿವರಣೆಯನ್ನು ನೀಡಿದ್ದಾರೆ. ಕರ್ನಾಟಕದಲ್ಲಿ ಲಿಯೋನಾರ್ಡ್ ಮನ್ ಅವರ ನಂತರ ೧೯೪೦ರ ದಶಕದಲ್ಲಿ ಅ.ಸುಂದರ ಅವರ ಸಂಶೋಧನಾ ಕ್ಷೇತ್ರಕಾರ್ಯದಲ್ಲಿ ಈ ಬಳಿಚಕ್ರ ಚಿತ್ರನೆಲೆಯ ಹಾಗೆ ಹಲವು ನೆಲೆಗಳು ಬೆಳಕಿಗೆ ಬಂದವು. ಆ ಸಂದರ್ಭದಲ್ಲಿ ತಾವು ಕಂಡ ರೀತಿಯಲ್ಲಿ ಚಿತ್ರಗಳನ್ನು ವಿವರಿಸಿದ್ದಾರೆ. ಬಳಿಚಕ್ರದ ಚಿತ್ರಗಳನ್ನು ಐದು ಪ್ರಕಾರದಲ್ಲಿ ವಿಶ್ಲೇಷಿಸಿದ್ದಾರೆ. ಪ್ರಾಣಿ, ಪಕ್ಷಿ, ಮಾನವಾಕೃತಿಯ ವರ್ಣ, ರೇಖೆ, ರಚನಾ ವಿಧಾನವನ್ನು ತಿಳಿಸಿದ್ದಾರೆ. ಹಾಗೂ ಚಿತ್ರಗಳ ಮೇಲಿರುವ ಶಾಸನದ ಹೆಸರು ಕಾಲವನ್ನು ಉಲ್ಲೇಖಿಸಿದ್ದಾರೆ. ಅದರಿಂದ ಈ ಪ್ರಾಗಿತಿಹಾಸ ನೆಲೆಯ ವಿವರವನ್ನು ಓದುಗರಿಗೆ ಕಲಾ ಸಂಶೋಧಕರಿಗೆ ಕಲಾವಿದರಿಗೆ ಮಾರ್ಗಸೂಚಿಯಾಗಿದೆ. ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಮಹತ್ವದ ದಾಖಲೆಯಲ್ಲಿ ಅ.ಸುಂದರ ಅವರ ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ ಎಂಬ ಗ್ರಂಥ ಪ್ರಮುಖವಾಗಿದೆ.

ಈ ಕೃತಿಯ ನಂತರ ಕೆ.ವಿ. ಸುಬ್ರಹ್ಮಣ್ಯಂ ಅವರ ಶಿಲಾಶ್ರಯ ಕಲೆಯ ದೃಶ್ಯಧ್ಯಾನ, ಕೃತಿಯಲ್ಲಿ ಬಳಿಚಕ್ರದ ಪ್ರಾಗಿತಿಹಾಸ ಚಿತ್ರಗಳ ಕುರಿತು ಉಲ್ಲೇಖಿಸಿದ್ದಾರೆ. ಅದೇ ರೀತಿ ಇನ್ನೂ ಹಲವು ಸಂಶೋಧನಾ ಗ್ರಂಥಗಳಲ್ಲಿ ಮತ್ತು ಲೇಖನಗಳಲ್ಲಿ ಈ ಚಿತ್ರಗಳ ಕುರಿತು ವಿವೇಚಿಸಿದ್ದಾರೆ.

### ಕರ್ನಾಟಕದ ಜನಪದ ಚಿತ್ರಕಲೆ[೨]

೧೯೯೩ರಲ್ಲಿ ಡಾ. ಎಸ್.ಸಿ.ಪಾಟೀಲರು ಧಾರವಾಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧವಾಗಿದೆ. ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಅಧ್ಯಯನ ಕೈಗೊಂಡ

ಈ ಪ್ರಬಂಧದಲ್ಲಿ ಜನಪದ ಚಿತ್ರಕಲೆಯ ಎಲ್ಲಾ ಅಂಶಗಳನ್ನು ತಾತ್ವಿಕ ಚರ್ಚೆಗೆ ಒಳಪಡಿಸಿದ್ದಾರೆ. ಆಯಾ ಪ್ರಕಾರಗಳನ್ವಯದಡಿ ವಿವರಣಾತ್ಮಕ ವಿಶ್ಲೇಷಣೆ ನೀಡಿದ್ದಾರೆ. ಉತ್ತರ ಕರ್ನಾಟಕ ಭಾಗದ ಜನಪದ ಚಿತ್ರಕಲೆಯ ಮೂಲ ಆಶಯ. ಅಭಿವ್ಯಕ್ತಿ ಕ್ರಮವನ್ನು ತುಂಬಾ ಗಮನಾರ್ಹವಾಗಿ ಚಿಂತನೆಗೆ ಹಚ್ಚಿ, ಹಲವು ಅಧ್ಯಯನಕಾರರ ಬೌದ್ಧಿಕ ಸಾಮರ್ಥ್ಯಕ್ಕೆ ಈ ಕೃತಿ ಮಾದರಿಯಾಗಿದೆ. ಆದಿಮ ಜನಾಂಗದ ಬದುಕಿನ ಸಾಂಸ್ಕೃತಿಕ ಭಿನ್ನತೆ, ಆಂತರಿಕ ಚಿತ್ರ ಸೌಂದರ್ಯ, ಗುಡ್ಡ–ಗಾಡು ಪ್ರದೇಶಗಳಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಚಿತ್ರಕಲೆಯ ಮಹತ್ವವನ್ನು ಈ ಕೃತಿ ಪ್ರತಿಬಿಂಬಿಸುತ್ತದೆ. ಜನಪದರು ಚಿತ್ರರಚಿಸುವ ವಿಧಾನ, ತಂತ್ರಗಾರಿಕೆ ಶೈಲಿ, ವರ್ಣಗಾರಿಕೆ ಕುರಿತಂತೆ, ಧಾರ್ಮಿಕತೆಯ ಸಂದರ್ಭದಲ್ಲಿನ ಚಿತ್ರಗಳ ವಸ್ತುವಿಷಯ, ಹಚ್ಚೆ ಚಿತ್ರಕಲೆ, ಮದರಂಗಿ ಕಲೆ, ರಂಗೋಲಿಕಲೆ, ಅವುಗಳ ವಿವಿಧ ಪ್ರಕಾರಗಳನ್ವಯ ಅಧ್ಯಯನ ಈ ಕೃತಿಯದಾಗಿದೆ. ಅಂತೆಯೇ ಯಾದಗಿರಿ ಜಿಲ್ಲೆಯ ಜನಪದ ಚಿತ್ರಕಲೆಯ ಹಲವು ಪ್ರಕಾರಗಳನ್ನು ಈ ಅಧ್ಯಯನ ಕೈಗೊಂಡಿದೆ. ಲಂಬಾಣಿ ಸಮುದಾಯದ ಹಚ್ಚೆ ಚಿತ್ರಕಲೆ, ಮದರಂಗಿ, ರಂಗೋಲಿ, ಚಿತ್ರಗಳ ಕುರಿತಂತೆ ವಿವರಣದ ಅಧ್ಯಯನ ಮಾಡಿದ್ದಾರೆ. ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯಕ್ಕೆ ಈ ಕೃತಿಯು ಅತ್ಯಂತ ಮೌಲ್ಯಯುತ ಕೃತಿಯಾಗಿದೆ.

**ಸುರಪುರ ಚಿತ್ರಕಲೆ**[೩]

೨೦೦೯ರಲ್ಲಿ ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿಯವರು ಗರುಡಾದ್ರಿಯವರ ಕಲಾ ಪಯಣದ ಹಾದಿಯನ್ನು ವಿವರಿಸುತ್ತದೆ. ಪ್ರತಿಯೊಂದು ಹಂತದಲ್ಲಿ ಸೂಕ್ಷ್ಮಾನೂಸೂಕ್ಷ್ಮ ವಿಷಯಗಳನ್ನು ಶೋಧಿಸಿದ ಗ್ರಂಥವಾಗಿದೆ. ಸುರಪುರದ ಸಾಂಸ್ಕೃತಿಕ, ಐತಿಹಾಸಿಕ, ಸಂಸ್ಥಾನದ ಸಮಗ್ರ ಮಾಹಿತಿಯನ್ನು ನೀಡುವುದಲ್ಲದೆ, ವಾಸ್ತವ ಸತ್ಯತೆಯನ್ನು ಹೇಳುತ್ತದೆ. ರಾಜಾಶ್ರಯ ನೆಲೆಯಲ್ಲಿ ಚಿತ್ರಕಲೆ ಹುಟ್ಟಿಕೊಂಡ ರೀತಿ, ನೀತಿ, ಪ್ರೋತ್ಸಾಹದ ಕುರಿತು ವಿವರಿಸಲಾಗಿದೆ. ಗರುಡಾದ್ರಿ ವಂಶಸ್ಥರ ಮೇಲೆ ರಾಜರ ಪ್ರೋತ್ಸಾಹ, ಕಲೆಯ ಉಗಮ ಮತ್ತು ಪ್ರಗತಿಗೆ ಅವರು ನೀಡುವ ಕೊಡುಗೆಗಳನ್ನು ಸ್ಮರಿಸಿದ್ದಾರೆ. ಭಿತ್ತಿಚಿತ್ರಗಳ ನೆಲೆ. ಪ್ರಸ್ತುತ ಅವುಗಳ ಸ್ಥಿತಿ, ಗತಿ ಮತ್ತು ಕಾರಣ ಮುಂದೆ ಅವುಗಳ ರಕ್ಷಣೆಯ ಕುರಿತಾದ ಅಂಶಗಳನ್ನು ತಿಳಿಸಿದ್ದಾರೆ. ಅರಮನೆ ಮಠದ ಹಿನ್ನೆಲೆ, ಭಿತ್ತಿಯ ಮಹತ್ವ, ರಚನಾ ವಿಧಾನ, ವಸ್ತು ವಿಷಯ, ವೈವಿಧ್ಯತೆ, ಚಿತ್ರಶೈಲಿ ತಂತ್ರಗಾರಿಕೆ, ರೇಖೆ ವರ್ಣಸಂಯೋಜನೆ ಆಕಾರ, ಹೋಲಿಕೆ ಹಲವು ನೆಲೆಗಳಲ್ಲಿ ಭಿತ್ತಿಚಿತ್ರಗಳನ್ನು ವಿವರಿಸಿದ್ದಾರೆ. ಮತ್ತು ಹಸ್ತಪ್ರತಿ ಚಿತ್ರಕಲೆಯ ಕುರಿತು ವೈವಿಧ್ಯಮಯವಾದ ವಿಷಯಗಳನ್ನು ತಿಳಿಸಿ ಚಿತ್ರಗಳನ್ನು ವಿಶ್ಲೇಷಿಸಿದ್ದಾರೆ. ಅಂತೆಯೇ ಸಂಕೀರ್ಣ ಮಾಧ್ಯಮ ಚಿತ್ರಗಳ ಕುರಿತು ಸಮಗ್ರ ಅಧ್ಯಯನ ನಡೆಸಿದ್ದಾರೆ. ಸುರಪುರ ಗರುಡಾದ್ರಿ ಚಿತ್ರಶೈಲಿಯ ಮೇಲೆ ಪ್ರಭಾವ ಪ್ರೇರಣೆ ನೀಡಿದ ಹಲವು ಶೈಲಿಗಳನ್ನು ತಿಳಿಸಿದ್ದಾರೆ. ಮತ್ತು ತೌಲನಿಕವಾಗಿ

ಚರ್ಚಿಸಿದ್ದಾರೆ. ಗರುಡಾದ್ರಿ ವಂಶಸ್ಥರ ಮನೆ, ಸ್ಥಳ, ಊರುಗಳ ಮತ್ತು ಚಿತ್ರಗಳ ಪ್ರಸ್ತುತ ಸ್ಥಿತಿಯನ್ನು ಕಟ್ಟಿಕೊಡುವುದರ ಮೂಲಕ ಶ್ರಮಿಸಿದ್ದಾರೆ. ಕೃತಿಯಲ್ಲಿನ ಅಧ್ಯಯನಗಳನ್ನು ಓದಿಕೊಂಡು ಹೋದಂತೆ ಇಡೀ ಸುರಪುರ ಸಂಸ್ಥಾನದ ಗರುಡಾದ್ರಿ ಕಲೆಯ ಮಹತ್ವವನ್ನು ಪಸರಿಸುತ್ತದೆ. ಅಲ್ಲದೇ ಸುರಪುರ ಚಿತ್ರಕಲೆ ಎಂದು ಬೆಳಕು ಚೆಲ್ಲಲು ಶ್ರಮಿಸಿದ ಖ್ಯಾತ ಕಲಾವಿದ ಡಾ. ವಿಜಯ ಹಾಗರಗುಂಡಗಿ ಅವರ ಸೇವೆಯನ್ನು ಸ್ಮರಿಸಿದ್ದಾರೆ. ಅಂತೆಯೇ ಅವರ ಕಲೆ ಮತ್ತು ಬದುಕಿನ ವಿವರವನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಹಾಗೂ ಈ ಕೃತಿ ಅಷ್ಟೇ ಅಲ್ಲದೇ ಲೇಖಾವರಣ ಚಿತ್ರಲೇಖ, ದೃಶ್ಯ ಸಂಸ್ಕೃತಿ, ಸೇರಿದಂತೆ ಹಲವಾರು ತಮ್ಮ ಪುಸ್ತಕಗಳಲ್ಲಿ ಸುರಪುರ ಚಿತ್ರಕಲೆ ಕುರಿತು ಬರಹಗಳನ್ನು ಬರೆದಿದ್ದಾರೆ. ಮತ್ತು ಪತ್ರಿಕಾ ಲೇಖನಗಳು ಪ್ರಕಟವಾಗಿವೆ. ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯಕ್ಕೆ ಬಾಗೋಡಿಯವರ 'ಸುರಪುರ ಚಿತ್ರಕಲೆ' ಮತ್ತು ಅವರ ಹಲವು ಕೃತಿಗಳು ಮೌಲಿಕವಾದವುಗಳು, ಕರ್ನಾಟಕದ ಅನೇಕ ಕಲಾವಿದ್ಯಾರ್ಥಿಗಳಿಗೆ ಸಂಶೋಧಕರಿಗೆ ಸುರಪುರ ಚಿತ್ರಕಲೆ ಗ್ರಂಥ ಆಕರ ಗ್ರಂಥವಾಗಿದೆ.

**ಚಿತ್ರಕಲಾವಿದ ಸಂಗಣ್ಣ ಎಂ. ದೋರನಹಳ್ಳಿ**

ಈ ಗ್ರಂಥವು ೨೦೧೩, ದೋರನಹಳ್ಳಿಯ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ದೋರನಹಳ್ಳಿ ಗ್ರಾಮದಲ್ಲಿ ಅಜ್ಞಾತವಾಗಿ ಉಳಿದಿರುವ ಕಲಾವಿದ ಸಂಗಣ್ಣನವರ ಕಲೆ ಮತ್ತು ಬದುಕನ್ನು ಕಲಾ ಪ್ರಪಂಚಕ್ಕೆ ಪರಿಚಯಿಸುವ ಕೆಲಸ ಈ ಕೃತಿಯದಾಗಿದೆ. ಏಳು ಅಧ್ಯಾಯಗಳನ್ನು ಹೊಂದಿದ ಈ ಕೃತಿ ಪ್ರತಿಯೊಂದು ಹಂತದಲ್ಲಿ ಕಲಾವಿದನ ವ್ಯಕ್ತಿತ್ವ, ಕಲೆ, ಊರಿನ, ಜಿಲ್ಲೆಯ, ಮಹತ್ವವನ್ನು ತಿಳಿಸಲಾಗಿದೆ. ಕಲಾವಿದ ಸಂಗಣ್ಣನವರ ಬಾಲ್ಯ ಜೀವನ, ಕಲಾಪರಂಪರೆ ಮನೆಯ ಪರಸ್ಥಿತಿ. ಅವರ ಆಲೋಚನೆ, ವೃತ್ತಿ ಬದುಕು, ಸಾಧನೆ, ಹೀಗೆ ಹಲವು ರೀತಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಸಂಗಣ್ಣನವರು ರಚಿಸಿದ ರೇಖಾಚಿತ್ರಗಳು, ವರ್ಣಬಳಕೆ ವಿಧಾನ. ಶರಣರ ಜೀವನಾಧಾರಿತ ಕಲಾಕೃತಿಗಳು. ರಂಗೋಲಿ ಚಿತ್ರಗಳು, ವ್ಯಂಗ್ಯಚಿತ್ರಗಳು, ಲೋಗೋಗಳು ಪುಸ್ತಕಗಳ ಮುಖಪುಟ ಕಲೆ, ಹಾಗೂ ಕಥೆ, ಕಾದಂಬರಿ, ಕವನ ಸಂಕಲನ ಸೇರಿದಂತೆ ಹಲವು ಪುಸ್ತಕದೊಳಗೆ ರಚಿಸಿದ ರೇಖಾಚಿತ್ರಗಳ ಮಹತ್ವದ ದಾಖಲೆಯನ್ನು ಪಟ್ಟಿ ಮಾಡಿ ಚರ್ಚಿಸಲಾಗಿದೆ. ಶರಣರ ಕುರಿತಾದ ಕಲಾಕೃತಿಗಳ ವಿಶ್ಲೇಷಣೆ, ಕಲಾಕೃತಿ ರಚಿಸುವ ವಿಧಾನ, ತಂತ್ರ ಶೈಲಿ, ಗಾತ್ರ ಅವುಗಳ ಲಕ್ಷಣಗಳು, ವೈವಿಧ್ಯತೆ ಬಣ್ಣಗಳ ಮಹತ್ವ, ಲೇಪಿಸುವ ಕ್ರಮ, ರೇಖೆ ಎಳೆಯುವ ತಂತ್ರಗಾರಿಕೆ ಹೀಗೆ ಅನೇಕ ನೆಲೆಗಳಲ್ಲಿ ಅವರ ಕಲಾ ಬದುಕನ್ನು ಕಟ್ಟಿಕೊಡಲಾಗಿದೆ. ಮಲಗೊಂಡ ಮನೆತನದ ವಿವರ ಸಾಧನೆ ಕಾಯಕದ ಪರಿಶೀಲನೆ, ವ್ಯಕ್ತಿತ್ವ ವಿಕಾಸ ಕ್ರಿಯೆ, ಸಂಗಣ್ಣನವರ ಕಲಾ ಸಾಧನೆಗೆ ಸಂದ ಪ್ರಶಸ್ತಿ ಪುರಸ್ಕಾರಗಳು, ಪತ್ರಿಕಾ ಲೇಖನಗಳು ಹೀಗೆ ಇಡೀ ಅವರ ಕಲೆಯ ಮತ್ತು ಜೀವನದ ಸಾಧನೆಯನ್ನು ಸಮಗ್ರವಾಗಿ ತಿಳಿಸುವ ಗ್ರಂಥ ಇದಾಗಿದೆ.

## ೨. ಸಂಶೋಧನೇತರ ಚಿತ್ರಕಲಾ ಸಾಹಿತ್ಯ

### ದಖನಿ ಚಿತ್ರಕಲೆ[೫]

೨೦೦೧ರಲ್ಲಿ ಎಸ್.ಕೆ. ಅರುಣಿ ಅವರು ಈ ಕೃತಿಯಲ್ಲಿ ಸುರಪುರ ಸಂಸ್ಥಾನದ ಚಿತ್ರಕಲೆಯ ಕುರಿತು ಬರೆದಿದ್ದಾರೆ. ಬಹಮನಿ ನಿಜಾಮ್, ಬಿಜಾಪುರ, ಗೋಲ್ಕೊಂಡಾ, ದಖನಿ, ಮರಾಠ, ಹೈದ್ರಾಬಾದ್ ನಿಜಾಮ್, ಗಡವಾಲ ಮತ್ತು ವನಪರ್ತಿ, ಕಂಪನಿ ಕಲಾಶೈಲಿ ಹೀಗೆ ಹಲವು ಶೈಲಿಗಳೊಂದಿಗೆ ಸುರಪುರ ಚಿತ್ರಕಲೆಯ ಮಹತ್ವವನ್ನು ತಿಳಿಸಿದ್ದಾರೆ. ಸುರಪುರ ಸಂಸ್ಥಾನದ ರಾಜಕೀಯ ಇತಿಹಾಸ. ಗರುಡಾದ್ರಿ ಮನೆತನದವರಿಗೆ ಆಶ್ರಯ ನೀಡಿದ ವಿವರ. ಅವರ ಕಲೆ, ವಸ್ತು, ವಿಷಯ, ವಿನ್ಯಾಸ ಕುರಿತಂತೆ ಹಲವಾರು ವಿಧಗಳಿಂದ ವಿವರಣೆ ನೀಡಿದ್ದಾರೆ. ಮತ್ತು ಚಿತ್ರಗಳ ಲಕ್ಷಣಗಳನ್ನು ತಿಳಿಹೇಳಿದ್ದಾರೆ. ಹಲವು ಶೈಲಿಗಳ ಮಹತ್ವದಂತೆ ಸುರಪುರ ಚಿತ್ರಕಲಾ ಶೈಲಿಯನ್ನು ಗುರುತಿಸಿದ್ದಾರೆ.

### ಸಗರಾದ್ರಿ[೬]

ಶಹಾಪುರ ತಾಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಟವಾದ ಸ್ಮರಣ ಸಂಚಿಕೆಯೇ 'ಸಗರಾದ್ರಿ' ಕೃತಿ, ಈ ಸಂಚಿಕೆಯಲ್ಲಿ ಶಹಾಪುರ ತಾಲೂಕಿನ ಅತ್ಯಂತ ಮಹತ್ವದ ಕ್ಷೇತ್ರಗಳನ್ನು ವಿವರಿಸಿದಂತೆ ಲೇಖಕ ಬಸವರಾಜ ಕಲೆಗಾರ ಅವರು ಶಹಾಪುರ ತಾಲೂಕಿನ ದೃಶ್ಯಕಲಾ ಪರಂಪರೆ ಎಂಬ ಲೇಖನದಲ್ಲಿ ದೃಶ್ಯಕಲೆಯ ವಿವಿಧ ಅಭಿವ್ಯಕ್ತಿ ಕ್ರಮವನ್ನು ವಿವರಿಸಿದ್ದಾರೆ. ಚಿತ್ರಕಲೆಯ ವಿವಿಧ ನೆಲೆ ಕ್ರಮ, ವಿಧಾನ, ಮತ್ತು ಕಲಾವಿದರ ಸಂಕ್ಷಿಪ್ತ ಪರಿಚಯವನ್ನು ಮಾಡಲಾಗಿದೆ. ಈಗಾಗಲೇ ವಿವರಿಸಿದ ಪುಸ್ತಕಗಳಲ್ಲದೇ ಯಾದಗಿರಿ ಜಿಲ್ಲೆ ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವಾರು ಪತ್ರಿಕೆಗಳಲ್ಲಿ ಲೇಖನಗಳು ನಿರಂತರವಾಗಿ ಪ್ರಕಟವಾಗಿವೆ. ಬೆರಳೆಣಿಕೆಯಷ್ಟು ಗ್ರಂಥಗಳು ಪ್ರಕಟಗೊಂಡರೂ ಸಹ ಪ್ರಸ್ತುತ ದಿನಗಳಲ್ಲಿ ಚಿತ್ರಕಲಾ ಸಾಹಿತ್ಯ ಪ್ರಬಲವಾಗಿ ಬೆಳೆಯುತ್ತಿದೆ ಎಂಬುದು ಹಲವು ಕೃತಿಗಳಲ್ಲಿ ಕಂಡುಬರುತ್ತದೆ.

### ಬಾನಯ್ಯ ಗರುಡಾದ್ರಿ[೭]

೧೯೯೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾದ ಈ ಕೃತಿ. ಗುಲಬರ್ಗಾದ ಬಸವರಾಜ ಉಪ್ಪಿನ್ ಅವರು ಬರೆದಿದ್ದಾರೆ. ಸುರಪುರ ಸಂಸ್ಥಾನಿಕರ ಸೇವೆಯಲ್ಲಿ ತೊಡಗಿದ ಗರುಡಾದ್ರಿ ಮನೆತನದ ಹಿನ್ನೆಲೆ ಮತ್ತು ಅವರ ಕಲೆಯ ಕುರಿತು ಚರ್ಚಿಸಿದ್ದಾರೆ. ಬಾನಯ್ಯ ಗರುಡಾದ್ರಿಯ ಮನೆತನದ ಚಿತ್ರಗಳ ವಸ್ತು, ವಿಷಯ, ಆಕಾರ, ಶೈಲಿ, ಗಾತ್ರ, ಹಲವು ಶೈಲಿಗಳ ಪ್ರಭಾವ ಪ್ರೇರಣೆ ಕುರಿತಂತೆ ಸಂಕ್ಷೀಪ್ತವಾಗಿ ಚರ್ಚಿಸಿದ್ದಾರೆ.

**ಎಂ.ಟಿ. ಭೋಪಲೆ**[೮]

೧೯೯೯ರಲ್ಲಿ ಡಿ.ಎನ್. ಅಕ್ಕಿಯವರು ಬರೆದಿರುವ ಈ ಕಿರುಗ್ರಂಥ, ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಕಟಿಸಿದೆ. ಶಹಾಪುರ ತಾಲೂಕಿನ ಸಗರ ಗ್ರಾಮದ ಕಲಾವಿದ ಎಂ.ಟಿ. ಭೋಪಲೆ ಅವರ ಕಲೆ ಮತ್ತು ಸಾಧನೆಯ ಜೀವನ ಕುರಿತಾದ ಈ ಕೃತಿ. ಮಾರ್ತಂಡರಾವ್ ತಿಪ್ಪಣ್ಣ, ಭೋಪಲೆ (ಎಂ.ಟಿ. ಭೋಪಲೆ) ಅವರ ಬಾಲ್ಯ ಜೀವನ, ಶಿಕ್ಷಣ, ಕಲಾಕಲಿಕೆಯ ವಿಧಾನ, ಮನೆತನದ ಸಾತ್ವಿಕ ಕಾಯಕ, ನೋವು-ನಲಿವಿನ ಕ್ಷಣಗಳನ್ನು ಸಂಕ್ಷೇಪ್ತವಾಗಿ ಮನಮುಚ್ಚುವಂತೆ ಕಟ್ಟಿಕೊಟ್ಟಿದ್ದಾರೆ. ಅಲ್ಲದೇ ಅವರ ಕಲಾಕೃತಿಗಳ ವಸ್ತು ವಿಷಯ, ಶೈಲಿ, ಆಕಾರ, ರೇಖೆ, ವರ್ಣ, ವಿನ್ಯಾಸಗಳ ಕುರಿತು ಚರ್ಚಿಸಿದ್ದಾರೆ. ಪೆನ್ಸಿಲ್, ಪೌಡರ್ ಮಾಧ್ಯಮದಿಂದ ಬಿಡಿಸಿದ ಚಿತ್ರಗಳ ಕುರಿತು ಹೇಳಿದ್ದಾರೆ. ಬದುಕಿನುದ್ದಕ್ಕೂ ಕಲೆಯಲ್ಲಿ ಚಿಂತನೆ ಮಾಡಿದ ಎಂ.ಟಿ, ಭೋಪಲೆಯವರ ಸಾತ್ವಿಕ ಸಾಧನೆಯನ್ನ ತಿಳಿಹೇಳುವ ಈ ಕೃತಿ, ಹಲವಾರು ಕಲಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶಿ.

**ಮಹಾದೇವ ಬಾಬಾ ಮೆಡೋಸ್ ಟೇಲರ್**[೯]

೨೦೦೯ರಲ್ಲಿ ಪ್ರಕಟವಾದ ಈ ಕೃತಿ, ದೇವು ಪತ್ತಾರ ಅವರ ಸಂಪಾದನೆ ಗ್ರಂಥವಾಗಿದೆ. ಈ ಗ್ರಂಥದಲ್ಲಿ ಮೆಡೋಸ್ ಟೇಲರನ ಬಹುಮುಖ ಪ್ರತಿಭಾನ್ವೇಷಣೆಯ ಕಾರ್ಯಗಳನ್ನು ಬಿಂಬಿಸಲಾಗಿದೆ. ಸಂಶೋಧಕನ ಪ್ರಬಂಧಕಾರ, ಕಾದಂಬರಿಕಾರ, ವಿಚಾರವಂತ, ಚಿತ್ರಕಲಾವಿದ, ಹೀಗೆ ಹಲವು ಬಗೆಯಲ್ಲಿ ಮೇಡೋಸ್ ಟೇಲರನನ್ನು ವಿವರಿಸುವ ರೀತಿಯಲ್ಲಿ ಬರೆಹಗಳ ಸಂಕಲನವಾಗಿದೆ. ಅಲ್ಲದೇ ಅವನು ಬಿಡಿಸಿದ ರೇಖಾಚಿತ್ರಗಳು, ವರ್ಣಚಿತ್ರಗಳು ವಸ್ತು, ವಿಷಯ, ಶೈಲಿಗಳ ಕುರಿತು ಬರಹವೊಂದು ಅವನ ಕಲೆಯ ಮಹತ್ವವನ್ನು ತಿಳಿಸುತ್ತದೆ. ಬದುಕಿನ ಏಳು-ಬೀಳುಗಳ ಮಧ್ಯೆ ಕಲೆಯ ಆಸಕ್ತಿಯನ್ನು ತಿಳಿಯಲು ಟೇಲರ್ ರಚಿಸಿದ ಹಲವಾರು ಕಲಾಕೃತಿಯೊಂದಿಗೆ ಈ ಪುಸ್ತಕ ಪ್ರಕಟಗೊಂಡಿದೆ. ಕಲಾಕೃತಿಯನ್ನು ನೋಡಿ ತಿಳಿಯುವವನಿಗೆ ಅನೇಕ ಮೌಲಿಕವಾದ ಒಳಸುಳಿವುಗಳು ಲಭ್ಯ, ಯಾದಗಿರಿ ಜಿಲ್ಲಾ ಚಿತ್ರಕಲಾ ಸಾಹಿತ್ಯ ದೃಷ್ಟಿಯಿಂದ ಟೇಲರನ ಕಲಾಕೃತಿಗಳ ವಿವರಣೆ ಹೊಂದಿದ ಈ ಕೃತಿಯು ಪ್ರಮುಖವಾದದ್ದು.

**ಯಾದಗಿರಿ ಸಿರಿ**[೧೦]

೨೦೧೧ರಲ್ಲಿ ಪ್ರಕಟವಾದ ಈ ಕೃತಿಯನ್ನು ಬಸನಗೌಡ ಎಸ್. ಹುಣಸಗಿ, ಅವರು ಬರೆದಿದ್ದಾರೆ. ಈ ಪುಸ್ತಕ ಚಿತ್ರಕಲೆಗೆ ಸಂಬಂಧಿಸಿದಂತೆ ಈ ಗ್ರಂಥದಲ್ಲಿ ಕಾಕಲವಾರ ದೇಶಮುಖ ಸಂಸ್ಥಾನದ ಪರಿಚಯ, ಹಾಗೂ ಅರಮನೆಯಲ್ಲಿನ ಭಿತ್ತಿಚಿತ್ರ ಮತ್ತು ಕಟ್ಟಿಗೆಯ ಮೇಲಿನ ಚಿತ್ರ ಸೌಂದರ್ಯದ ಕುರಿತು ಚಿಕ್ಕ ಪರಿಚಯ ಮಾಡಿದ್ದು ಕಂಡುಬರುತ್ತದೆ. ಚಿತ್ರಕಲೆಯ ಉಲ್ಲೇಖವನ್ನು ಹೊಂದಿದ ಈ ಕೃತಿಯು ಮರೆಯುವಂತಿಲ್ಲ.

**ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ**[೧೧]

ಈ ಕೃತಿಯು ೨೦೧೨ರಲ್ಲಿ ಡಾ. ಶೈಲಜಾ ಎನ್. ಬಾಗೇವಾಡಿ, ಅವರ ಸಂಪಾದನೆ ಗ್ರಂಥವಾಗಿದೆ. ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಚೌಕಟ್ಟನ್ನು ಹೊಂದಿದ ಈ ಕೃತಿಯಲ್ಲಿ ಸುರಪುರದ ಗರುಡಾದ್ರಿ ಚಿತ್ರಕಲೆ ಹಾಗೂ ಯಾದಗಿರಿ ಜಿಲ್ಲೆಯ ಚಿತ್ರಕಲೆ ಎಲ್ಲ ಅಂಶಗಳ ಕುರಿತು ವಿವರವನ್ನು ನೀಡುತ್ತದೆ. ಚಿತ್ರಕಲೆಯ ಬರೆಹಗಳನ್ನು ಪ್ರತಿಬಿಂಬಿಸುವ ಈ ಕೃತಿ ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಹಲವು ಕುರುಹುಗಳನ್ನು ಮನಮುಟ್ಟುವಂತೆ ಮಾಡುತ್ತದೆ. ಮತ್ತು ಅಧ್ಯಯನ ಶೀಲತೆಗೆ ಹಚ್ಚುತ್ತದೆ. ಚಿತ್ರಕಲಾ ಸಾಹಿತ್ಯ ಪ್ರಕಾರದ ಕೃತಿಗಳಿಗೆ ಈ ಕೃತಿಯು ಒಂದೆರಡು ಲೇಖನಗಳಿಂದ ಸಮನ್ವಯವಾಗುವ ರೀತಿಯಲ್ಲಿದೆ.

**ಧವಳ**[೧೨]

ಈ ಗ್ರಂಥವು ೨೦೧೧ರಲ್ಲಿ ಪ್ರಕಟವಾದದ್ದು, ಡಿ.ಎನ್. ಅಕ್ಕಿಯವರ ಅಭಿನಂದನಾ ಗ್ರಂಥವಾಗಿದೆ. ಡಾ. ಅಬ್ದುಲ್ ಕರೀಮ್, ಡಾ. ಎಸ್.ಕೆ. ಅರುಣಿ, ಅವರ ಸಂಪಾದನೆಯಲ್ಲಿ ಸಿದ್ಧವಾದ ಅಭಿನಂದನಾ ಗ್ರಂಥವಾಗಿದೆ. ಚಿತ್ರಕಲಾ ಶಿಕ್ಷಕನಾಗಿ ಸೇವೆ ಸಲ್ಲಿಸಿದ ಡಿ.ಎನ್. ಅಕ್ಕಿಯವರು ಸಂಶೋಧನ ಕ್ಷೇತ್ರದಲ್ಲಿ ಹೆಚ್ಚು ದುಡಿದವರು ಆದರೂ ಚಿತ್ರಕಲಾ ಕ್ಷೇತ್ರವನ್ನು ಮರೆಯದೇ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಬದುಕಿನುದ್ದಕ್ಕೂ ವಿವಿಧ ಆಯಾಮಗಳಲ್ಲಿ ಶ್ರಮಿಸಿದ ಡಿ.ಎನ್. ಅಕ್ಕಿ ಅವರ ಬದುಕಿನ ಹಲವಾರು ವಿದ್ವತ್‌ವುಳ್ಳ ಮತ್ತು ಪ್ರಜ್ಞಾವಂತರ ಬರವಣಿಗೆಯಿಂದ ಅಕ್ಕಿ ಅವರಿಗೆ ಅಭಿನಂದನೆ ಸಲ್ಲಿಸಿದ್ದಾರೆ. ಈ ಗ್ರಂಥದಲ್ಲಿ ಅಕ್ಕಿಯವರು ರಚಿಸಿದ ಕಲಾಕೃತಿಗಳು ಮುದ್ರಣಗೊಂಡಿವೆ. ವ್ಯಂಗ್ಯಚಿತ್ರ ಸೇರಿದಂತೆ ಹಲವು ಕಲಾಕೃತಿಗಳ ಕುರಿತು ಹಲವು ಲೇಖನಗಳಿವೆ. ಕಲೆ, ಸಾಹಿತ್ಯ, ಸಂಶೋಧನೆ, ನಾಟಕ ಹೀಗೆ ಅನ್ಯ ಕ್ಷೇತ್ರಗಳಲ್ಲಿ ದುಡಿದ ಅಕ್ಕಿಯವರಿಗೆ ಹಲವಾರು ಪ್ರಶಸ್ತಿ ಪುರಸ್ಕಾರ ಲಭಿಸಿದ್ದು ಕಂಡುಬರುತ್ತದೆ. ಬದುಕಿನ ನಡಿಗೆಯಂತೆಯೇ ಲೇಖನಗಳು ಈ ಗ್ರಂಥದಲ್ಲಿ ಪ್ರಕಟವಾಗಿರುವುದು ಹಲವಾರು ನೆಲೆಗಳ ಅಧ್ಯಯನಕಾರರಿಗೆ ಆಕರ ಗ್ರಂಥವಾಗಿದೆ. ಚಿತ್ರಕಲಾ ಸಾಹಿತ್ಯ ಪ್ರಕಾರದಲ್ಲಿ ಅಕ್ಕಿ ಅವರ ಧವಳ, ಅಭಿನಂದನಾ ಗ್ರಂಥ ಮಹತ್ವದ ದಾಖಲೆ ಕೃತಿ.

**ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ**[೧೩]

೨೦೦೦ನೇ ಸಾಲಿನಲ್ಲಿ ಕೃತಿಯನ್ನು ಕೆ.ವಿ. ಕಾಳೆ ಅವರು ಬರೆದಿದ್ದಾರೆ. ಈ ಗ್ರಂಥದಲ್ಲಿ ಸುರಪುರ ಕಲಾಕೃತಿಗಳಲ್ಲಿ ಬಣ್ಣ ಎಂಬ ಲೇಖನದಲ್ಲಿ ಸುರಪುರದ ರಾಜರ ಇತಿಹಾಸ ಪರಿಚಯ ಮತ್ತು ಗರುಡಾದ್ರಿ ಕಲಾಕೃತಿಗಳಲ್ಲಿ ಬಣ್ಣದ ಬಳಕೆ ಕುರಿತು ಸಂಕ್ಷಿಪ್ತವಾಗಿ ವಿವರಣೆಯಿದೆ. ಹಾಗೂ ಒಂದೆರಡು ವರ್ಣಸಂಯೋಜನೆಯ ಸುರಪುರ ಭಿತ್ತಿ ಚಿತ್ರಗಳನ್ನು ಪ್ರಕಟಿಸಿದೆ.

## ೩. ಅಪ್ರಕಟಿತ ಚಿತ್ರಕಲಾ ಸಾಹಿತ್ಯ

### ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಒಂದು ಅಧ್ಯಯನ[೧೪]

೨೦೦೧ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಡಾ. ಯಾದಪ್ಪ ಪರದೇಶಿಯವರು ಸಲ್ಲಿಸಿದ ಪ್ರಬಂಧವಾಗಿದೆ. (ಅಪ್ರಕಟಿತ) ಇದರಲ್ಲಿ ಸುರಪುರದ ಭಿತ್ತಿಚಿತ್ರಗಳ ಕುರಿತು ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ. ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಪ್ರಬಂಧವು ಆಕರ ಗ್ರಂಥವಾಗುವುದು.

### ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ[೧೫]

೨೦೦೫ರಲ್ಲಿ ಎಚ್.ಎನ್. ಚಿತ್ರಗಾರ ಅವರು ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ಕನ್ನನ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಪ್ರಬಂಧವಾಗಿದೆ. ಒಟ್ಟು ಒಂಭತ್ತು ಅಧ್ಯಾಯಗಳನ್ನೊಳಗೊಂಡ ಪ್ರಬಂಧದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆಯನ್ನು ವಿವರಿಸುವುದರ ಮೂಲಕ ಹಸ್ತಪ್ರತಿ ಚಿತ್ರಕಲೆಯ ಐತಿಹಾಸಿಕ ನೆಲೆ ಹಿನ್ನೆಲೆ, ಸಿದ್ಧತಾ ವಿಧಾನ, ವಸ್ತುವಿಷಯ, ಹಸ್ತಪ್ರತಿ ಚಿತ್ರರಚನೆಯ ಕಲಾವಿದರು, ಹಸ್ತಪ್ರತಿ ಚಿತ್ರಕಲೆಯ ಸೌಂದರ್ಯ ಸಮೀಕ್ಷೆ ಮತ್ತು ಅದರ ಆಪತ್ತು, ಸಂರಕ್ಷಣೆಯ ವೈಜ್ಞಾನಿಕ ಕ್ರಮಗಳು ಹೀಗೆ ಹಲವು ಬಗೆಯಲ್ಲಿ ಹಸ್ತಪ್ರತಿ ಚಿತ್ರಕಲೆಯ ಕುರಿತಾದ ಅಧ್ಯಯನವಾಗಿದೆ. ಧಾರ್ಮಿಕ ಪ್ರಧಾನ, ಪೌರಾಣಿಕ, ಪುರಾಣ, ಕಥೆಯಾಧಾರಿತ, ಹಸ್ತಪ್ರತಿಗಳಲ್ಲಿನ ಚಿತ್ರಕಲೆಯ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಹಸ್ತಪ್ರತಿಗಳಲ್ಲಿನ ರೇಖಾಚಿತ್ರಕಲೆ, ವರ್ಣ ಲೇಪನ ವಿಧಾನ, ತಂತ್ರಗಾರಿಕೆ, ಅವುಗಳ ಶೈಲಿ ಕುರಿತಂತೆ ವಿವರಣೆ ನೀಡಲಾಗಿದೆ.

ಉತ್ತರ ಕರ್ನಾಟಕ ಪ್ರಾದೇಶಿಕ ವಲಯವನ್ನು ಸಮೀಕ್ಷಿಸುವ ಅಧ್ಯಯನವಾಗಿರುವುದರಿಂದ ಯಾದಗಿರಿ ಜಿಲ್ಲೆಯ ಹಸ್ತಪ್ರತಿ ಚಿತ್ರಕಲೆಯ ಪ್ರಮುಖ ಅಂಶಗಳನ್ನು ಒಳಗೊಂಡು ಅಧ್ಯಯನ ನಡೆಸಿದ್ದಾರೆ. ಸುರಪುರ ರಾಜರ ಅಷ್ಟ ದಿಗ್ಬಂಧನ ಕೃತಿ. ಲಕ್ಷ್ಮೀಶನ ಜೈಮಿನಿ ಭಾರತ, ವಿರೂಪಾಕ್ಷ ಪಂಡಿತ ವಿರಚಿತ ಚೆನ್ನಬಸವ ಪುರಾಣ, ಸುರಪುರ ಪಂಚಾಂಗ, ಹಸ್ತಪ್ರತಿ ಚಿತ್ರಗಳ ವಿವರಣೆಯನ್ನು ಮಾಡಲಾಗಿದೆ. ಕರ್ನಾಟಕದ ಹಸ್ತಪ್ರತಿ ಚಿತ್ರಕಲೆಯ ಲಕ್ಷಣಗಳಂತೆ ಯಾದಗಿರಿ ಜಿಲ್ಲೆಯ ಹಸ್ತಪ್ರತಿ ಚಿತ್ರಕಲೆಯ ಆಶಯವನ್ನು ಈ ಅಧ್ಯಯನದಲ್ಲಿ ಪ್ರತಿಬಿಂಬಿಸಿದ್ದಾರೆ.

### ಹೈದ್ರಾಬಾದ್ ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ[೧೬]

೨೦೧೦ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಈ ಸಂಶೋಧನ ಪ್ರಬಂಧವನ್ನು ಸಂಶೋಧನೆ ಕಾಮಾಕ್ಷಿ ಸಿ. ಸೊಪ್ಪಣ, ಆಮು, ಡಾ. ಎಸ್.ಸಿ. ಪಾಟೀಲ ಮಾರ್ಗದರ್ಶನದಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಬಟ್ಟೆ ಮೇಲೆ ವಿನ್ಯಾಸಗೊಳ್ಳುವ ಚಿತ್ರಕಲೆಯ ವಿಧಾನ ಕುರಿತಂತೆ

ಅಧ್ಯಯನ ಕೈಗೊಂಡಿದ್ದಾರೆ. ಬಟ್ಟೆಯ ಮೇಲೆ ಚಿತ್ರರಚಿಸುವ ತಂತ್ರ, ಶೈಲಿ, ಆಕಾರ ಎಲ್ಲಾ ಪ್ರಕಾರಗಳನ್ನು ವಿವಿಧ ನೆಲೆಗಳಿಂದ ಅಧ್ಯಯನ ಕೈಗೊಂಡಿದ್ದಾರೆ. ಅಂತೆಯೇ ಯಾದಗಿರಿ ಜಿಲ್ಲೆಯ ಬಟ್ಟೆ ನೇಯ್ಗೆ ಪ್ರಕಾರವನ್ನು ಚಿತ್ರ ವಿನ್ಯಾಸ ಶೈಲಿಯು ಕುರಿತಂತೆ ಈ ಅಧ್ಯಯನ ಸಮನ್ವಯಗೊಂಡಂತಿದೆ. ಚಿತ್ರರಚನೆಯ ಕ್ರಮ, ಶಿಸ್ತು, ಹಲವು ಚರ್ಚೆಗೆ ಒಳಪಡಿಸಿದಂತಿದೆ.

**ಹೈದ್ರಾಬಾದ್ ಕರ್ನಾಟಕದ ರಂಗೋಲಿ ಕಲೆಯ ಸಾಂಸ್ಕೃತಿಕ ಅಧ್ಯಯನ**[೧೭]

೨೦೦೫ರಲ್ಲಿ ವಿಶ್ವೇಶ್ವರಿ ತಿವಾರಿಯವರು ಡಾ. ಪಿ.ಕೆ. ಖಂಡೋಬಾ ಮತ್ತು ಡಾ. ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನ ಪ್ರಬಂಧವಾಗಿದೆ. ರಂಗೋಲಿ ಚಿತ್ರಕಲೆಯ ಸಾಂಸ್ಕೃತಿಕ ಚೌಕಟ್ಟನ್ನು ಕಟ್ಟಿಕೊಟ್ಟಿದ್ದಾರೆ. ರಂಗೋಲಿ ಚಿತ್ರಕಲೆಯು ಐತಿಹಾಸಿಕವಾಗಿ, ಸಾಹಿತ್ಯಿಕವಾಗಿ ಸಾಂದರ್ಭಿಕ ಸನ್ನಿವೇಶಕ್ಕನುಗುಣವಾಗಿ ರಂಗೋಲಿ ಚಿತ್ರದ ಪಾತ್ರ ಮತ್ತು ಅದರ ಮಹತ್ವವನ್ನು ತಿಳಿಸಿದ್ದಾರೆ. ಪ್ರಾಚೀನ ರಂಗೋಲಿ, ಆಧುನಿಕ ರಂಗೋಲಿ, ಹಬ್ಬಹರಿದಿನ, ಹುಣ್ಣಿಮೆ, ಅಮವಾಸೆ, ಜಾತ್ರೆಯ ನಿಮಿತ್ಯ ಹೀಗೆ ಹಲವು ಬಗೆಗಳಲ್ಲಿ ಸೃಷ್ಟಿಗೊಳ್ಳುವ ರಂಗೋಲಿ ಚಿತ್ರಗಳ ಅಧ್ಯಯನ ಇದಾಗಿದೆ. ಶೇಡಿಯ ರಂಗೋಲಿ, ಜಾತ್ರೆಯ ರಂಗೋಲಿ, ಮದುವೆಯ ರಂಗೋಲಿ ಹೀಗೆ ವಿವಿಧ ಪ್ರಕಾರಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾನೆ. ಮದರಂಗಿಯಲ್ಲಿ ರಂಗೋಲಿ ವಿನ್ಯಾಸ, ಜನಪದರಲ್ಲಿ ಮದರಂಗಿ ಕಥೆ, ಮದರಂಗಿಯ ಪ್ರಾಚೀನಕ್ಕೆ ವಿಶೇಷತೆ, ಮಧುಮಗಳ ಮದರಂಗಿ ಕಲಾವಿನ್ಯಾಸ, ಸಮಕಾಲೀನ ಮದರಂಗಿಕಲೆ ಮತ್ತು ವಿನ್ಯಾಸ ಬಳಕೆ, ಕುರಿತಂತೆ ಅನೇಕ ಬಗೆಯಲ್ಲಿ ರಂಗೋಲಿ ಚಿತ್ರಕಲೆಯನ್ನು ಸಾಂಸ್ಕೃತಿಕ ಆಯಾಮದಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಯಾದಗಿರಿ ಜಿಲ್ಲೆಯ ರಂಗೋಲಿ ಚಿತ್ರಕಲೆಯ ಪ್ರಮುಖ ಅಂಶಗಳನ್ನು ಈ ಅಧ್ಯಯನದ ಸುಳಿವು ತಿಳಿಸುತ್ತದೆ. ಕರ್ನಾಟಕದ ರಂಗೋಲಿ ಚಿತ್ರಕಲೆಯ ಹುಟ್ಟು ಮತ್ತು ಬೆಳವಣಿಗೆಯ ಕ್ರಿಯೆಯು ಹಾಗೆ ಯಾದಗಿರಿ ಜಿಲ್ಲಾ ರಂಗೋಲಿ ಚಿತ್ರಕಲೆ ಈ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿಕೊಂಡಿದೆ.

**ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ**[೧೮]

೨೦೧೦ನೇ ಸಾಲಿನಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ ಸಂಶೋಧಕ ಎನ್.ಎಂ. ಅಂಗಡಿಯವರು, ಡಾ. ಎಸ್.ಸಿ. ಪಾಟೀಲ್‌ರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದ್ದಾರೆ. ಕರ್ನಾಟಕದ ವಿವಿಧ ನೆಲೆಗಳಲ್ಲಿನ ಚಿತ್ರಗಳ ಅಧ್ಯಯನದಂತೆ ಯಾದಗಿರಿ ಜಿಲ್ಲೆಯ ಗಾಜಿನ ಚಿತ್ರಕಲೆಯ ಪ್ರಮುಖ ನೆಲೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಂಡಿದ್ದಾರೆ. ಸುರಪುರದ ಗೋಮರಾಜ, ಶರತಚಂದ್ ಜೈನ ಅವರ ಮನೆಯಲ್ಲಿನ ಗಾಜಿನ ಚಿತ್ರಗಳನ್ನು ವಿವರಣಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳ ವಸ್ತು, ವಿಷಯ,

ಆಕಾರ, ಶೈಲಿಗಳನ್ನು ಗಮನಿಸಿ ವಿವರ ನೀಡಿದ್ದಾರೆ. ಕರ್ನಾಟಕದ ವಿವಿಧ ನೆಲೆಗಳ ಕಲಾಕೃತಿಗಳೊಂದಿಗೆ ತೌಲನಿಕ ಚರ್ಚೆಯನ್ನು ಮಾಡಿದ್ದಾರೆ. ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯಿಕ ಅಂಶಗಳಿಗೆ ಈ ಪ್ರಬಂಧ ಪೂರಕವಾದದ್ದು.

**ಹೈದ್ರಾಬಾದ್ ಕರ್ನಾಟಕ ಸಾಂಸ್ಕೃತಿಕ ವಿಷಯಕೋಶ – ೨ ಲಲಿತಕಲೆಗಳು[೧೯]**

ಲಲಿತಕಲೆಗಳ ಸಂಪುಟ : ೨೦೧೨ರಲ್ಲಿ ಪ್ರಕಟವಾದ ಹೈದ್ರಾಬಾದ್ ಕರ್ನಾಟಕ ವಿಷಯಕೋಶ ಈ ಸಂಪುಟವನ್ನು ಡಾ. ಪಿ.ಕೆ. ಖಂಡೋಬಾ ಮತ್ತು ಡಾ. ಎಸ್.ಸಿ. ಪಾಟೀಲ ಅವರು ಸಂಪಾದಿಸಿದ್ದಾರೆ. ಹೈದ್ರಾಬಾದ್ ಕರ್ನಾಟಕದೊಳಗೆ ಬರುವ ಯಾದಗಿರಿ ಜಿಲ್ಲೆಯ ಲಲಿತಕಲೆಗಳ ಸಮಗ್ರ ವಿವರಣೆ ಹೊಂದಿದ ಈ ಸಂಪುಟ ಚಿತ್ರಕಲಾ ಸಾಹಿತ್ಯಕ್ಕೆ ಅಮೂಲ್ಯವಾದ ಕೃತಿಯಾಗಿದೆ.

**ಚಿತ್ರಕಲಾವಿದ ಎಸ್.ಡಿ. ಪಾಟೀಲ[೨೦]**

ಚಿತ್ರಕಲಾವಿದ ಎಸ್.ಡಿ. ಪಾಟೀಲ ಅವರ ಕಲೆ ಮತ್ತು ಬದುಕು ಒಂದು ಅಧ್ಯಯನ ಎಂಬ ಸಂಶೋಧನ ಪ್ರಬಂಧ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ, ಮಾಸ್ಟರ ಆಫ್ ವಿಜುವಲ್ ಆರ್ಟ್ಸ್ ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿದ ಪ್ರಬಂಧವಾಗಿದೆ. (ಅಪ್ರಕಟಿತ ಗ್ರಂಥ) ಲೇಖಕಿ, ಗಾಯತ್ರಿ ಮಂತ್ ಅವರು ಎಸ್.ಡಿ. ಪಾಟೀಲರ ಕಲೆ ಮತ್ತು ಬದುಕನ್ನು ಪರಿಚಯಿಸುವ ಅವರ ಕಲಾಕೃತಿಗಳನ್ನು ವಿಶ್ಲೇಷಿಸುವ ಕೃತಿ ಇದಾಗಿದೆ. ಇಷ್ಟೆಲ್ಲಾ ಕೃತಿಗಳಿಂದ ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ ತನ್ನದೇಯಾದ ಸ್ವರೂಪವನ್ನು ಪಡೆದುಕೊಂಡಿದೆ.

**ಚಿತ್ರಕಲಾ ಶಿಕ್ಷಣ ಸಂಸ್ಥೆಗಳು:**

*** ಪ್ರಾಥಮಿಕ ಮಾಧ್ಯಮಿಕ;**

ಚಿತ್ರಕಲಾ ಶಿಕ್ಷಣ ಅಂದಾಗ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿನ ಚಿತ್ರಕಲೆಯ ಅಧ್ಯಯನದ ಕಡೆ ಗಮನಹೋಗುತ್ತದೆ. ಯಾದಗಿರಿ ಜಿಲ್ಲೆಯಲ್ಲಿ ಸರಕಾರಿ ಮತ್ತು ಖಾಸಗಿ ಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರು ಇರುವುದು ಕಂಡುಬರುತ್ತದೆ. ಪ್ರಾಥಮಿಕ ಶಾಲೆಗಳಲ್ಲಿ ಕಡಿಮೆ ಶಿಕ್ಷಕರು ಕಂಡರೂ ಪ್ರೌಢಶಾಲೆಗಳಲ್ಲಿ ಕಲಾಶಿಕ್ಷಕರು ಇರುವುದು ಹೆಚ್ಚು ಕಾಣುತ್ತಾರೆ. ಪ್ರಾಥಮಿಕ ಶಾಲಾ ಕಲಿಕೆಯಲ್ಲಿ ಕೆಲವು ಮಕ್ಕಳಿಗೆ ಚಿತ್ರಕಲೆ ಆಸಕ್ತಿ ಹೊಂದಿರುವವರು ಮುಂದೆ ಪ್ರತಿಭಾ ಕಾರಂಜಿಯಲ್ಲಿ ಬೆಳಕಿಗೆ ಬರುತ್ತವೆ. ಪ್ರೌಢಶಾಲೆಯಲ್ಲಿ ಮಕ್ಕಳಿಗೆ ಚಿತ್ರಕಲಾ ಶಿಕ್ಷಕನ ಪಾತ್ರ ಬಹುಮುಖ್ಯವಾಗಿರುತ್ತದೆ. ಅಂತೆಯೇ ಯಾದಗಿರಿ ಜಿಲ್ಲೆಯಲ್ಲಿರುವ ಅನೇಕ ಪ್ರೌಢಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರು ಕಂಡುಬಂದರೂ ಕಲಾ ಬೋಧನಾ ಕ್ರೀಯೆಯಲ್ಲಿ ಕೆಲವರು ಕ್ರೀಯಾಶೀಲರು, ಕಲೆಯೇ ನನ್ನ ಬದುಕೆಂದು ಪ್ರಾಮಾಣಿಕ ಕಲಾ ಸೇವೆಯಲ್ಲಿ ತೊಡಗಿದ್ದಾರೆ. ಚಿತ್ರಕಲಾ ಕ್ಷೇತ್ರವನ್ನು ಪ್ರೀತಿಸುವ, ಗೌರವಿಸುವ ಶಿಕ್ಷಕರಿಂದ

ಅನೇಕ ವಿದ್ಯಾರ್ಥಿಗಳು ರಾಜ್ಯಮಟ್ಟದ ಚಿತ್ರಕಲಾ ಸ್ಪರ್ಧೆಗಳಲ್ಲಿ ಗುರುತಿಸಿಕೊಂಡಿದ್ದಾರೆ. ಮತ್ತು ಜಿಲ್ಲೆಗೂ ಹೆಗ್ಗಳಿಕೆ ತಂದ ಪ್ರತಿಭೆಗಳು ಯಾದಗಿರಿ ಜಿಲ್ಲೆಯಲ್ಲಿ ಸಾಕಷ್ಟು ವಿದ್ಯಾರ್ಥಿಗಳ ಪ್ರತಿಭೆ, ಪ್ರದರ್ಶನದ ಹಿಂದೆ ಕಲಾಶಿಕ್ಷಕರ ಪ್ರೋತ್ಸಾಹ ಸಹಕಾರ ಇರುತ್ತದೆ. ಕೆಲವು ಭಾರಿ ಗುರುವಿನ ಕರುಣೆ ಇಲ್ಲದಿದ್ದರೂ ಸ್ವ ಪ್ರಯತ್ನದ ಹಾದಿಯಿಂದ ಮೇಲುಗೈ ಸಾದಿಸಿದ ಶಿಷ್ಯವರ್ಗವು ಹಲವೆಡೆ ಸಾಕ್ಷಿ ಇವೆ. ಅವರವರ ಪ್ರೋತ್ಸಾಹ ಸ್ವಪ್ರತಿಭೆಯ ಜೊತೆಗೆ ಮುಂದೆ ಕಾಲೇಜು ಹಂತದ ಕಲಾಶಿಕ್ಷಣ ಪ್ರಕ್ರೀಯೆ ಅತ್ಯಂತ ಪರಿಣಾಮಕಾರಿಯಾಗಿರುತ್ತದೆ. ಅಂತೆಯೇ ಯಾದಗಿರಿ ಜಿಲ್ಲೆಯಲ್ಲಿ ಎರಡು ಕಲಾ ಶಾಲೆಗಳಿರುವುದು ಕಂಡು ಬರುತ್ತದೆ. ೧. ಬ್ಲೂ ಸ್ಟಾರ್‌ಚಿತ್ರಕಲಾ ಮಹಾವಿದ್ಯಾಲಯ ೨. ಶ್ರೀ ಮಹಾದೇವಪ್ಪ ಹಿರೇನೂರು ಕಾಲೇಜ ಆಫ್ ವಿಜುವಲ್ ಆರ್ಟ್ಸ್.

## ೧. ಬ್ಲೂ ಸ್ಟಾರ್ ಚಿತ್ರಕಲಾ ಮಹಾವಿದ್ಯಾಲಯ

ಗುಲಬರ್ಗಾದ ಸಂತ ಕಬೀರದಾಸ ಶಿಕ್ಷಣ ಸಂಸ್ಥೆಯ ಆಶ್ರಯದಡಿಯಲ್ಲಿ ನಡೆಸುತ್ತಿರುವ ಈ ಬ್ಲೂಸ್ಟಾರ್ ಚಿತ್ರಕಲಾ ಮಹಾವಿದ್ಯಾಲಯ ಯಾದಗಿರಿ ನಗರದಲ್ಲಿ ಪ್ರಾರಂಭ ಹಂತದಲ್ಲಿ ವೀರಶೈವ ಕಲ್ಯಾಣ ಮಂಟಪದ ಹತ್ತಿರ ಗಾಂಧಿಚೌಕ ರಸ್ತೆಯಲ್ಲಿ ಇತ್ತು. ಈ ಕಲಾಶಾಲೆ ಹುಟ್ಟಿಕೊಂಡಿದ್ದು ೧೯೯೩ರಲ್ಲಿ ಅದರ ಅಧ್ಯಕ್ಷರು ಟಿ.ಎಂ. ಬಾವಿದೊಡ್ಡಿ. ಈಗಲೂ ಅವರೇ ನಡೆಸುತ್ತಿದ್ದಾರೆ. ಕಲಾ ಮೂಲ ತರಗತಿಗಳು (ಪೌಂಡೇಶನ್) ವಿಶೇಷ ಪರಿಣತಿ ಚಿತ್ರಕಲೆ (ಐದು ವರ್ಷಗಳ ಡಿಪ್ಲೋಮಾ) ತರಗತಿಗಳು ನಡೆಯುತ್ತಿವೆ. ಮೊದಲಿಗೆ ಈ ಕಲಾ ಸಂಸ್ಥೆ ಸ್ಥಾಪನೆಯಾಗಿದ್ದಾಗ ಡಿ.ಎಂ.ಸಿ. (ಡ್ರಾಯಿಂಗ್ ಮಾಸ್ಟರ್ ಕೋರ್ಸ್) ಎ.ಎಮ್. (ಆರ್ಟ್ ಮಾಸ್ಟರ್) ಪದವಿಗಳು ಇದ್ದವು. ಅಂತೆಯೇ ಈ ಪದವಿಗಳನ್ನು ಕಲಿತ ಅನೇಕ ವಿದ್ಯಾರ್ಥಿಗಳು ಸರಕಾರಿ ಹಿರಿಯ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಚಿತ್ರಕಲಾ ಶಿಕ್ಷಕರಾಗಿ ನೇಮಕಾತಿ ಹೊಂದಿದ್ದಾರೆ. ಪ್ರಸ್ತುತ ಈ ಕಲಾ ಶಾಲೆ ಯಾದಗಿರಿ ನಗರದ ರೈಲ್ವೆ ಸ್ಟೇಷನ್ ರಸ್ತೆಯ ವಿದ್ಯಾ ಕಾಂಪ್ಲೆಕ್ಸ್ ಹಿಂದುಗಡೆ ಇದೆ. ಈಗಲೂ ಅನೇಕ ವಿದ್ಯಾರ್ಥಿಗಳು ಕಲಾ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಹಳೇ ವಿದ್ಯಾರ್ಥಿಗಳು ಕೆಲವರು ಉತ್ತಮ ಚಿತ್ರಕಲಾವಿದರಾಗಿ ರೂಪುಗೊಂಡಿದ್ದಾರೆ. ಯಾದಗಿರಿ ಜಿಲ್ಲೆಗೆ ಈ ಕಲಾಶಾಲೆಯ ಕೊಡುಗೆಯು ಮರೆಯುವಂತಿಲ್ಲ.

## ೨. ಶ್ರೀ ಮಹಾದೇವಪ್ಪ ಹಿರೇನೂರು ಕಾಲೇಜ್ ಆಫ್ ವಿಜುವಲ್ ಆರ್ಟ್ಸ್

ಈ ಕಲಾಶಾಲೆ ೨೦೧೨-೧೩ನೇ ಸಾಲಿನಲ್ಲಿ ಹುಟ್ಟಿಕೊಂಡಿದ್ದು, ಯಾದಗಿರಿಯ ಲಕ್ಷ್ಮೀ ನಗರದಲ್ಲಿದೆ. ಈ ಕಾಲೇಜನ್ನು ನಡೆಸಿಕೊಂಡು ಹೊರಟಿರುವವರು ಅಧ್ಯಕ್ಷರಾದ ಜಿ.ಎಂ.ಹಿರೇನೂರು ಅವರು ನವ ಅರುಣೋದಯ ಶಿಕ್ಷಣ ಸಂಸ್ಥೆಯ ಮುಖಾಂತರ ಯಾದಗಿರಿ ಭಾಗದ ಕಲಾಭಿವೃದ್ಧಿಗೆ ಶ್ರಮಿಸಲು ಮುಂದಾಗಿದ್ದಾರೆ. ಪ್ರಾಂಶುಪಾಲರಾಗಿ ರಾಕೇಶ್ ಹಿರೇನೂರು ಅವರು

ಕಾರ್ಯನಿರ್ವಹಿಸುತ್ತಿದ್ದಾರೆ. ಪೇಂಟಿಂಗ್ ಅಪ್ಲೆಡ್‌ಆರ್ಟ್ಸ್, ಮೂರಲ್ಸ್ ಫೋಟೋಗ್ರಾಫಿ ಮತ್ತು ಶಿಲ್ಪಕಲೆ ಈ ಪ್ರಕಾರದ ಬ್ಯಾಚುಲರ್ ಪದವಿ ತರಗತಿಗಳು ನಡೆಯುತ್ತಿವೆ. ಅಂತೆಯೇ ಹಲವಾರು ಕ್ರೀಯಾಶೀಲ ವಿದ್ಯಾರ್ಥಿಗಳಿಂದ ಉತ್ತಮ ಕಲಾಕೃತಿಗಳು ಮೂಡಿಬರುತ್ತಿವೆ.

**ಜಿಲ್ಲೆಯ ಚಿತ್ರಕಲಾವಿದರು**

ನೂತನ ಯಾದಗಿರಿ ಜಿಲ್ಲೆಯಲ್ಲಿ ಹಲವಾರು ಹಿರಿಯ ಮತ್ತು ಯುವಕಲಾವಿದರು ಇರುವುದು ಕಂಡು ಬರುತ್ತದೆ. ಈ ಕೆಳಗಿನಂತೆ ಕಲಾವಿದರನ್ನು ಪರಿಚಯಿಸಲಾಗಿದೆ. ಹಲವು

**೧. ಎಂ.ಟಿ. ಭೋಪಲೆ**

ಇವರು ಶಹಾಪುರ ತಾಲೂಕು ಸಗರ ಗ್ರಾಮದವರು. ೧೯೧೯ರಲ್ಲಿ ಜನಿಸಿದರು ತಂದೆ. ತಿಪ್ಪಣ್ಣ ತಾಯಿ ಚಂದ್ರಮ್ಮ. ಅಣ್ಣ ರಾಮಚಂದ್ರರಾವ್. ತಂದೆ ತಿಪ್ಪಣ್ಣನಿಗೆ ಇಬ್ಬರು ಹೆಂಡತಿಯರು. ಮೊದಲನೆಯವರು ಚಂದ್ರಮ್ಮ (ಕಲಾವಿದನ ತಾಯಿ) ಎರಡನೆಯವರು ನರಸಮ್ಮ, ಇವರಿಬ್ಬರಿಗೆ ಹೆಸರು ಕರೆಯುವಾಗ (ಚಂದ್ರುಬಾಯಿ) (ನರಸೂಬಾಯಿ), ಅಂತ ಕರೆಯುತ್ತಿದ್ದರು. ನರಸಬಾಯಿಯವರಿಗೆ ಕೇಶವರಾವ್ ನಾಗೇಶ್ವರರಾವ್, ವಿಠಲರಾವ್ ಎಂಬ ಮೂರು ಜನ ಗಂಡು ಮಕ್ಕಳು. ತುಳಜಾಬಾಯಿ, ಲಕ್ಷ್ಮೀಬಾಯಿ, ರುಕ್ಮಿಣಿಬಾಯಿ ಮೂರು ಜನ ಹೆಣ್ಣುಮಕ್ಕಳು ಮತ್ತು ಸ್ವಕುಳ ಸಾಳಿ ಮತದವರಾದ ಇವರ ಮನೆತನದ ಮೂಲ ವೃತ್ತಿ ನೇಯ್ಗೆಯ, ಮಗ್ಗಗಳಿಗಾಗಿ ನೂಲನ್ನು ಸಿದ್ದಪಡಿಸಿ ಕೊಡುವುದು ಅಂದರೆ ಉಂಕಿಗಾರ ಅಥವಾ ಪಟ್ಲೇಗಾರ ವೃತ್ತಿ. ಭೋಪಲೆಯವರ ಅಜ್ಜ ವೆಂಕಪ್ಪ ಸಗರದಿಂದ ಶಹಾಪುರಕ್ಕೆ ಬಂದು ಜೀನಪೇಟೆ (ಹಳೆಪೇಟೆ)ಯಲ್ಲಿ ಕೆಲವು ದಿನಗಳು ವಾಸವಾಗಿದ್ದರು. ಕಲಾವಿದ ಮಾರ್ಥಂಡರಾವ್‌ರ ತಂದೆ ತಿಪ್ಪಣ್ಣವರು ಸರ್ಕಸ್‌ಕಂಪನಿಯಲ್ಲಿ ಸೇರಿಕೊಂಡು ಭಾಗವಹಿಸಿ ಸರ್ಕಸ್ ಮಾಡುವ ಸಂದರ್ಭದಲ್ಲಿ ಯಾರಿಗಾದರೂ ಕಾಲು, ಕೈ, ಮೈಗೆ ಪೆಟ್ಟಾದರೆ ಮಾಲಿಸ್‌ಮಾಡಿ ನೋವನ್ನು ನಿವಾರಿಸುತ್ತಿದ್ದ. ಕಾಲು, ಕೈ ಮುರಿದಿದ್ದರೆ ಸರಿಯಾಗಿ ಜೋಡಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಎಲುಬು ಮತ್ತು ನರರೋಗದಲ್ಲಿ ತಜ್ಞನೆನಿಸಿಕೊಂಡಿದ್ದ. ಮುಂದೆ ಕಲುಬುರ್ಗಿಯ ಬಡಾರೋಜಾ ಪ್ರದೇಶದಲ್ಲಿ ತನ್ನ ಹಕೀಮ ವೃತ್ತಿಯನ್ನು ಪ್ರಾರಂಭಿಸುತ್ತಾನೆ. ಅದರಲ್ಲೂ ಪ್ರಾಮಾಣಿಕ ಸೇವೆಯಿಂದ ಹೆಸರುಮಾಡಿದ. ಮತ್ತು ಆರ್ಥಿಕವಾಗಿ ಸುಧಾರಣೆಗೊಂಡನು. ಮುಂದೆ ಇವರ ಮನೆತನದ ಹೆಸರು ಹಕೀಮ ಎಂದು ಬದಲಾವಣೆಗೊಂಡು ಪ್ರಸ್ತುತ ಹಕೀಮ ತಿಪ್ಪಣ್ಣನ ಮನೆಯೆಂದೆ ಗುರುತಿಸುತ್ತಾರೆ. ತುಂಬು ಕುಟುಂಬ ಭೋಪಲೆಯವರ ಮನೆ, ಆಚಾರ, ವಿಚಾರ, ಸಂಪ್ರದಾಯಗಳೆಲ್ಲವೂ ನಡೆಯುತ್ತಿರುವುದುರಿಂದ ಈ ಮನೆಯಲ್ಲಿ ಮಾರ್ಥಂಡರಾವ್ ಎಂಬ ಚಿತ್ರಕಲಾವಿದ ಹುಟ್ಟಿಕೊಂಡಿದ್ದು. ಸತ್ಯದ ಸಂಗತಿ. ಮಾರ್ಥಂಡರಾವ್ ಭೋಪಲೆಯವರು ಚಿಕ್ಕವರಿರುವಾಗಲೇ ನೆಲದ ಮೇಲೆ ಮತ್ತು ಪಾಟಿ, ಗೋಡೆಗಳ ಮೇಲೆ ರೇಖಾಚಿತ್ರವನ್ನು ಬಿಡಿಸಲು ಪ್ರಾರಂಭಿಸುತ್ತಾರೆ ಮುಂದೆ ಕಲಬುರ್ಗಿಯ

ನೂತನ ವಿದ್ಯಾಲಯ ಶಿಕ್ಷಣ ಸಂಸ್ಥೆಯಲ್ಲಿ ಪ್ರಾಥಮಿಕ, ಮಾಧ್ಯಮಿಕ ಮತ್ತು ಶಿಕ್ಷಣವನ್ನು (ಹೆಚ್.ಎಸ್.ಸಿ)ಯನ್ನು ಮರಾಠಿ ಮತ್ತು ಇಂಗ್ಲೀಷ್ ಮಾಧ್ಯಮದಲ್ಲಿ ಕಲಿತರು. ಇಂತಹ ಶಾಲೆಯಲ್ಲಿ ಕಲಿತಿರುವುದು ಮುಂದೆ ಅವರ ಕಲಾಕಲಿಕೆಗೆ ಅದೇ ಶಾಲೆಯಲ್ಲಿನ ಚಿತ್ರಕಲಾ ಶಿಕ್ಷಕರಾಗಿದ್ದ ಶಂಕರ್‌ರಾವ್ ಆಳಂದಕರ್ ಅವರು ಕೇವಲ ಶಿಕ್ಷಕರಾಗಿರದೇ ಗುಲ್ಬರ್ಗಾ ಕಲಾಭಿವೃದ್ಧಿಗೆ ಚಿಂತಿಸುವ ಮತ್ತು ಕ್ರೀಯಾಶೀಲ ಚಿತ್ರಕಲಾವಿದರು ಅಂತೆಯೇ ಆಳಂದಕರ್ ಗುರುವಿನ ಮಾರ್ಗದರ್ಶನ ಎಂ.ಟಿ. ಭೋಪಲೆಯವರಿಗೆ ದೊರೆತಿರುವುದು ಸೌಭಾಗ್ಯವೆಂದೇ ಹೇಳಬಹುದು. ಶಂಕರರಾವ್ ಆಳಂದಕರ್ ಎಂಬ ಗುರುವಿನಲ್ಲಿ ಕಲಾ ವ್ಯಾಸಂಗ ಮಾಡಿದ ಭೋಪಲೆ ಎಸ್.ಎಂ. ಪಂಡಿತ್, ಶಂಕರಪ್ಪ ಮಾಸ್ತಾರರು, ಕುಮಾರ ಚಂದ್ರಶೇಖರ ವಿದ್ಯಾಭೂಷಣ, ಅನಸಾರಿ ಹೆರೂರಕರ್, ಅಂತಹ ಕಲಾವಿದರು ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯುತ್ತಮ ಸಾಧನೆಗೈದಿದ್ದಾರೆ. ಮಾರ್ಥಂಡರಾವ್ ಭೋಪಲೆಯವರ ಕಲಾಪ್ರತಿಭೆಯನ್ನ ಮತ್ತಷ್ಟು ಗಟ್ಟಿಗೊಳಿಸಲು ಮುಂಬೈ ಜೆ.ಜೆ. ಕಲಾಶಾಲೆಗೆ ಹೋಗಲು ಪ್ರೋತ್ಸಾಹಿಸುತ್ತಾರೆ. ಅಂತೆಯೇ ಇವರ ಹಿರಿಯಣ್ಣನಾದ ರಾಮಚಂದ್ರರಾವ್ ಭೋಪಲೆಯವರು ತಮ್ಮನ ಕಲಾಕಲಿಕೆಗೆ ನೀರೆರೆದರು. ಪ್ರಥಮ ಬಾರಿಗೆ ಮುಂಬೈಗೆ ತೆರಳಿದ ಮಾರ್ಥಂಡರಾವ್ ಭೋಪಲೆ ಅವರಿಗೆ ಅಣ್ಣನ ಗೆಳೆಯರಾದ (ಕಲಬುರ್ಗಿಯ ಮೂಲದವರು) ಶ್ರೀ ಪರಶುರಾಮ ಜಾಜಿ ಅವರು ಮುಂಬಯಿಯ ಹಿಂದೂ ಕಾಲೋನಿಯಲ್ಲಿ ಅಡತ್ ದುಕಾನ್ ಇಟ್ಟಿದ್ದರು. ಕಲಬುರ್ಗಿಯಿಂದ ಬಂದ ಕಲಾವಿದ ಎಂ.ಟಿ. ಭೋಪಲೆಯವರನ್ನು ತಮ್ಮ ಅಂಗಡಿಯಲ್ಲೇ ವಾಸವಾಗಲು ಇಟ್ಟುಕೊಂಡಿದ್ದರು. ೧೯೩೭ರಲ್ಲಿ ಮುಂಬೈ ಜೆ.ಜೆ. ಕಲಾಶಾಲೆಗೆ ಸೇರಿದ ಭೋಪಲೆಯವರಿಗೆ ಅಂದಿನ ಕಲಾಶಿಕ್ಷಣ ಕ್ರಮಬದ್ಧವಾಗಿತ್ತು. ಪರಫೆಕ್ಟ್ ಕ್ರಾಫ್ಟ್, ಇದ್ದಿಲು ಕಡ್ಡಿಯಿಂದ ಚಿತ್ರ ರಚನೆ, ಪುಡಿ ಬಣ್ಣಗಳಿಂದ ಛಾಯಾ ಪ್ರಕಾಶವನ್ನು ವ್ಯಕ್ತಗೊಳಿಸುವುದು, ದೃಗ್ದರ್ಶನ, ಭಾವಚಿತ್ರ, ಸ್ಥಿರಚಿತ್ರ, ಸ್ಟೀಲ್ ಲೈಫ್, (ವಸ್ತು ಚಿತ್ರಣ) ಜಲ ಮತ್ತು ತೈಲವರ್ಣಗಳನ್ನು ಬಳಸುವ ವಿಧಾನ . ದೇಹ ರಚನಾಶಾಸ್ತ್ರ, (ನ್ಯೂಡ್‌ಸ್ಟಡಿ) ನೈಜ ಚಿತ್ರಣ ರಚನೆ, ರೆಖಾಚಿತ್ರ ರಚನೆ ಹೀಗೆ ಹಲವಾರು ವಿಷಯಗಳ ಕುರಿತು ಅಧ್ಯಯನ ಮಾಡುತ್ತಾರೆ. ಶ್ರದ್ಧೆ, ಭಕ್ತಿ, ನಿಷ್ಠೆ, ಪ್ರಾಮಾಣಿಕತೆಯಿಂದ ಕಲಾಧ್ಯಯನ ಮಾಡಿದ ಭೋಪಲೆಯವರಿಗೆ ೧೯೪೧ರಲ್ಲಿ ಡಿಪ್ಲೋಮಾ ಪರಿಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಅತ್ಯುತ್ತಮ ಅಂಕಗಳಿಸಿ ಹೆಸರು ತಂದ ಈ ಕಲಾವಿದನಿಗೆ ೫೦೦ ರೂಪಾಯಿ ಫೆಲೋಶಿಪ್ ನೀಡಿ ಗೌರವಿಸಿದರು. ಕಲಬುರ್ಗಿಯ ಶಂಕರರಾವ್ ಆಳಂದಕರ್ ಮತ್ತು ಭೋಪಲೆಯವರ ಕುಟುಂಬ ಸಂತೋಷವನ್ನು ವ್ಯಕ್ತಪಡಿಸಿದರು. ಫೆಲೋಶಿಪ್ ನೀಡಿದ ಜೆ.ಜೆ. ಕಲಾ ಶಾಲೆಯವರು ಅಲ್ಲಿಯೇ ಹಂಗಾಮಿ ಪ್ರಾಧ್ಯಾಪಕರೆಂದೂ ನೇಮಕ ಮಾಡಿಕೊಂಡರು. ನಿರಂತರ ಕಲಾಕೃತಿ ರಚನೆಯಲ್ಲಿ ತೊಡಗಿದ ಭೋಪಲೆಯವರಿಗೆ ೧೯೪೫ರಲ್ಲಿ ನಡೆದ ಡಾಲ್ಲಿಕುರ್ಸೆಟಜಿ ಸ್ಪರ್ಧೆಯಲ್ಲಿ ಇವರ ಕಲಾಕೃತಿಗೆ ಪ್ರಥಮ ಬಹುಮಾನ ದೊರೆಯುತ್ತದೆ. ನಂತರ ಮುಂಬಯಿ ಕ್ರಿಸ್ಟೀಜ್ ಸೊಸೈಟಿಯವರು ಏರ್ಪಡಿಸಿದ್ದ ಕಲಾ ಸ್ಪರ್ಧೆಯಲ್ಲೂ ಭೋಪಲೆಯವರ (ಕಾಂಪೋಜಿಷನ್) ಚಿತ್ರಕ್ಕೆ ಪ್ರಥಮ ಬಹುಮಾನ ಲಭಿಸುತ್ತದೆ.

ಮುಂದೆ ಸಮಾನ ಮನಸ್ಕರ ಗೆಳಯರಾದ ಕೆ.ಸಿ.ರೆಡ್ಡಿ, ಭೋಪಲೆ, ಮಜೀದ್, ಸಿ.ವಾಯ್ ಕುಲಕರ್ಣಿ, ಸಿಬಾಪ್ತಿಸ್ಟಾ, ಎಲ್ಲರೂ ಕೂಡಿಕೊಂಡು ಆರಾ ಗೆಳೆಯರ ಗುಂಪು ಅಸ್ತಿತ್ವಕ್ಕೆ ಬರುತ್ತದೆ. ಆ ಗುಂಪಿನ ಮೂಲಕ ಹಲವಾರು ಪ್ರದರ್ಶನಗಳನ್ನು ಮಾಡುತ್ತ ಅತ್ಯುತ್ತಮ ಹೆಸರನ್ನು ಗಳಿಸುತ್ತಾರೆ. ೧೯೪೯ರಲ್ಲಿ ಬಾಂಬೆ ಗ್ರೂಫ್ ಆಫ್ ಕಾಂಟೆಂಪರರಿ ಇಂಡಿಯನ್ ಆರ್ಟಿಸ್ಟ್ ಎಂಬ ಹೆಸರಿನಲ್ಲಿ ಮುಂಬಯಿಯಲ್ಲಿ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಿದಾಗ, ಕಲಾವಿದರ ಕಿರು ಪರಿಚಯದ ಪುಸ್ತಕದಲ್ಲಿ ಅಂದಿನ ಜೆ.ಜೆ. ಕಲಾಶಾಲೆಯ ನಿರ್ದೇಶಕರಾಗಿದ್ದ ಚಾರ್ಲಸ್ ಜೆರಾರ್ಡ್, ಅವರು ಈ ಕಲಾವಿದರನ್ನು ಕುರಿತು ಹೊಗಳುತ್ತಾರೆ. ಮತ್ತು ಹೆಮ್ಮೆ ಪಡುತ್ತಾರೆ. ಎಂ.ಟಿ. ಭೋಪಲೆಯವರ ಸಮಕಾಲೀನ ಕಲಾವಿದರಾದ ಎಂ.ಎಫ್. ಹುಸೇನ ಅವರು ಮತ್ತು ಗೆಳೆಯರು ಕೂಡಿಕೊಂಡು ಭಾರತದ ನವ್ಯಕಲೆಯ ಪರಂಪರೆ ಮತ್ತು ಪ್ರಗತಿಪರ ಗುಂಪೆಂದು (ಪ್ರೊಗ್ರೆಸ್ಸಿವ್ ಆಟ್‌ಗ್ರೂಫ್) ಹೆಸರು ಮಾಡಿತ್ತು. ಸದಾ ಚಿತ್ರಕಲೆಗೆ ಸಂಬಂಧಿಸಿದ ಜೈನ, ಬೌದ್ಧ, ಅಜಂತ ಬಾಗ್, ರಜಪೂತ ಕಾಂಗ್ಡಾ, ಮೊಗಲ್ ಹಲವಾರು ಕಲಾಶೈಲಿಗಳನ್ನು ಕುರಿತು ಅಧ್ಯಯನ ಮಾಡಿದ್ದರು. ನಂತರ ಬೀತೇದಿನ್ ಎಂಬ ಹಿಂದಿ ಚಲನಚಿತ್ರದ ಸೆಟ್ ತಯಾರಿಸಿ ಉತ್ತಮ ಕಲಾನಿರ್ದೇಶಕರೆನಿಸಿಕೊಂಡಿದ್ದರು. (ಆರ್ಟ್ಸ್ ಡೈರಕ್ಟರ್), ಮುಂಬಯಿಯ ದಾದರ್‌ದಲ್ಲಿನ ಲೇಡಿ ಜೆಮ್‌ಶೇಟ್ ಜೀ ರಸ್ತೆಯಲ್ಲಿನ ಪಾರಕ್ ಮಹಲ್‌ದಲ್ಲಿ ಸ್ಟುಡಿಯೋ ಇಂಡಸ್ಟ್ರೀಸ್ ಆರ್ಟ್ ಎಂಬ ಹೆಸರಿನ ಸ್ಟುಡಿಯೋ ತರೆದು ಅಲ್ಲಿ ತಮ್ಮ ಕೃತಿ ರಚನೆಗೆ ತೊಡಗಿದರು, ಶಿವಾಜಿ ಪಾರ್ಕ್‌ನಲ್ಲಿ ವಾರಕ್ಕಾಗಿ ಪಗಡಿಯ ಮೇಲೆ ಮನೆಯೊಂದನ್ನು ಪಡೆದುಕೊಂಡರು, ಕಾರ್ದರ್ ಸ್ಟುಡಿಯೋದ ಹೆಸರಿನಡಿ ಅವರು ಅನೇಕ ಕಲಾಕೃತಿಗಳನ್ನು ರಚನೆಮಾಡಿದ್ದಾರೆ. ಭೋಪಲೆಯವರ ಕಲಾಕೃತಿ ರಚನಾಭಿವ್ಯಕ್ತಿಗೆ ಅನೇಕ ಸಂಘ ಸಂಸ್ಥೆಗಳು ಗಮನ ಸೆಳೆದು, ವಿದೇಶಿ ಸಹಯೋಗದೊಡನೆ ವ್ಯಾಪಾರ ಆರಂಭಿಸಿದ್ದ, (ಫಾರೆನ್ ಕೊಲ್ಯಾಬರೇಶನ್) ಮುಂಬಯಿಯ ಗೋಲ್ಡ್ ಫೀಲ್ಡ್ ಲೆದರ್ ಕಂಪನಿಯವರು ಭೋಪಲೆಯವರಿಗೆ ತಮ್ಮ ಕಂಪನಿಗಾಗಿ ವಿವಿಧ ಡಿಜೈನ್‌ಗಳನ್ನು ರಚಿಸಿಕೊಡಲು ಬೇಡಿಕೆ ಬರುತ್ತದೆ. ಅಂತೆಯೇ ಅನೇಕ ಡಿಜೈನ್‌ಗಳನ್ನು ರಚಿಸಿದ ಈ ಕಲಾವಿದನಿಗೆ ಬೇಡಿಕೆ ಹೆಚ್ಚಾಗಿ, ಹಣದ ಗಳಿಕೆಯು ಆಗುತ್ತದೆ.

ಸದಾ ಸರಳತೆ ಮುಗ್ದತೆ, ಪ್ರತಿಭಾನ್ವಿತರನ್ನು ಗೌರವಿಸುವ ಪ್ರೀತಿಸುವ ಗುಣ, ಹೊಂದಿದ್ದ ಭೋಪಲೆಯವರು ಬದುಕಿನುದ್ದಕ್ಕೂ ಅನೇಕ ಕಲಾಕೃತಿಗಳನ್ನು ರಚಿಸಿದ್ದಾರೆ.

**ಕಲಾಕೃತಿಗಳು**

ಪ್ಯಾಲೆಸ್ಸ್ ಎಕ್ಸ್‌ಟೇರಿಯರ್, ಬಾಪು (ಸ್ಟುಡಿಯೋ ಇಂಡಸ್ಟ್ರೀಜ್) ಪಾಲೆಸ್, (ಬೀತೆ ದಿನ್ ಹಿಂದಿ ಚಲನಚಿತ್ರಕ್ಕಾಗಿ ರೂಪಿಸಿದ ಸೆಟ್‌ನ ಚಿತ್ರ) ಅಲೆಮಾರಿ ಹುಡುಗಿ (ಎಜಿಪ್ಸಿ ಗರ್ಲ್), ಡ್ರಾಯಿಂಗ್ ರೂಮ್ (ಹಲವಾರು ರೇಖಾಚಿತ್ರಗಳನ್ನು ರಚಿಸುವ ಕಲಾಕೋಣೆ) ನೆಹರು, ಬಿಗಿನಿಂಗ್

ಆಫ್ ಪ್ಲೇ (ಆಟದ ಆರಂಭ), ಧ್ಯಾನಯೋಗಿ, ಎನ್ಯಾರೋ ಸ್ಟ್ರೀಟ್ (ಇಕ್ಕಟ್ಟಾದ ಓಣಿ) ಭೀಷ್ಮ ಪ್ರತಿಜ್ಞೆ, ಹೀಗೆ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ.

ಜೀವನದುದ್ದಕ್ಕೂ ಕಲೆಯಲ್ಲೇ ಬದುಕನ್ನು ಸಾಗಿಸಿದ ಎಂ.ಟಿ. ಭೋಪಲೆಯವರಿಗೆ ಹಲವು ತೊಂದರೆ ನೋವುಗಳನ್ನು ಎದುರಿಸಬೇಕಾದ ಸಂದರ್ಭಗಳು ಬರುತ್ತವೆ. ಅಂತೆಯೇ ಅನೇಕ ದುರ್ಘಟನೆಗಳೂ ಜೀವನದಲ್ಲಿ ಸಂಭವಿಸಿದ್ದರೂ ಸಹ ಹೆದರದೇ ಮುನ್ನುಗ್ಗುವ ಭೋಪಲೆಯವರಿಗೆ ತೀವ್ರ ಅನಾರೋಗ್ಯ ಬರುತ್ತದೆ. ಆಸ್ಪತ್ರೆಯಲ್ಲಿ ಗುಣಮುಖರಾಗಲು ಹೋದ ಎಂ.ಟಿ. ಭೋಪಲೆಯವರು ೮.೫.೧೯೬೬ರಲ್ಲಿ ನಿಧನ ಹೊಂದುತ್ತಾರೆ. ಅಂದಿನಿಂದ ಕಲಾಜ್ಯೋತಿ ಹಾರಿತು. ಆದರೂ ಅವರ ಕಲಾಕೃತಿಗಳು ಜೀವಂತ ಮಾತನಾಡುತ್ತವೆ. ಭಾರತೀಯ ಸಾಂಪ್ರದಾಯಿಕ ಕಲೆಗೆ ಮಹತ್ವದ ಕೊಡುಗೆಯನ್ನು ನೀಡಿದ ಎಂ.ಟಿ. ಭೋಪಲೆಯವರು ಯಾದಗಿರಿ ಜಿಲ್ಲೆಯ ಸಗರನಾಡಿನ 'ಸಗರ' ಗ್ರಾಮದ ಕಲಾತಿಲಕನೆಂದು ಹೇಳಲು ಹೆಮ್ಮೆಯ ಸಂಗತಿ.

**೨. ಶಂಕ್ರಪ್ಪ ಶೀಲವಂತ:** ಇವರು ತಂದೆ ಮಹಾದೇವಪ್ಪ ತಾಯಿ ಸಿದ್ದಮ್ಮನವರ ಮಗನಾಗಿ ೧೯೩೦ರಲ್ಲಿ ಜನಿಸಿದರು. ಮೂಲತಃ ಇವರು ಅಕ್ಕಸಾಲಿಗ ಮನೆತನದವರು. ವೃತ್ತಿಯಲ್ಲಿ ಬಂಗಾರದ ಆಭರಣಗಳನ್ನು ಮಾಡುವವರಾದರೆ, ಪ್ರವೃತ್ತಿಯಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಆಸಕ್ತಿಯುಳ್ಳವರು. ಇವರ ಜೀವಿತಾವಧಿಯಲ್ಲಿ ಅನೇಕ ಶಿವಶರಣರ ಚಿತ್ರಗಳನ್ನು ರಚಿಸಿದ್ದಾರೆ. ಇವರ ಚಿತ್ರರಚನಾ ಶೈಲಿಯನ್ನು ಕಂಡು ನಾಡಿನ ಖ್ಯಾತಕಲಾವಿದರಾದ ಎಸ್.ಎಂ. ಪಂಡಿತ್‌ರು ತಮ್ಮೊಂದಿಗೆ ಮುಂಬೈ ಸಿನಿಮಾಗಳ ಪರದೆಗಳನ್ನು ಚಿತ್ರಿಸಲು ಆಹ್ವಾನ ನೀಡಿದ್ದರಂತೆ ಆದರೆ ಮುಂಬೈಗೆ ಹೋಗದೇ ಇಲ್ಲೇ ಇದ್ದುಕೊಂಡು ಕಲಾಕೃತಿಗಳನ್ನು ರಚಿಸುವ ಮೂಲಕ ಸಾಧನೆ ಮಾಡಿದರು ಎಂದು ಅವರ ಕಿರಿಯ ಪುತ್ರ ರೇವಣಸಿದ್ದಪ್ಪ ಶೀಲವಂತ ಅವರು ಮನದಾಳದ ಮಾತನ್ನು ಹಂಚಿಕೊಂಡರು.

**೩. ಎಸ್. ಮುಕುಂದ:** ಈ ಕಲಾವಿದ ಯಾದಗಿರಿ ಜಿಲ್ಲೆಯ ಹತ್ತಿರವಿರುವ ಬಳಿಚಕ್ರ ಗ್ರಾಮದವರು. ಚಿಕ್ಕವರಿರುವಾಗಲೇ ಚಿತ್ರಕಲೆಯಲ್ಲಿ ಆಸಕ್ತಿಹೊಂದಿದ್ದರು. ಶಿಕ್ಷಣವು ಸಂಪೂರ್ಣ ಕಲಿಯದ ಈ ಕಲಾವಿದನಿಗೆ ಕೈ ಹಿಡಿದಿದ್ದು ಕಲೆ. ಕಲೆಯಲ್ಲೂ ಯಾವುದೇ ರೀತಿಯ ಅಧ್ಯಯನ ಮಾಡದೇ ಮನೆಯಲ್ಲಿಯೇ ಇದ್ದುಕೊಂಡು ಹವ್ಯಾಸವಾಗಿ ಚಿತ್ರಕಲೆಯನ್ನು ಪ್ರೀತಿಸಿ ಆರಾಧಿಸಿದರು. ಅಂತೆಯೇ ತಮ್ಮ ಜೀವಿತಾವಧಿಯಲ್ಲಿ ಚಿತ್ರಕಲೆಯನ್ನೇ ದುಡಿಮೆಯನ್ನಾಗಿಸಿಕೊಂಡು ಬದುಕಿದವರು. ಸರ್ವಪಲ್ಲಿ ರಾಧಾಕೃಷ್ಣನ್, ಗಾಂಧಿಜೀ, ಶಿವಶರಣರು, ಹಿರಿಯ ತಲೆಮಾರಿನ ಊರಿನ ಗಣ್ಯರ ಭಾವಚಿತ್ರ ತಿಂಥಣಿ ಮೌನೇಶ್ವರ, ಹೀಗೆ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಕಲಾಕೃತಿಗಳಲ್ಲಿನ ರೇಖೆ, ಬಣ್ಣ, ಸಂಯೋಜನಾಶೈಲಿ ಅತ್ಯುತ್ತಮವಾಗಿದೆ. ಚಿತ್ರಕಲೆಯನ್ನೇ ಉಸಿರಾಗಿಸಿಕೊಂಡ ಈ ಕಲಾವಿದನಿಗೆ ಯಾವುದೇ ಸಂಘ, ಸಂಸ್ಥೆ, ಅಕಾಡೆಮಿಗಳು ಸರಕಾರ, ಗುರುತಿಸಿ ಗೌರವಿಸಿಲ್ಲ

ಎಂಬುದು ಬಳಿಚಕ್ರ ಗ್ರಾಮದ ಜನತೆಯ ಮಾತಾಗಿದೆ. ಬಣ್ಣ, ರೇಖೆಗಳೊಂದಿಗೆ ಬದುಕು ಸಾಗಿಸಿದ ಈ ಕಲಾವಿದ ಬಣ್ಣದ ಬದುಕಲ್ಲಿ ಕೊನೆಯುಸಿರೆಳೆದ. ದಿವಂಗತ ಎಸ್. ಮುಕುಂದ ಅವರ ತಿಂಥಣಿ ಮೌನೇಶ್ವರ, ಕಲಾಕೃತಿ ಯಾದಗಿರಿ ನಗರದ ವೀರಶೈವ ಕಲ್ಯಾಣ ಮಂಟಪದಲ್ಲಿ ಸಂಗ್ರಹಗೊಂಡಿದೆ.

**೪. ಸಂಗಣ್ಣ ಎಂ. ದೋರನಹಳ್ಳಿ:** ಶಹಾಪುರ ತಾಲೂಕಿನ ದೋರನಹಳ್ಳಿ ಗ್ರಾಮದ ಈ ಕಲಾವಿದ ೪.೩.೧೯೪೪ರಲ್ಲಿ ಜನಿಸಿದರು. ತಂದೆ ನಿಂಗಪ್ಪ, ತಾಯಿ ಸಾತಮ್ಮ, ಮನೆತನದ ಹೆಸರು ಮಲಗೊಂಡ ಚಿಕ್ಕವರಿರುವಾಗಲೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ ಇವರು ೧೯೬೩ರಲ್ಲಿ ಪ್ರಾಥಮಿಕ ಶಾಲೆಯನ್ನು ದೋರನಹಳ್ಳಿಯಲ್ಲಿ ಕಲಿತು, ಮುಂದೆ ಪ್ರೌಢಶಾಲೆ ಶಹಾಪುರ ನಗರದಲ್ಲಿ ಕಲಿತರು. ೧೯೬೮ರ ಸಂದರ್ಭದಲ್ಲಿ ಲೋಹರ್ ಗ್ರೇಡ್ ಪರಿಕ್ಷೆ ಶಹಾಪುರದಲ್ಲಿ ಪಾಸಾಗಿ, ಹೈಯರ್ ಗ್ರೇಡ್ ಚಿತ್ರಕಲಾ ಪರೀಕ್ಷೆ ೧೯೬೯ರಲ್ಲಿ ಸುರಪುರದಲ್ಲಿ ಪಾಸಾದರು. ಇವರ ಕಲಾಪ್ರತಿಭೆಯನ್ನು ಕಂಡು ತಮ್ಮ ಊರಿನವರಾದ ಕೃಷ್ಣಮೂರ್ತಿಯವರು ದೆಹಲಿಯ ಮಿಲ್ಟ್ರಿಸ್ಕೂಲ್‌ನಲ್ಲಿ ಚಿತ್ರಕಲಾ ಶಿಕ್ಷಕರಾಗಿದ್ದರು. ಅವರು ಗುಲಬರ್ಗಾದಲ್ಲಿರುವ ದಿ. ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಗೆ ಪ್ರವೇಶ ಮಾಡಿಸಿದರು. ಆ ಕಲಾಶಾಲೆಯಲ್ಲಿ ಜೆ.ಎಸ್. ಖಂಡೇರಾವ್ ಅವರ ಮಾರ್ಗದರ್ಶನ ಸಿಕ್ಕಿತು. ಸ್ಥಿರಭಾವಚಿತ್ರ, ನಿಸರ್ಗಚಿತ್ರ, ಮಾನವ ಅಂಗ ರಚನಾಶಾಸ್ತ್ರ, ರೇಖಾಚಿತ್ರ, ವ್ಯಕ್ತಿಚಿತ್ರ, ಸಂಯೋಜನೆ ಹೀಗೆ ಅನೇಕ ಬಗೆಯ ತರಗತಿಗಳಲ್ಲಿ ಭಕ್ತಿ ನಿಷ್ಠೆಯಿಂದ ೧೯೭೦ರಲ್ಲಿ ಕಲಾಪ್ರಥಮ, ೧೯೭೧ರಲ್ಲಿ ಮಧ್ಯಮ, ೧೯೭೨ರಲ್ಲಿ ಪ್ರೌಢಿಮೆ, ೧೯೭೩ರಲ್ಲಿ ನಿಪುಣ ಎಂಬ ತರಗತಿಗಳನ್ನು ಕಲಿತು ಡಿಪ್ಲೋಮಾ ಪದವಿ ಪಡೆದರು. ಅಧ್ಯಯನ ಮಾಡಿ ನಂತರ ಉತ್ತಮ ಕಲಾಕೃತಿಗಳನ್ನು ರಚಿಸಲು ಮುಂದಾದರು. ಅಂತೆಯೇ ಶಿವಶರಣರ ಜೀವನಾಧಾರಿತ ಕಲಾಕೃತಿಗಳ ಎಂಬ್ಲೋಮ್‌ಗಳು, ಪುಸ್ತಕಗಳಿಗೆ ಮುಖಪುಟ ಮತ್ತು ರೇಖಾಚಿತ್ರಗಳನ್ನು ಹಾಗೂ ರಂಗೋಲಿ ಕಲೆ ಹೀಗೆ ಹಲವು ಪ್ರಕಾರಗಳಲ್ಲಿ ತಜ್ಞತೆ ಪಡೆಯುತ್ತಾರೆ. ಅಲ್ಲಲ್ಲಿ ಹಲವಾರು ಕಾರ್ಯಕ್ರಮಗಳಲ್ಲಿ ಚಿತ್ರಕಲೆ ಮತ್ತು ರಂಗೋಲಿ ಕಲೆಯನ್ನು ಪ್ರದರ್ಶಿಸುತ್ತ ಗೌರವಗಳಿಗೆ ಪಾತ್ರರಾಗುತ್ತಾರೆ. ನೂರಾರು ಪುಸ್ತಕಗಳಿಗೆ, ಕಥೆ, ಕಾದಂಬರಿ, ಕವನ, ಲೇಖನಗಳ ಕೃತಿಗಳ ವಿಷಯಕ್ಕೆ ತಕ್ಕಂತೆ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಇವರ ಕಲಾಕೃತಿ ರಚನೆಗೆ ಜಲವರ್ಣ, ತೈಲವರ್ಣ, ಇವು ಪ್ರಮುಖ ವರ್ಣಗಳಾಗಿವೆ. ಕಪ್ಪು ಮಸಿಯ ಪೆನ್ನುಗಳಿಂದ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಬೆಂಗಳೂರು, ದೆಹಲಿ, ಮೈಸೂರು, ಗುಲಬರ್ಗಾ, ಸುರಪುರ, ಶಹಾಪುರ, ಯಾದಗಿರಿ ಸೇರಿದಂತೆ ಹಲವಡೆ ಕಲಾಕೃತಿಗಳ ಪ್ರದರ್ಶನ ಮಾಡಿದ್ದಾರೆ. ನಿರಂತರ ಕಲಾಸಾಧನೆಗೆ ೨೦೦೬-೦೭, ಕೊಂಡಗುಳಿ ಶ್ರೀ ಪ್ರಶಸ್ತಿ, ೨೦೧೧, ಮಹಾಂತ ಶ್ರೀ ಪ್ರಶಸ್ತಿ, ೨೦೧೧, ಸಗರನಾಡು ಸಿರಿ ಪ್ರಶಸ್ತಿ, ೨೦೧೧, ಯಾದಗಿರಿ ಜಿಲ್ಲಾಡಳಿತ ವತಿಯಿಂದ ಸನ್ಮಾನ ಹೀಗೆ ಹಲವಾರು ಕಡೆಗಳಲ್ಲಿ ಪ್ರಶಸ್ತಿ ಪುರಸ್ಕಾರ ಪಡೆದುಕೊಂಡಿದ್ದಾರೆ.

**೫. ಡಿ.ಎನ್. ಅಕ್ಕಿ:** ಇವರು ಶಹಾಪುರ ತಾಲೂಕಿನ ಗೋಗಿ ಗ್ರಾಮದವರು. ೩.೧೦.೧೯೪೮ರಂದು ಜನಿಸಿದರು. ತಂದೆ ನಾಭಿರಾಜ, ತಾಯಿ ಶ್ರೀಕಾಂತಮ್ಮ, ೧೯೬೬ರಲ್ಲಿ ಗೋಗಿ ಗ್ರಾಮದಲ್ಲಿ ಮೆಟ್ರಿಕ್ ಪಾಸಾದರು. ೧೯೬೮-೬೯ರಲ್ಲಿ ಗೋಗಿ ಪ್ರೌಢಶಾಲೆಯಲ್ಲಿದ್ದ ಶ್ರೀ ಭೀಮರಾವ್ ಕಟ್ಟಿಮನಿಯವರು ಚಿತ್ರಕಲಾ ಶಿಕ್ಷಕರಾಗಿದ್ದರು. ಅವರು ಅಕ್ಕಿಯವರ ಕಲೆಗೆ ಪ್ರೋತ್ಸಾಹಿಸುತ್ತಾರೆ. ಅಂತೆಯೇ ಹೈಯರ್ ಗ್ರೇಡ್ ಡ್ರಾಯಿಂಗ್ ಪರೀಕ್ಷೆ ಕಟ್ಟಿ ಪಾಸಾಗುತ್ತಾರೆ. ಮುಂದೆ ಗದಗನಲ್ಲಿರುವ ಟಿ.ಪಿ. ಅಕ್ಕಿ ಅವರ ವಿಜಯ ಕಲಾ ಮಂದಿರದಲ್ಲಿ ಡಿ.ಎಂ.ಸಿ. (ಡ್ರಾಯಿಂಗ್ ಮಾಸ್ಟರ್ ಕೋರ್ಸ್) ಕಲಿಯುತ್ತಾರೆ. ೧೯೭೦-೭ನೇ ಸಾಲಿನಲ್ಲಿ ಡಿ.ಟಿಸಿ. & ಡಿಪ್ಲೋಮಾ ಪ್ರಥಮ ವರುಷದ ಕಲಾ ಪ್ರಥಮ ಮತ್ತು ಒಂದನೇ ವರುಷದ ಕ್ಲೇ ಮಾಡಲಿಂಗ್ ಮೂರು ಪರೀಕ್ಷೆಗಳಲ್ಲಿ ಪಾಸಾಗುತ್ತಾರೆ. ಮುಂದೆ ೧೯೭೪ರಲ್ಲಿ ಜಿ.ಡಿ. ಆರ್ಟ್ ಪದವಿಯನ್ನು ಮುಗಿಸುತ್ತಾರೆ. ೧೯೭೫-೭೬ನೇ ಸಾಲಿನಲ್ಲಿ ಗುಲಬರ್ಗಾದ ಪ್ರೊ. ವಿ.ಜಿ. ಅಂದಾನಿಯವರ ದಿ. ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಿಂದ ಆರ್ಟ್ ಮಾಸ್ಟರ್ ಸರ್ಟಿಫಿಕೇಟ್ ಪರೀಕ್ಷೆ ಪಾಸಾಗುತ್ತಾರೆ. ಸಂಪೂರ್ಣ ಚಿತ್ರಕಲಾ ಪದವಿಗಳನ್ನು ಪಡೆಯುವುದರ ಮೂಲಕ ತಮ್ಮ ಖಾಯಂ ಸರಕಾರಿ ಕೆಲಸಕ್ಕೆ ಸೇರುತ್ತಾರೆ.

ಡಿ.ಎನ್. ಅಕ್ಕಿ ಅಂತ ಹೆಸರು ಕೇಳಿದಾಗ ಸಾಮಾನ್ಯವಾಗಿ ಬರುವುದು ಅವರು ಉತ್ತಮ, ಸಾಹಿತಿ, ಸಂಶೋಧಕ ಎಂದು ಅದರಾಚೆ ಬರೀ ಚಿತ್ರಕಲಾ ಶಿಕ್ಷಕರಾಗದೇ ಅವರೊಳಗೊಬ್ಬ ವಿದ್ವತ್ ಶಕ್ತಿಯ ಚಿತ್ರಕಲಾವಿದ ಇದ್ದಾನೆಂದು ಯಾರಿಗೂ ತಿಳಿದಿರಲಿಕ್ಕಿಲ್ಲ, ಚಿತ್ರಕಾರ ಅನ್ನುವುದು ಕೇವಲ ಪ್ರದರ್ಶನವಾದ ಕೂಡಲೇ ಅಲ್ಲ. ಚಿತ್ರ ರಚಿಸುವ ಕಲಾವಿದನ ಮನಸ್ಸು ಸಾಮಾಜಿಕ ಬದ್ಧತೆ ಯ ಕಡೆಗೆ ಚಿಂತಿಸುತಿರಬೇಕು. ಕ್ಯಾನವಾಸ್‌ಗೆ ಚಿತ್ರವಾಗಿ ಮನೆ ಸೇರಿದರೂ ಅದು ಒಂದಾನೊಂದು ಕಾಲಕ್ಕೆ ಹೊರ ಜಗತ್ತಿಗೆ ಮುಟ್ಟುತ್ತವೆ ಎನ್ನುವಂತೆ ಅಕ್ಕಿ ಅವರು ಚಿತ್ರ ಕಲಾಕೃತಿಗಳನ್ನು ಮನಸ್ಸು ಪೂರ್ವಕವಾಗಿ ರಚಿಸಿದ್ದಾರೆ. ಆದರೆ ಹಲವಡೆ ಗ್ಯಾಲರಿಗಳಲ್ಲಿ ಪ್ರದರ್ಶನಗಳನ್ನು ಕಂಡಿಲ್ಲ ಅನ್ನುವುದು ಸತ್ಯ, ಕಲೆ, ಸಾಹಿತ್ಯ ಚಿಂತನೆಯಲ್ಲಿ ಸಂಶೋಧನೆಗೆ ಹೆಚ್ಚು ಶ್ರಮವಹಿಸಿದ ಹಿನ್ನೆಲೆಯಾಗಿ ಅಕ್ಕಿ ಅವರು ಸಂಶೋಧಕರೆಂದು ಗುರುತಿಸಿಕೊಂಡಿದ್ದಾರೆ. ಸಂಶೋಧಕನ ಮನದೊಳಗೆ ಒಬ್ಬ ಸಾತ್ವಿಕ ಮನಸ್ಸಿನ ಚಿತ್ರಕಾರ ಇದ್ದಾನೆ ಎಂಬುದು ಮರೆಯುವಂತಿಲ್ಲ. ಡಿ.ಎನ್. ಅಕ್ಕಿಯವರ ಮನೆಯಲ್ಲಿ ಹಲವಾರು ಕಲಾಕೃತಿಗಳಿವೆ. ರಂಗೋಲಿಯಿಂದ ರಚನೆಯಾದ ನೆಹರು, ರವೀಂದ್ರನಾಥ ಠಾಗೋರ ಹಲವು ನಿಸರ್ಗ ಚಿತ್ರಗಳು ಮತ್ತು ವ್ಯಂಗ್ಯಚಿತ್ರಗಳು, ವಾಲಿವಧೆ, ಬುದ್ದನೆಡೆಗೆ, ರಾಧಾಕೃಷ್ಣನ್ ಹೀಗೆ ಹಲವಾರು ವಿಷಯಗಳನ್ನು ತಿಳಿಸುವ ಕಲಾಕೃತಿಗಳು ಮನೆಯಲ್ಲಿ ಸಂಗ್ರಹಗೊಂಡಿವೆ.

ಕಲೆ ಸಾಹಿತ್ಯ ಸಂಶೋಧನೆಗೆ ಸಂಬಂಧಿಸಿದಂತೆ ಶಹಾಪುರ ತಾಲೂಕು ದರ್ಶನ(೧೯೮೫), ಮುಂಬೆಳಕು ಮಹಾವೀರ ಕವನ ಸಂಕಲನ (೧೯೮೭), ಚಿಗುರು-ಚಿಂತನ ಮೂವರು ಗೆಳೆಯರೊಂದಿಗೆ

ತಂದ ಕವನ ಸಂಕಲನ (೧೯೯೬), ಹಡೆದವ್ವ ಹಾಡ್ಯಾಳ (ಜನಪದ ಹಾಡುಗಳ ಸಂಪಾದನಾ ಗ್ರಂಥ) (೨೦೦೦), ಜೈನ ವಿಗ್ರಹಗಳು ಕನ್ನಡ ಸಾಹಿತ್ಯ ಪರಿಷತ್ತಿನ ಸ್ವಸ್ತಿ ಶ್ರೀ ದೇವೇಂದ್ರ ಕೀರ್ತಿ ದತ್ತಿ ಪ್ರಶಸ್ತಿ ಪಡೆದ ಗ್ರಂಥ (೨೦೦೦), 'ವರ್ಧಮಾನ ಮಹಾವೀರ' ಬಾನುಲಿ ನಾಟಕ. ಗೋಗಿ(೨೦೦೨), ಜೈನ ಜನಪದ ಹಾಡುಗಳು, (ಶ್ರೀಕಾಂತಮ್ಮ ಅಕ್ಕಿಯವರ ಜೈನ ಜನಪದ ಹಾಡುಗಳ ಸಂಪಾದನಾ ಗ್ರಂಥ) 'ಬಾನರಂಗ-ರೇಡಿಯೋ' ನಾಟಕಗಳು, ಚಿತ್ರಕಲಾವಿದ ಎಂ.ಟಿ. ಭೋಪಲೆ, ಮಾಯೆ ಮದ್ದಲೆ, ಕವನ ಸಂಕಲನ (೨೦೦೮), 'ಯಕ್ಷ ಪ್ರಶ್ನೆ' ನಾಟಕ (೨೦೦೮), 'ಜಿನದನಿ' ಜೈನ ಸಂಶೋಧನಾ ಲೇಖನಗಳ ಸಂಗ್ರಹ (೨೦೧೦) ಹೀಗೆ ಹಲವು ಪ್ರಕಾರದ ಪುಸ್ತಕಗಳನ್ನು ಬರೆದಿದ್ದಾರೆ. ಇವರ ನಿರಂತರ ಕಲೆ, ಸಾಹಿತ್ಯ, ಸಂಶೋಧನಾ ಚಟುವಟಿಕೆಗಳಿಗೆ ೧೯೯೬ರಲ್ಲಿ ಕರ್ನಾಟಕ ಸರಕಾರದಿಂದ ರಾಜ್ಯ ಪ್ರಶಸ್ತಿ, ೧೯೯೭ನೇ ಸಾಲಿನ ಕೇಂದ್ರ ಸರಕಾರದಿಂದ ರಾಷ್ಟ್ರ ಪ್ರಶಸ್ತಿ, ೨೦೦೦ನೇ ಸಾಲಿನಲ್ಲಿ ಶ್ರೀ ಗೊಮ್ಮಟೇಶ್ವರ ವಿದ್ಯಾಪೀಠ ಪ್ರಶಸ್ತಿ, ಸ್ವಸ್ತಿ ಶ್ರೀ ದೇವೇಂದ್ರ ಕೀರ್ತಿದತ್ತಿ ಪ್ರಶಸ್ತಿ, ಜೈನ ರಾಷ್ಟ್ರ ಗೌರವ (ಕಲ್ಕತ್ತಾ) ಜೈನ ಸಂಸ್ಕೃತಿ ರಕ್ಷಕ, ಸಾಹಿತ್ಯ ಸಿರಿ, ಸಗರನಾಡು ಸಿರಿ, ಕರ್ನಾಟಕ ರತ್ನ ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರ ದೊರೆತಿವೆ. ಡಿ.ಎನ್. ಅಕ್ಕಿಯವರ ಬದುಕು ಮತ್ತು ಬರಹ ಕಲೆಯ ಕುರಿತು ಎಂ.ಫಿಲ್ ಹಾಗೂ ಲಘು ಸಂಶೋಧನಾ ಪ್ರಬಂಧಗಳು ರಚನೆಯಾಗಿವೆ. ಸದಾ ಕ್ರೀಯಾಶೀಲ ಸಾತ್ವಿಕ ಮನಸ್ಸಿನ, ಸರಳತೆಯ ಜೀವಿ, ಸಮಾನ ಹೃದಯವಂತಿಕೆಯುಳ್ಳ ಡಿ.ಎನ್. ಅಕ್ಕಿಯವರಿಗೆ ೨೦೧೧ರಲ್ಲಿ 'ಧವಳ' ಗ್ರಂಥವನ್ನು ರಚಿಸಿ ಅಭಿನಂದನೆಯನ್ನು ಸಲ್ಲಿಸಿರುವುದು ಅಭಿಂದನಾರ್ಹರು, ಒಬ್ಬ ಚಿತ್ರಕಲಾ ಶಿಕ್ಷಕ ಸೃಜನಶೀಲ ಚಿಂತನೆಗಳನ್ನು ಮಾಡುತ್ತಿದ್ದರೆ, ಏನೆಲ್ಲಾ ಮಾಡಲು ಸಾಧ್ಯ ಎಂಬುದನ್ನು ಸಾಧಿಸಿ ತೋರಿಸಿದ್ದಾರೆ. ಡಿ.ಎನ್. ಅಕ್ಕಿ ಅವರು ಇವರ ಕಲಾ ಸಾಧನೆಯನ್ನು ಅರಿಯಲು ಕಲಾಕೃತಿಗಳ ಭಾವಸಂವೇದನೆಯನ್ನು ಅರಿತಾಗ ತಿಳಿಯುತ್ತದೆ.

**೬. ಮಹ್ಮದ್ ತಾಹೀರ್:** ಈ ಕಲಾವಿದ ತಂದೆ ನೂರ್‌ಮಹ್ಮದ್ ತಾಯಿ ಮಶಾಕ್ ಬೀ. ಅವರ ಮಗನಾಗಿ ೧೯೬೭ರಲ್ಲಿ ಜನಿಸಿದರು. ಯಾದಗಿರಿ ಡಾನ್ ಬಾಸ್ಕೊ (ಡಿ.ಇಡಿ) ಶಿಕ್ಷಕರ ತರಬೇತಿ ಕೇಂದ್ರದಲ್ಲಿ ಚಿತ್ರಕಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿರುವ ಮಹ್ಮದ್ ತಾಹೀರ್ ಅವರು ಗುಲಬರ್ಗಾದ ದಿ. ಐಡಿಯಲ್ ಫೈನ್ ಆರ್ಟ್ ಕಾಲೇಜಿನಲ್ಲಿ ಚಿತ್ರಕಲೆಯಲ್ಲಿ ಡಿ.ಎಂ.ಸಿ. ಪದವಿ ಮುಗಿಸಿದ್ದಾರೆ. ಮುಂದೆ ಚಿತ್ರಕಲಾ ಪರಿಷತ್ತು ಬೆಂಗಳೂರಿನಲ್ಲಿ ಬಿ.ಎಫ್.ಎ. ಪದವಿ ಪಡೆದಿದ್ದಾರೆ. ಕಲಾ ಅಧ್ಯಯನ ಮಾಡುತ್ತಿರುವಾಗಲೇ ಅನೇಕ ಕಡೆಗಳಲ್ಲಿ ಏಕವ್ಯಕ್ತಿ ಮತ್ತು ಸಮೂಹ ಕಲಾ ಪ್ರದರ್ಶನವನ್ನು ಮಾಡಿದ್ದಾರೆ. ದೆಹಲಿ, ಮುಂಬೈ, ಸ್ವಿಜರ್‌ಲ್ಯಾಂಡ್‌ನಂತಹ ಪ್ರಮುಖ ನಗರಗಳಲ್ಲಿ ಕಲಾಪ್ರದರ್ಶನ ಮಾಡುವ ಮೂಲಕ ಕಲೆಯ ಹಾದಿಯಲ್ಲಿ ಮುಂದುವರೆದಿದ್ದಾರೆ. ವಿಶೇಷವಾದ ಇವರ ಕಲಾಕೃತಿ ರಚಿಯೆಂದರೆ. ಅಮೂರ್ತವಾದ ಕಲೆ (ಅಬ್‌ಸ್ಟ್ರೆಕ್ಟ್ವ್ ಪೇಂಟಿಂಗ್ಸ್)

ಮತ್ತು ರೇಖಾಚಿತ್ರ ರಚನೆ ಮಾಡುತ್ತಾರೆ. ಜೊತೆಗೆ ನ್ಯೂಸ್ ಪೇಪರ್‌ಗಳಿಂದ ಕೋಲಾಜ್ ಆರ್ಟ್ಸ್ ಪೇಂಟಿಂಗ್ ಮಾಡುವುದರಲ್ಲಿ ಸದಾ ಮುಂದು, ಪ್ರಸ್ತುತ ಸಮಾಜದಲ್ಲಿ ನಡೆಯುವ ಭ್ರಷ್ಟಾಚಾರ, ಭಯೋತ್ಪಾದನೆ, ಅವ್ಯವಹಾರ ಹೀಗೆ ಹಲವು ವಿಷಯಗಳ ಕುರಿತಂತೆ ಕಲಾಕೃತಿಗಳನ್ನು ರಚಿಸುತ್ತಾರೆ. ಡಿ.ಇಡಿ. ವಿದ್ಯಾರ್ಥಿಗಳಿಗೆ ಉತ್ತಮ ಕಲಾಶಿಕ್ಷಣವನ್ನು ಬೋಧನೆ ಮಾಡುವ ಮೂಲಕ ಅತ್ಯುತ್ತಮ ಶಿಕ್ಷಕರಾಗಿ ರೂಪುಗೊಳಿಸುತ್ತಿದ್ದಾರೆ. ಯಾದಗಿರಿ ಜಿಲ್ಲೆಯ ಹಿರಿಯ ಕಲಾವಿದರಲ್ಲಿ ಇವರು ಒಬ್ಬರು. ಸದಾ ಕಲೆಯ ಚಿಂತನೆಯಲ್ಲಿ ಭಾಗಿಯಾಗುವರು.

೭. **ರವಿ ಶೀಲವಂತ:** ಶಂಕ್ರಪ್ಪ ಶೀಲವಂತ ತಾಯಿ ಸೂಗಮ್ಮನವರ ಹಿರಿಯ ಪುತ್ರ, ೧೯೬೬ರಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ದಯಾನಂದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮುಗಿಸಿ ಪ್ರೌಢಶಾಲೆ ಯಾದಗಿರಿಯ ಕೆ.ಆರ್. ನಾಡಗೌಡ ಅವರ ನ್ಯೂ ಕನ್ನಡ ಶಾಲೆಯಲ್ಲಿ ಕಲಿತ ನಂತರ ಪದವಿಪೂರ್ವ ಶಿಕ್ಷಣವನ್ನು ಸರಕಾರಿ ಜ್ಯೂನಿಯರ್ ಕಾಲೇಜಿನಲ್ಲಿ ಅಧ್ಯಯನ ಮಾಡಿದ್ದರು. ತಂದೆ ಶಂಕ್ರಪ್ಪ ಶೀಲವಂತ ಅವರ ಕಲಾಪ್ರಭಾವ ಬೀರಿ ಮುಂದೆ ಕಲಾವಿದನಾಗಿ ಉಳಿಯಬೇಕಾದ ಸಂಗತಿಯಾಯಿತು. ಅಂತೆಯೇ ಕಮರ್ಷಿಯಲ್ ಆರ್ಟ್ ಕಲಾವಿದರಾಗಿ ವೀರಶೈವ ಕಲ್ಯಾಣ ಮಂಟಪದ ಮೇನ್ ರಸ್ತೆಯಲ್ಲಿ ಅಂಗಡಿಯೊಂದನ್ನು ತೆಗೆದು ಜೀವನ ಆರಂಭಿಸಿದ್ದಾರೆ. ಅಂತೆಯೇ ಹಲವಾರು ಕಲಾಕೃತಿಗಳನ್ನು ರಚಿಸುವ ಮೂಲಕ ಹಲವು ಪುರಸ್ಕಾರ ಪಡೆದಿದ್ದಾರೆ. ಯಾದಗಿರಿ ಭಾಗದ ಅನೇಕ ಬಡವಿದ್ಯಾರ್ಥಿಗಳಿಗೆ ಚಿತ್ರಪಟಗಳನ್ನು ಮಾಡಿ ಆಸರೆಯಾಗಿದ್ದಾರೆ.

೮. **ಪ್ರಶಾಂತ ಫಿರಂಗಿ :** ಈ ಕಲಾವಿದ ಶಹಾಪುರ ತಾಲೂಕಿನ ಗೋಗಿ ಗ್ರಾಮದವರು. ೧೦.೦೧.೧೯೮೩ರಲ್ಲಿ ಜನಿಸಿದರು. ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ಸ್, ಬಿ.ಎಫ್.ಎ. ಪದವಿ ಪಡೆದು ಮುಂದೆ ಎಂ.ಎಫ್.ಎ. ಸ್ನಾತಕೋತ್ತರ ಪದವಿ 'ಪ್ರಿಂಟ್ ಮೇಕಿಂಗ್' ವಿಷಯದಲ್ಲಿ ಅಧ್ಯಯನ ಮಾಡಿದ್ದಾರೆ. ಅಧ್ಯಯನದ ಜೊತೆಗೆ ಹಲವಾರು ಕಡೆ ಕಲಾಪ್ರದರ್ಶನಗಳನ್ನು ಮಾಡಿದ್ದಾರೆ. ನಾಗಪುರ, ಫ್ರಾನ್ಸ್, ಬೆಂಗಳೂರು, ದೆಹಲಿ, ಹಂಪಿ, ಗುಲಬರ್ಗಾ, ಕಲ್ಕತ್ತಾ, ಸೇರಿದಂತೆ ಹಲವಾರು ಕಡೆಗಳಲ್ಲಿ ಕಲಾಪ್ರದರ್ಶನ, ಶಿಬಿರ, ಕಾರ್ಯಾಗಾರ, ಏಕವ್ಯಕ್ತಿ ಕಲಾಪ್ರದರ್ಶನ, ಸಮೂಹ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿ ಹಲವಾರು ಪುರಸ್ಕಾರ ಪಡೆದಿದ್ದಾರೆ. ಪ್ರಸ್ತುತ ಇವರು ವಿಶ್ವಭಾರತಿ ವಿಶ್ವವಿದ್ಯಾಲಯದ ಶಾಂತಿನಿಕೇತನ ಕಲಾಶಾಲೆ, ವೆಸ್ಟ್ ಬೆಂಗಾಲ್‌ನಲ್ಲಿ ಕಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅಂತೆಯೇ ನಿರಂತರ ಕಲಾಕೃತಿ ರಚನೆಯಲ್ಲಿ ಮುಂದಾಗಿದ್ದಾರೆ.

೯. **ರೇವಣಸಿದ್ದೇಶ್ವರ ಶೀಲವಂತ:** ದಿವಂಗತ ಶಂಕ್ರಪ್ಪ, ಸ್ವತಹಃ ಚಿತ್ರಕಲಾವಿದರಾಗಿರುವುದರಿಂದ ಇಡೀ ಕುಟುಂಬವೇ ಕಲೆಯಲ್ಲಿ ನಿಸ್ಸೀಮರು, ತಂದೆ ಶಂಕ್ರಪ್ಪ, ತಾಯಿ ಸೂಗಮ್ಮನವರ ಕೊನೆಯ ಮಗ ರೇವಣಸಿದ್ದೇಶ್ವರ ಶೀಲವಂತ, ಇವರ ಅಣ್ಣ ರವಿಶೀಲ್ವಂತ ಕಮರ್ಷಿಯಲ್ ಆರ್ಟಿಸ್ಟ್,

ಮನೆಯ ಕಲಾಪರಿಸರ ರೇವಣಸಿದ್ದೇಶ್ವರ ಅವರ ಮೇಲೆ ಅತ್ಯಂತ ಪರಿಣಾಮಕಾರಿಯಾಗಿ ಬೀರುತ್ತದೆ. ಚಿಕ್ಕವರಿರುವಾಗಲೇ ಚಿತ್ರಕಲೆಯಲ್ಲಿ ಆಸಕ್ತಿಹೊಂದಿ ಅನೇಕ ರೇಖಾಚಿತ್ರಗಳನ್ನು ರಚಿಸುತ್ತಿದ್ದರು. ಪ್ರಾಥಮಿಕ ಶಿಕ್ಷಣ ದಯಾನಂದ ಹಿರಿಯ ಪ್ರಾಥಮಿಕ ಶಾಲೆ, ಎಂ.ಆರ್.ಎಂ. ಶಾಲೆಯಲ್ಲಿ ಪ್ರೌಢಶಿಕ್ಷಣ ಪಡೆದಿದ್ದಾರೆ. ಯಾದಗಿರಿಯ ಕಲಾವಿದರಾದ ಪಂಪಾಪತಿ ಹುಂಡೇಕಾರ ಅವರ ಸಹಾಯದಿಂದ ಗುಲಬರ್ಗಾದ ದಿ.ಐಡಿಯಲ್ ಫೈನ್ ಆರ್ಟ್ಸ್ ಸೊಸಾಯಿಟಿಯಲ್ಲಿ ಪ್ರವೇಶ ಮಾಡಿದರು. ಎರಡು ವರ್ಷಗಳ ಕಲಾಶಿಕ್ಷಣ ಪಡೆದ ನಂತರ ದಾವಣಗೇರೆ ಕಲಾಶಾಲೆಯಲ್ಲಿ ಮೊದಲ ವರ್ಷ ವಾಣಿಜ್ಯ ಕಲಾವಿಭಾಗದಲ್ಲಿ ಅಧ್ಯಯನ ಮುಗಿಸಿದರು. ನಂತರ ಪುನಃ ಪೇಂಟಿಂಗ್ ವಿಭಾಗಕ್ಕೆ ಸೇರಿಕೊಂಡು ಭಾವಚಿತ್ರ, ಪ್ರಕೃತಿ ಚಿತ್ರ, ಟೆರಾಕೂಟಾ. ಹೀಗೆ ಹಲವಾರು ವಿಷಯಗಳಲ್ಲಿ ತಜ್ಞತೆ ಹೊಂದಿ ಗುರುವೃಂದದವರ ಪ್ರೀತಿಗೆ ಕಾರಣರಾದರು. ಸ್ವತಹಃ ದುಡಿಮೆಯಿಂದ ಅಧ್ಯಯನ ಮಾಡಬೇಕಾಗಿರುವುದರಿಂದಾಗಿ ಮುಂದೆ ಕಲ್ಕತ್ತಾದ ಶಾಂತಿನಿಕೇತನ ಕಲಾಶಾಲೆಯಲ್ಲಿ ಕಲಿಯುವ ಬಯಕೆ ತಪ್ಪಿತ್ತು. ಪುನಃ ಮತ್ತೆ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ ಎಂ.ಎಫ್.ಎ ಸ್ನಾತಕೋತ್ತರ ಪದವಿ ಪಡೆದರು. ಕಲೆಯಲ್ಲಿ ಏನಾದರೂ ಸಾಧಿಸಬೇಕು ಅನ್ನುವ ಛಲದಿಂದ ಅತ್ಯುತ್ತಮ ಕಲಾಕೃತಿಗಳನ್ನು ರಚಿಸಿದರು. ಪ್ರಸ್ತುತ ಸಮಕಾಲೀನ ಸಂದರ್ಭದ ಅನ್ವೇಷಣೆಯನ್ನು ತಿಳಿಸುವ ಕಲಾಕೃತಿಗಳು ಅರ್ಥಪೂರ್ಣವಾಗಿರುತ್ತವೆ. ರೇಖೆ, ಬಣ್ಣಗಳ ಸಂಯೋಜನೆ ಗ್ರಹಿಕೆ, ಶೈಲಿ, ತಂತ್ರಗಾರಿಕೆ ಇವರದೇ ಒಂದು ವಿಶೇಷ ಶೈಲಿ, ವರ್ಣಲೇಪನ ಮಾಡುವ ವಿಧಾನವಂತೂ ನೋಡಿಯೇ ಕಲಿಯಬೇಕು. ಅಂತೆಯೇ ಹಲವಾರು ಕಲಾಕೃತಿಗಳು ಮೌಲ್ಯಯುತ ಬೆಲೆಗೆ ಮಾರಾಟವಾಗಿವೆ. ೨೦೧೦ರಲ್ಲಿ ಲಂಡನ್, ೨೦೦೮ ಬೆಂಗಳೂರು, ೨೦೦೪ ಔರಂಗಬಾದ್ ೨೦೦೫ರಲ್ಲಿ ಹೈದ್ರಾಬಾದ್ ೨೦೦೭, ಬೆಂಗಳೂರು, ೨೦೦೭ ಗೋವಾ, ದಾವಣಗೇರೆ ಸೇರಿದಂತೆ ಹಲವೆಡೆ ಸಮೂಹ ಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ. ೨೦೦೧ರಲ್ಲಿ ದಾವಣಗೆರೆ, ೨೦೦೪ರಲ್ಲಿ ಉಡುಪಿ ಸ್ಥಳಗಳಲ್ಲಿ ಏಕವ್ಯಕ್ತಿ ಕಲಾಪ್ರದರ್ಶನ ಏರ್ಪಡಿಸಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ನಡೆದ ಶಿಬಿರಗಳಲ್ಲಿ, ಬಾಗಲಕೋಟೆ, ದಾವಣಗೇರಾ, ಬೀದರ್, ಬೆಂಗಳೂರು, ಹಿಂದ್‌ಪುರ, ೭ನೇ ಕರ್ನಾಟಕ ಕಲಾಮೇಳ ಪೇಂಟಿಂಗ್ ಶಿಬಿರ ಬೆಂಗಳೂರು, ೨೦೦೪ರಲ್ಲಿ ದಾವಣಗೆರೆ ೨೦೦೮ ರಾಯಚೂರು, ೨೦೦೯-೨೦೧೦ ಗುಲಬರ್ಗಾದಲ್ಲಿ ನಡೆದ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ನಿರಂತರ ಕಲೆಯಲ್ಲಿ ಶ್ರಮಿಸಿದ ರೇವಣಸಿದ್ದೇಶ್ವರ ಕಲಾವಿದನಿಗೆ ೨೦೦೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ೨೦೦೮ ಕ್ಯಾಮಲೀನ್ ಅವಾರ್ಡ್, ೨೦೦೮ ಎಸ್.ಜೆ.ಸಿ.ಸಿ. ನಾಗಪುರ ಅವಾರ್ಡ್ ೨೦೦೧, ಚಿನ್ನದ ಪದಕ, ಕುವೆಂಪು ವಿಶ್ವವಿದ್ಯಾಲಯ ಶಿವಮೊಗ್ಗ, ೨೦೦೧, ಬೆಳ್ಳಿಪದಕ, ಚಿತ್ರೋತ್ಸವ ಪ್ರಶಸ್ತಿ ದಾವಣಗೇರೆ ೨೦೦೨-೨೦೦೪, ಕಲಾಮಹೋತ್ಸವ ಪ್ರಶಸ್ತಿ ಗುಲ್ಬರ್ಗಾ ಪುನಾ ಲೋಕಮಾನ್ಯ ತಿಲಕ ಪ್ರಶಸ್ತಿ, ಭಾರತ ಸರಕಾರದ ಮಾನವ ಸಂಪನ್ಮೂಲದ ಅಡಿಯಲ್ಲಿ ಸ್ಕಾಲರ್‌ಶಿಫ್

ಕೂಡ ಪಡೆದಿದ್ದಾರೆ. ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರ ಪಡೆದ ಶೀಲವಂತ ಅವರು ದಾವಣಗೆರೆ ಕಲಾಶಾಲೆಯಲ್ಲಿ ಎರಡು ವರ್ಷ ಕಲಾಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ ಬೆಂಗಳೂರಿನ 'ಆರ್ಟ್‌ಬೀಟ್' ಸಂಸ್ಥೆಯನ್ನು ನಿರ್ಮಿಸಿ ಸ್ಟುಡಿಯೋದಲ್ಲಿ ಕಲಾವಿದರಾಗಿ ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ಸತತ ಕಲಾ ಅಭ್ಯಾಸ ಮಾಡುವ ಶೀಲವಂತ ಅವರು ಮುಂದೆ ಪ್ರಬುದ್ಧ ಕಲಾವಿದರಾಗಿ ಬೆಳೆಯುವ ಎಲ್ಲಾ ಲಕ್ಷಣಗಳನ್ನು ಹೊಂದಿದ್ದಾರೆ. ಯಾದಗಿರಿ ಜಿಲ್ಲೆಯಲ್ಲಿ ಶೀಲವಂತ ಮನೆತನದ ಕಲಾವಿದರನ್ನು ಮರೆಯುವಂತಿಲ್ಲ.

೧೦. **ಪಂಪಾಪತಿ ಹುಂಡೇಕಾರ:** ಈ ಕಲಾವಿದ ತಂದೆ ಸೂಗಣ್ಣ ಹುಂಡೆಕಾರ, ತಾಯಿ ಬಸಮ್ಮನವರ ಮಗನಾಗಿ ೧೯೫೮ರಲ್ಲಿ ಜನಿಸಿದರು. ಮೂಲತಃ ಯಾದಗಿರಿಯವರೇ, ಚಿತ್ರಕಲೆಯಲ್ಲಿ ಗುಲಬರ್ಗಾದ ದಿ. ಐಡಿಯಲ್ ಫೈನ್ ಆರ್ಟ್ ಸೋಸಾಯಿಟಿಯಲ್ಲಿ ಎಂ.ಎಫ್.ಎ. ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಜೊತೆಗೆ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ನಿಸರ್ಗ ಚಿತ್ರ, ರೇಖಾಚಿತ್ರಗಳನ್ನು ಹೆಚ್ಚು ಮಾಡುತ್ತಾರೆ. ಹಾಗೆಯೇ ಕ್ರೀಯೆಟಿವ್ ಪೇಂಟಿಂಗ್‌ಗಳನ್ನು ಕೂಡ ಮಾಡುತ್ತಾರೆ. ಹಲವು ಕಡೆ ಏಕವ್ಯಕ್ತಿ ಮತ್ತು ಸಮೂಹ ಕಲಾಪ್ರದರ್ಶನ ಮಾಡಿದ್ದಾರೆ. ಕಲಾಶಿಬಿರಗಳಲ್ಲಿ ಭಾಗವಹಿಸುವ ಮೂಲಕ ಅನೇಕ ಕಡೆಗಳಲ್ಲಿ ಪುರಸ್ಕಾರ ಪಡೆದಿದ್ದಾರೆ. ಪ್ರಸ್ತುತ ಅಬ್ಬೆತುಮಕೂರಿನ ಬಿ.ಇಡಿ ಕಾಲೇಜಿನಲ್ಲಿ ಕಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಜೊತೆಗೆ ಕಲಾಕೃತಿಗಳನ್ನು ನಿರಂತರ ರಚಿಸುತ್ತಿದ್ದಾರೆ.

೧೧. **ಎಸ್.ಡಿ. ಪಾಟೀಲ:** ಈ ಕಲಾವಿದ ತಂದೆ: ದೇವಪ್ಪಗೌಡ ಪ ಆಟೀಲ, ತಾಯಿ: ಪಾರ್ವತಿಬಾಯಿ ಅವರ ಮಗನಾಗಿ ೧೯೫೬ರಲ್ಲಿ ಬಿಜಾಪುರ ಜಿಲ್ಲೆಯ ಬಸವನಬಾಗೇವಾಡಿಯಲ್ಲಿ ಜನಿಸಿದರು. ಮುಂದೆ ಸರಕಾರಿ ನೌಕರಿಗಾಗಿ ಯಾದಗಿರಿಗೆ ಬಂದು ನೆಲೆಸಿದರು. ಯಾದಗಿರಿಯವರಾದ ಎಸ್.ಡಿ.ಪಾಟೀಲ್ ಅವರು ಹಿರಿಯ ಕಲಾವಿದರು. ನ್ಯೂ ಕನ್ನಡ ಪ್ರೌಢಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಇವರು ಗದಗನಲ್ಲಿರುವ ಟಿ.ಪಿ. ಅಕ್ಕಿಯವರ ವಿಜಯಕಲಾ ಮಂದಿರ ಕಲಾಶಾಲೆಯಲ್ಲಿ ಎ.ಎಮ್.ಜಿ.ಡಿ, ಚಿತ್ರಕಲಾ ಶಿಕ್ಷಣ ಪಡೆದಿದ್ದಾರೆ. ಮಕ್ಕಳಿಗೆ ಉತ್ತಮ ಕಲಾ ಬೋಧನೆ ಮಾಡುವುದರ ಮೂಲಕ ಅನೇಕ ವಿದ್ಯಾರ್ಥಿಗಳನ್ನು ಕಲಾವಿದರನ್ನಾಗಿ ರೂಪಿಸಿದ್ದಾರೆ. ತಾವು ಕೂಡ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಖ್ಯಾತ ಕಲಾವಿದರಾದ ಎಸ್.ಎಂ.ಪಂಡಿತರ ಕಲಾಕೃತಿಗಳಂತೆ ಇವರ ಕಲಾಕೃತಿಗಳು ಭಾಸವಾಗುತ್ತವೆ. ಬಸವೇಶ್ವರ, ಅಕ್ಕಮಹಾದೇವಿ, ವಚನಾದಿ ಶರಣರ ಮತ್ತು ಗಣ್ಯರ ಭಾವಚಿತ್ರಗಳನ್ನು, ನಿಸರ್ಗಚಿತ್ರಗಳು ಮತ್ತು ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವೆಲ್ಲವೂ ನೈಜತೆಯಿಂದ ಕೂಡಿವೆ. ನಿರಂತರ ಕಲಾಸಾಧನೆಯ ಕುರಿತು ಎಸ್.ಡಿ. ಪಾಟೀಲರಿಗೆ ಹಲವು ಪುರಸ್ಕಾರ ಲಭಿಸಿವೆ. ಅಂತೆಯೇ ಹಂಪಿ ಕನ್ನಡ ವಿಶ್ವವಿದ್ಯಾಲಯ ದೃಶ್ಯಕಲಾ ವಿಭಾಗಕ್ಕೆ

ಇವರ ಕಲೆ ಮತ್ತು ಬದುಕು ಒಂದು ಅಧ್ಯಯನ ಪ್ರಬಂಧವನ್ನು ಗಾಯತ್ರಿ ಮಂತ ಅವರು ಬರೆದಿದ್ದಾರೆ.

**೧೨. ರಾಕೇಶ:** ಈ ಕಲಾವಿದ ಶಹಾಪುರ ತಾಲೂಕಿನ ಹಿರೆವಡಗೇರಾ ವಲಯದ ಹಿರೇನೂರು ಗ್ರಾಮದವರು, ಗುಲ್ಬರ್ಗಾದ ದಿ.ಐಡಿಯಲ್ ಫೈನ್ ಆರ್ಟ್ ಕಾಲೇಜಿನಲ್ಲಿ ಅಪ್ಲೈಡ್ ಆರ್ಟ್ ಪದವಿ ಪಡೆದಿದ್ದಾರೆ. ಪ್ರಸ್ತುತ ಯಾದಗಿರಿ ನಗರದಲ್ಲಿ ಶ್ರೀ ಮಹಾದೇವಪ್ಪ ಹಿರೇನೂರು ಕಾಲೇಜ್ ಆಫ್ ವಿಜುವಲ್ ಆರ್ಟ್, ಕಲಾಶಾಲೆಯನ್ನು ರೂಪಿಸಿ ತೆಗೆದು ಬಿ.ವಿ.ಎ. ಪದವಿಗಳನ್ನು ಕಲಿಯಲು ವಿದ್ಯಾರ್ಥಿಗಳಿಗೆ ಅನೂಕೂಲ ಮಾಡಿದ್ದಾರೆ. ಪೇಟಿಂಗ್, ಅಪ್ಲೈಡ್ ಆರ್ಟ್, ಮ್ಯೂರಲ್ಸ್, ಫೋಟೋಗ್ರಾಫಿ ಮತ್ತು ಶಿಲ್ಪಕಲೆ ತರಗತಿಗಳನ್ನು ಆರಂಭಮಾಡಿದ್ದಾರೆ. ಚಿಕ್ಕವಯಸ್ಸಿನಲ್ಲಿಯೇ ಕಲಾಶಾಲೆಯನ್ನು ಕಟ್ಟಿದ ರಾಕೇಶ್ ಅವರು ಯಾದಗಿರಿ ಭಾಗದ ಕಲಾಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ. ಹಾಗೆಯೇ ಅವರು ಕೂಡಾ ಹಲವಾರು ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ಮತ್ತು ಹಲವು ಕಲಾಶಿಬಿರಗಳನ್ನು ಮಾಡುವ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

**೧೩. ಯಂಕಪ್ಪ ಆರ್.ನಾಟೇಕಾರ:** ತಂದೆ ರಂಗಪ್ಪ ತಾಯಿ ನೀಲಮ್ಮ ಅವರ ಮಗನಾಗಿ ಜನಿಸಿದರುಲ ಶಹಾಪುರ ತಾಲೂಕಿನ ಕೊಂಕಲ್ ಗ್ರಾಮದ ಈ ಕಲಾವಿದ. ಚಿಕ್ಕವಯಸ್ಸಿನಲ್ಲಿಯೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ ಯಂಕಪ್ಪನವರು ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಇನ್ಸ್‌ಟ್ಯೂಟ್‌ನಲ್ಲಿ ಮತ್ತು ಎಂ.ಎಂ.ಕೆ. ಕಾಲೇಜಿನಲ್ಲಿ ಬಿ.ವಿ.ಎ. ಚಿತ್ರಕಲೆ ಪದವಿ ಪಡೆದಿದ್ದಾನೆ. ನಿರಂತರ ಕಲಾಕೃತಿಗಳನ್ನು ರಚಿಸುವುದರ ಮೂಲಕ ಹಲವಾರು ಪುರಸ್ಕಾರ ಪಡೆದುಕೊಂಡಿದ್ದಾನೆ. ಮುಂದೆ ಪ್ರಭುದ್ಧ ಚಿತ್ರಕಲಾವಿದನಾಗುವುದರಲ್ಲಿ ಎರಡು ಮಾತಿಲ್ಲ.

**೧೪. ಅಮೀನರೆಡ್ಡಿ:** ಈ ಕಲಾವಿದ ನರಸಪ್ಪ, ತಾಯಿ ಮರೆಮ್ಮ ಅವರ ಮಗನಾಗಿ ೦೧.೦೬.೧೯೮೮ರಂದು ಯಾದಗಿರಿ ತಾಲೂಕಿನ ಮುನಗಲ್ ಗ್ರಾಮದಲ್ಲಿ ಜನಿಸಿದರು. ಮುಂದೆ ಕಲಾಶಿಕ್ಷಣವನ್ನು ಐನಾಪುರ ಗ್ರಾಮದವರು ಗುಲಬರ್ಗಾದ ದಿ ಎಡಿಯಲ್ ಫೈನ್ ಆರ್ಟ್ ಕಾಲೇಜಿನಲ್ಲಿ ಬಿ.ವಿ.ಎ. ಚಿತ್ರಕಲಾ ಪದವಿ ಪಡೆದಿದ್ದಾನೆ. ನಿಸರ್ಗಚಿತ್ರ ಪೇಂಟಿಂಗ್ಸ್‌ಗಳನ್ನು ಮಾಡುವುದರ ಮೂಲಕ ಕಲೆಯ ಹಾದಿಯಲ್ಲಿ ಸಾಗುತ್ತಿದ್ದಾನೆ. ಉತ್ತಮ ಪ್ರತಿಭಾವಂತ ಕಲಾವಿದ.

**೧೫. ಎನ್. ವೆಂಕಟೇಶ:** ಈ ಯುವ ಕಲಾವಿದ ತಂದೆ: ದೇವೇಂದ್ರಪ್ಪ ತಾಯಿ ಬಾಲಮ್ಮನವರ ಮಗನಾಗಿ ೨೨.೦೭.೧೯೭೯ರಲ್ಲಿ ಜನಿಸಿದರು. ಯಾದಗಿರಿ ಜಿಲ್ಲೆಯ ಸೈದಾಪುರ ವಲಯದಲ್ಲಿ ಬರುವ ಕಡೆಚೂರು ಗ್ರಾಮದವರು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ತಮ್ಮೂರಿನಲ್ಲಿ ಕಲಿತಿದ್ದಾರೆ. ಚಿಕ್ಕವನಿರುವಾಗಲೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿರುವುದರಿಂದ ಮೆಟ್ರಿಕ್ ನಂತರ ಕಲಾಶಿಕ್ಷಣವನ್ನು ರಾಯಚೂರಿನ ಗುರುಕುಲ ಕಲಾಶಾಲೆಯಲ್ಲಿ ಕಲಿಯುತ್ತಾರೆ. ಮುಂದೆ ಎ.ಟಿಸಿ, (ಆರ್ಟ್ ಟೀಚರ್

ಟ್ರೇನಿಂಗ್) ಪ್ರಾಥಮಿಕ ಶಾಲಾ ಚಿತ್ರಕಲಾ ಶಿಕ್ಷಕರ ತರಬೇತಿಯನ್ನು ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲೂಕಿನ ಬನಶಂಕರಿಯಲ್ಲಿರುವ ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದಲ್ಲಿ ಕಲಿತರು ನಂತರ ಬಿ.ವಿ.ಎ. ಪದವಿಯನ್ನು ಅಲ್ಲೇ ಮುಗಿಸಿ, ಎಂ.ಎಫ್.ಎ. ಸ್ನಾತಕೋತ್ತರ ಪದವಿ ಗುಲಬರ್ಗಾದ ಡಾ.ವಿ.ಜಿ. ಅಂದಾನಿಯವರ ಎಂ.ಎಂ.ಕೆ. ಕಾಲೇಜಿನಲ್ಲಿ ಕಲಿತರು. ಅಧ್ಯಯನ ಜೊತೆ ಜೊತೆಗೆ ಹಲವಾರು ಕಲಾಕೃತಿಗಳನ್ನು ರಚಿಸಿ ಅನೇಕ ಕಡೆ ಏಕವ್ಯಕ್ತಿ ಮತ್ತು ಸಮೂಹ ಕಲಾಪ್ರದರ್ಶನಗಳನ್ನು ಮಾಡಿ ಹಲವು ಪ್ರಶಸ್ತಿ ಪುರಸ್ಕಾರ ಪಡೆದುಕೊಂಡಿದ್ದಾರೆ. ಹಂಪಿ, ಬಾದಾಮಿ ಬನಶಂಕರಿ, ಐಹೊಳೆ, ಪಟ್ಟದಕಲ್ಲು ಸೇರಿದಂತೆ ಹಲವೆಡೆ ತಿರುಗಾಡಿ ನಿಸರ್ಗ ಚಿತ್ರಕಲಾಕೃತಿಗಳನ್ನು ರಚಿಸಿದ್ದಾರೆ. ಜಲವರ್ಣ ಪೇಪರ್‌ಗೆ ಹಾಕುವ (ಲೇಪಿಸುವ) ವಿಧಾನವಂತೂ ಅವರನ್ನೇ ನೋಡಿ ಕಲಿಯಬೇಕು ಅಂತ ಅನಿಸುತ್ತದೆ. ಭಾವಚಿತ್ರ, ರೇಖಾಚಿತ್ರ, ವ್ಯಕ್ತಿ ಪೂರ್ಣಚಿತ್ರ ಎಲ್ಲವೂ ನೈಜಶೈಲಿಯಲ್ಲಿ ಚಿತ್ರಿಸುತ್ತಾರೆ. ಮುಂದೆ ಇವರೂ ನಾಡಿನ ಖ್ಯಾತ ಕಲಾವಿದರೆನಿಸಿಕೊಳ್ಳುವ ಎಲ್ಲಾ ಅರ್ಹತೆಗಳನ್ನು ಹೊಂದಿದ್ದಾರೆ.

**೧೬. ತಾರಾಸಿಂಗ್ ಚವ್ಹಾಣ:** ಯಾದಗಿರಿಗೆ ಹತ್ತಿರವಾಗುವ ಯಾಗಾಪುರ ತಾಂಡಾದವರಾದ ತಾರಾಸಿಂಗ್ ಚವ್ಹಾಣ ಅವರು ಗುಲಬರ್ಗಾದ ದಿ. ಐಡಿಯಲ್ ಫೈನ್ ಆರ್ಟ್ ಸೋಸಾಯಿಟಿಯಲ್ಲಿ ಎ.ಎಮ್.ಜಿ.ಡಿ ಚಿತ್ರಕಲಾ ಪದವಿ ಪಡೆದಿದ್ದಾರೆ. ಅಂತೆಯೇ ಹಲವಾರು ಕಲಾಕೃತಿಗಳನ್ನು ರಚಿಸಿ ಹಲವೆಡೆ ಪ್ರದರ್ಶನ ಮಾಡಿದ್ದಾರೆ. ಯಾದಗಿರಿ ಬ್ಲೂಸ್ಟಾರ್ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ, ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದ್ದಾರೆ. ರೇಖಾಚಿತ್ರ, ನಿಸರ್ಗಚಿತ್ರ, ಕಾಂಪೋಜಿಸೆನ್, ಸ್ಥಿರಭಾವಚಿತ್ರ, ವ್ಯಕ್ತಿಚಿತ್ರ, ಜಲವರ್ಣ, ತೈಲವರ್ಣ, ಪೋಸ್ಟರ್ ವರ್ಣ, ಪೆನ್ಸಿಲ್, ಹೀಗೆ ಯಾವುದೇ ಮಾಧ್ಯಮ ಕೊಟ್ಟರೂ ಸಹ ಅತ್ಯುತ್ತಮ ಕಲಾಕೃತಿಗಳನ್ನು ರಚಿಸಿದ್ದಾರೆ. ಪ್ರಸ್ತುತ ಈ ಕಲಾವಿದ ಬೆಂಗಳೂರಿನಲ್ಲಿ ಕಲಾಕೃತಿ ರಚಿಸುವ ಮೂಲಕ ಜೀವನ ನಡೆಸಿದ್ದಾರೆ.

**೧೭. ಗಾಯತ್ರಿ ಮಂತ:** ಯಾದಗಿರಿ ಜಿಲ್ಲೆಯ ಗುರುಮಿಠಕಲ್‌ಗೆ ಹತ್ತಿರವಿರುವ ಚಂಡ್ರಕಿ ಗ್ರಾಮದಲ್ಲಿ ೧೭.೬.೧೯೯೧ರಲ್ಲಿ ಜನಿಸಿದರು. ತಂದೆ. ವೆಂಕಟೇಶ ಮಂತ ತಾಯಿ ಪದ್ಮಾವತಿ, ಈ ಯುವ ಕಲಾವಿದೆ ಇಲಕಲ್‌ನ ವಿಜಯ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಬಿ.ವಿ.ಎ. ಚಿತ್ರಕಲಾ ಪದವಿ ಪಡೆದಿದ್ದಾರೆ. ಮುಂದೆ ೨೦೧೨–೧೩ನೇ ಸಾಲಿನಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಎಂ.ವಿ.ಎ. ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಚಿಕ್ಕವಯಸ್ಸಿನಲ್ಲಿಯೇ ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿರುವುದರಿಂದ ಮುಂದೆ ತಮ್ಮ ಬದುಕೇ ಕಲಾಕ್ಷೇತ್ರದಲ್ಲಿ ಮೀಸಲಾಗಿಡಲು ಮುಂದಾಗಿರುವ ಗಾಯತ್ರಿ ಅವರು ಸೃಜನಶೀಲತೆಯನ್ನು ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ, ರೋಧನೆ, ಹೀಗೆ ಸ್ತ್ರೀ ಸಂವೇದನಾ ಭಾವನೆಗಳನ್ನು ಸಾರುವ ರೀತಿಯ

ಕಲಾಕೃತಿಗಳನ್ನು ರಚಿಸಿದ್ದಾರೆ. ಬೆಂಗಳೂರು, ಬದಾಮಿ, ಬಾಗಲಕೋಟೆ, ಇಳಕಲ್ ಸೇರಿದಂತೆ ಹಲವೆಡೆ ಸಮೂಹ ಕಲಾಪ್ರದರ್ಶನಗಳನ್ನು ಮಾಡಿ ಹಲವು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ. ಅನೇಕ ಕಡೆ ಕಲಾಶಿಬಿರ, ಕಾರ್ಯಗಾರಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಯಾದಗಿರಿ ಜಿಲ್ಲೆಯ ಯುವ ಚಿತ್ರಕಲಾವಿದೆಯಾಗಿ ಪ್ರತಿನಿಧಿಸುತ್ತಿದ್ದಾರೆ.

೧೮. **ಶಂಕರಪ್ಪ ಬದ್ದೇಪಲ್ಲಿ:** ಈ ಕಲಾವಿದ ತಂದೆ: ಚಂದ್ರಾಮಣ್ಣ ತಾಯಿ ನರಸಮ್ಮರ ಮಗನಾಗಿ ೨೪.೦೭.೧೯೮೫ರಲ್ಲಿ ಬದ್ದೆಪಲ್ಲಿಯಲ್ಲಿ ಜನಿಸಿದರು. ಸೈದಾಪುರ ವಲಯದಲ್ಲಿ ಬರುವಂತಹ ಬದ್ದೆಪಲ್ಲಿ ಗ್ರಾಮದವರು. ಯಾದಗಿರಿಯ ಬ್ಲೂಸ್ಟಾರ್ ಚಿತ್ರಕಲಾ ಮಹಾವಿದ್ಯಾಲಯ, ಬನಶಂಕರಿ ವಿಭಾಗದಲ್ಲಿ, ಗದಗಿನ ಜೆ.ಎನ್. ಚಿತ್ರಕಲಾ ಮಹಾವಿದ್ಯಾಲಯ, ಗುಲಬರ್ಗಾದ ದಿ.ಐಡಿಯಲ್ ಫೈನ್ ಆರ್ಟ್ ಕಾಲೇಜಿನಲ್ಲಿ ಐದನೇ ವರ್ಷದ ವಿಶೇಷ ಪರಿಣಿತಿ ಚಿತ್ರಕಲೆ ಪದವಿ ಪಡೆದು ಪ್ರಸ್ತುತ ಸೈದಾಪುರದಲ್ಲಿರುವ ವಿದ್ಯಾವರ್ಧಕ ಪ್ರೌಢಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಜೊತೆಗೆ ಹಲವಾರು ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ಮತ್ತು ಅನೇಕ ಸನ್ಮಾನಗಳಿಗೆ ಪಾತ್ರರಾಗಿದ್ದಾರೆ.

ರುದ್ರುಭಾಸ್ಕರ, ಬಸವರಾಜ ಯಾದವ, ದೀಪಕ್, ಬಸವರಾಜ ಕೊನೇರ, ರಾಜೇಂದ್ರ ಪ್ರಸಾದ್, ತಿಪ್ಪಣ ನಾಗನಟಗಿ, ಅಬ್ದುಲ್ ಬಾಷಾ, ಸಾಬರೆಡ್ಡಿ, ಬಸವರಾಜ ಎಸ್. ಕಲೆಗಾರ, ಬಸವರಾಜ ಸಾವೂರ, ಜಗದೀಶ್ ನಾಲವಾರ, ಕುಪೇಂದ್ರ, ಶ್ರೀನಾಥ, ಹೀಗೆ ಅನೇಕ ಯುವ ಕಲಾವಿದರು ಯಾದಗಿರಿ ಜಿಲ್ಲೆಯಲ್ಲಿ ನೆಲೆಸಿದ್ದಾರೆ. ಅವರು ರಚಿಸುವ ಕಲಾಕೃತಿಗಳಂತೂ ಸಮಕಾಲೀನ ಸಂದರ್ಭದ ಹಲವು ವಿಷಯಗಳನ್ನು ತಿಳಿಸುತ್ತವೆ. ಮತ್ತು ಹಿರಿಯ ಕಲಾವಿದರ ಕಲಾಕೃತಿಗಳು ಕೂಡಾ ಮೌಲ್ಯಯುತವಾದ ಸಂದೇಶವನ್ನು ನೀಡುವ ಮೂಲಕ ಚಿತ್ರಕಲಾ ಕ್ಷೇತ್ರವನ್ನು ಬೆಳಗುತ್ತಿವೆ. ಚಿತ್ರಕಲಾ ಕ್ಷೇತ್ರಕ್ಕೆ ಯಾದಗಿರಿ ಜಿಲ್ಲೆಯ ಕೊಡುಗೆ ಅಮೂಲ್ಯವಾದದ್ದು, ಮರೆಯುವಂತಿಲ್ಲ.

**ಟಿಪ್ಪಣಿಗಳು**


೧. ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಅ. ಸುಂದರ, ೧೯೯೪.

೨. ಕರ್ನಾಟಕ ಜನಪದ ಚಿತ್ರಕಲೆ, ಡಾ. ಎಸ್.ಸಿ. ಪಾಟೀಲ, ೧೯೯೩.

೩. ಸುರಪುರ ಚಿತ್ರಕಲೆ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯.

೪. ಚಿತ್ರಕಲಾವಿದ ಸಂಗಣ್ಣ ಎಂ. ದೋರನಹಳ್ಳಿ, ಬಸವರಾಜ ಎಸ್. ಕಲೆಗಾರ, ೨೦೧೩.

೫. ದಖನಿ ಚಿತ್ರಕಲೆ, ಎಸ್.ಕೆ. ಅರುಣಿ, ೨೦೦೧.

೬. ಸಗರಾದ್ರಿ (ಸ್ಮರಣಸಂಚಿಕೆ) ಸಂಪಾದಕರು.

೭. ಬಾನಯ್ಯ ಗರುಡಾದ್ರಿ, ಬಸವರಾಜ ಉಪ್ಪಿನ್ ೧೯೯೫.

೮. ಎಂ.ಟಿ. ಭೋಪಲೆ, ಡಿ.ಎನ್. ಅಕ್ಕಿ, ೧೯೯೯.

೯. ಮಹಾದೇವ ಬಾಬಾ ಮೆಡೋಸ್ ಟೇಲರ್, ದೇವು ಪತ್ತಾರ, ೨೦೦೯.

೧೦. ಯಾದಗಿರಿಸಿರಿ, ಬಸನಗೌಡ ಎಸ್. ಹುಣಸಗಿ, ೨೦೧೧.

೧೧. ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, ಡಾ. ಶೈಲಜಾ ಬಾಗೋಡಿ, ೨೦೧೨.

೧೨. ಧವಳ, ಸಂಪಾದಕರು, ಡಾ. ಅಬ್ದುಲ್ ಕರೀಂ & ಡಾ. ಎಸ್.ಕೆ.ಅರುಣಿ, ೨೦೧೧.

೧೩. ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ, ಕೆ.ವಿ. ಕಾಳೆ, ೨೦೦೦.

೧೪. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಒಂದು ಅಧ್ಯಯನ, ಡಾ. ಯಾದಪ್ಪ ಪರದೇಶಿ, ೨೦೦೧.

೧೫. ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ – ಒಂದು ಅಧ್ಯಯನ, ಡಾ. ಯಾದಪ್ಪ ಪರದೇಶಿ, ೨೦೦೧.

೧೬. ಹೈದ್ರಾಬಾದ್ ಕರ್ನಾಟಕದ ಬಟ್ಟೆ ಮಾಧ್ಯಮದ ಚಿತ್ರಕಲೆ, ಡಾ. ಕಾಮಾಕ್ಷಿ ಸೊಪ್ಪಣ್ಣ, ೨೦೧೦.

೧೭. ಹೈದ್ರಾಬಾದ್ ಕರ್ನಾಟಕದ ರಂಗೋಲಿ ಕಲೆಯ ಸಾಂಸ್ಕೃತಿಕ ಅಧ್ಯಯನ, ಡಾ. ವಿಶ್ವೇಶ್ವರಿ ತಿವಾರಿ, ೨೦೦೫.

೧೮. ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ, ಡಾ. ಎನ್.ಎಂ. ಅಂಗಡಿ, ೨೦೧೦.

೧೯. ಹೈದ್ರಾಬಾದ್ ಕರ್ನಾಟಕದ ಸಾಂಸ್ಕೃತಿಕ ವಿಷಯಕೋಶ–೨, ಡಾ. ಎಸ್.ಸಿ. ಪಾಟೀಲ, ೨೦೧೨.

೨೦. ಚಿತ್ರಕಲಾವಿದ ಎಸ್.ಡಿ.ಪಾಟೀಲ, (ಅಪ್ರಕಟಿತ ಸಂಪ್ರಬಂಧ) ಗಾಯಿತ್ರಿ ಮಂತ್, ೨೦೧೩.

## ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ ಕೃತಿಗಳು









ಶಹಾಪೂರ ತಾಲೂಕಿನ ಸಗರ ಗ್ರಾಮದ
ಕಲಾವಿದ ಎಂ.ಟಿ. ಭೋಪಲೆ ಮತ್ತು ಅವರ ಕಲಾಕೃತಿಗಳು







ಮುಂಬೈನ ಸರ್ ಜೆ. ಜೆ. ಕಲಾಶಾಲೆಯ ಫೆಲೋಶಿಪ್ ದೊರೆತಾಗಿನ ಚಿತ್ರ
ಕುಳಿತವರಲ್ಲಿ ಎಡದಿಂದ ಬಲಕ್ಕೆ ಎರಡನೆಯವರು ಭೋಪಲೆ



ಕಲಾವಿದ ಡಿ. ಎನ್. ಅಕ್ಕಿ
ಮತ್ತು ಅವರ ಕಲಾಕೃತಿ





ಕಲಾವಿದ ಡಿ. ಎನ್. ಅಕ್ಕಿಯವರಿಗೆ
ಗೌರವ ಸನ್ಮಾನ





ಕಲಾವಿದ ಸಂಗಣ್ಣ ಎಂ. ದೋರಣಹಳ್ಳಿ
ಮತ್ತು ಅವರ ಕಲಾಕೃತಿಗಳು









ಕಲಾವಿದ ಎಸ್. ಡಿ. ಪಾಟೀಲ
ಮತ್ತು ಅವರ ಕಲಾಕೃತಿಗಳು





ಕಲಾವಿದ ಕೆ.ಕೆ. ಹೆಬ್ಬಾರರೊಂದಿಗೆ
ಕಲಾವಿದರು







ಕಲಾವಿದ ಪ್ರಶಾಂತ ಫಿರಂಗಿ
ಮತ್ತು ಅವರ ಕಲಾಕೃತಿಗಳು







ಕಲಾವಿದ ರೇವಣ ಸಿದ್ದೇಶ್ವರ
ಮತ್ತು ಅವರ ಕಲಾಕೃತಿಗಳು







ಕಲಾವಿದ ಬಸವರಾಜ ಎಸ್. ಕಲೆಗಾರರು ಮತ್ತು ಅವರ ಕಲಾಕೃತಿಗಳು










ಕಲಾವಿದ ಯಂಕಪ್ಪ ಆರ್ ನಾಟೆಕಾರ ಮತ್ತು ಅವರ ಕಲಾಕೃತಿಗಳು





# ಅಧ್ಯಾಯ ೯

# ಸಮಾರೋಪ

ನೂತನ ಯಾದಗಿರಿ ಜಿಲ್ಲೆ ಚಿತ್ರಕಲೆಯ ಕುರಿತು ಸಮಗ್ರ ಅಧ್ಯಯನ ಮಾಡುತ್ತ ಹೊರಟಾಗ ಇಲ್ಲಿ ಅಭಿವ್ಯಕ್ತಿಕೊಂಡ ಚಿತ್ರಕಲೆಯ ಹಲವು ವಿಧಗಳನ್ನು ವಿವರಿಸಲಾಗಿದೆ. ಆದಿಮಾನವನ ಆಂತರಿಕ ಸೌಂದರ್ಯಾನಂದ ಮತ್ತು ಬದುಕಿನ ತುಮುಲಗಳು ರೇಖೆ-ವರ್ಣಚಿತ್ರಗಳ ಮೂಲಕ ಹಂಚಿಕೊಂಡ ರೀತಿ-ನೀತಿ, ಗುಹೆ, ಹೆಬ್ಬಂಡೆಗಳಲ್ಲಿ ಸಾಕ್ಷಿಕರಿಸಿದ್ದಾರೆ. ಮುಂದುವರೆದಂತೆ ರಾಜಾಶ್ರಯ ನೆಲೆಯಲ್ಲಿ ರಕ್ಷಣೆ, ಪ್ರೋತ್ಸಾಹ ಪಡೆದು ಹುಟ್ಟಿಕೊಂಡ ಹಲವು ಕಲಾಶೈಲಿ ಮನೆತನಗಳ ಕಲಾಕೃತಿಗಳನ್ನು ತಾತ್ವಿಕ ನೆಲೆಯಲ್ಲಿ ಚರ್ಚಿಸಲಾಗಿದೆ. ಸಾಂಪ್ರದಾಯಿಕ ಮತ್ತು ಸಮಕಾಲೀನತೆಯ ಕಲೆಯ ವಿಚಾರಗಳ ಮೂಲಕ ಯಾದಗಿರಿ ಜಿಲ್ಲೆಯ ಕಲೆಯನ್ನು ಅನೇಕ ಮಾಧ್ಯಮದಲ್ಲಿ ವಿಶ್ಲೇಷಣೆಯಾಗಿದೆ. ಹೀಗೆ ಹಲವು ವಿವಿಧ ಮುಖಗಳಲ್ಲಿ ಕಾಣಿಸಿಕೊಳ್ಳುವ ಚಿತ್ರಕಲೆ, ಯಾದಗಿರಿ ಜಿಲ್ಲೆಯಲ್ಲಿ ತನ್ನ ಮೂಲ ನೆಲೆಯಾಗಿಸಿಕೊಂಡು ಕಲಾಕ್ಷೇತ್ರಕ್ಕೆ ತನ್ನದೇಯಾದ ವಿಶೇಷ ಕೊಡುಗೆ ನೀಡಿರುವುದು ಮರೆಯುವಂತಿಲ್ಲ.

ಕರ್ನಾಟಕದ ಹಲವು ಜಿಲ್ಲೆಗಳು ಚಿತ್ರಕಲಾ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳಂತೆ ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಅಂಶಗಳನ್ನು ಶೋಧನೆಗೆ ಒಳಪಡಿಸಿದಾಗ ಪ್ರಸ್ತುತ ಈ ಪ್ರಬಂಧದಲ್ಲಿ ಒಟ್ಟು ಒಂಭತ್ತು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಯಾದಗಿರಿ ಜಿಲ್ಲೆಯ ಚಿತ್ರಕಲೆಯ ಕುರಿತು ಸಮಗ್ರ ಅಧ್ಯಯನ ಕೈಗೊಳ್ಳುವ ಉದ್ದೇಶ, ಸ್ವರೂಪ, ವ್ಯಾಪ್ತಿ, ವಿಧಾನದೊಂದಿಗೆ ಒಂದನೇ ಅಧ್ಯಾಯದಲ್ಲಿ ವಿವರವಾಗಿ ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯ ಪರಿಸರ, ಸಾಂಸ್ಕೃತಿಕ ಸಂಭ್ರಮಗಳಲ್ಲಿ ವಿವಿಧ ಆಯಾಮಗಳ ಪಾತ್ರವನ್ನು ವಿವರಿಸುವುದರೊಂದಿಗೆ ಭೌಗೋಳಿಕ, ಪೌರಾಣಿಕ, ಐತಿಹಾಸಿಕ, ಹೀಗೆ ಹಲವಾರು ಸಾಂಸ್ಕೃತಿಕ ಚಿಂತನೆಯೊಂದಿಗೆ ಯಾದಗಿರಿ ಜಿಲ್ಲೆಯ ಪರಿಸರವನ್ನು ಸಂಕ್ಷಿಪ್ತವಾಗಿ ವಿವರ ನೀಡಲಾಗಿದೆ. ಹಾಗೂ ಲಲಿತಕಲೆಗಳಲ್ಲಿ ಚಿತ್ರಕಲೆಯ ಪಾತ್ರ ಬಹುಮುಖ್ಯವಾಗಿ ವಿವರಿಸಿ

ಹೇಳಲಾಗಿದೆ. ಶಿಲ್ಪಕಲೆ, ಸಂಗೀತ, ನಾಟಕ, ಬಯಲಾಟ, ಮುಂತಾದ ಕಲೆಗಳು ಯಾದಗಿರಿ ಜಿಲ್ಲೆಯಲ್ಲಿರುವುದನ್ನು ಹೇಳಲಾಗಿದೆ.

ಅಧ್ಯಾಯ ಮೂರರಲ್ಲಿ ಯಾದಗಿರಿ ಜಿಲ್ಲೆಯಲ್ಲಿರುವ ಬಳಿಚಕ್ರ, ವರ್ಕನಹಳ್ಳಿ ತಾಂಡಾ, ಹಗರಟಗಿ, ಹಿರೇಹೆಬ್ಬಾಳ, ಹುಣಸಗಿ ಪರಿಸರಲ್ಲಿರುವ ಪ್ರಾಗಿತಿಹಾಸ ಕಾಲದ ಗುಹಾ ಚಿತ್ರಗಳನ್ನು ಕುರಿತು ವಿವರವಾಗಿ ಅಧ್ಯಯನ ಕೈಗೊಳ್ಳಲಾಗಿದೆ. ಹಲವು ಚಿತ್ರಗಳನ್ನು ತಾತ್ವಿಕ ಚಿಂತನೆಯಲ್ಲಿ ವಿಶ್ಲೇಷಣೆ ನೀಡಲಾಗಿದೆ. ರೇಖೆ, ವರ್ಣ ಸಂಯೋಜನೆ, ಬಳಕೆಯ ವಿಧಾನ, ಪ್ರಸ್ತುತ ಅವುಗಳ ಸ್ಥಿತಿ–ಗತಿಯ ಕುರಿತಂತೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಜನಪದ ಚಿತ್ರಕಲೆಯ ಪ್ರಕಾರಗಳಂತೆ ಕೌದಿಕಲೆ, ಹಚ್ಚೆಕಲೆ, ಹಸೆ, ಮದರಂಗಿ, ಮೋಹರಂ ಹಬ್ಬದ ಚಿತ್ರಕಲೆ, ರಂಗೋಲಿ, ಲಂಬಾಣಿ ಸಮುದಾಯದ ಆಚರಣೆಗಳಲ್ಲಿ ಹುಟ್ಟಿಕೊಳ್ಳುವ ಕಲೆಗಳ ಪರಿಚಯ ಮತ್ತು ವಿಶ್ಲೇಷಣೆ, ಮದುವೆ, ಹಬ್ಬ, ಹುಣ್ಣಿಮೆ, ಜಾತ್ರೆಗಳಲ್ಲಿ ಹುಟ್ಟಿಕೊಳ್ಳುವ ಹೀಗೆ ಹಲವಾರು ಬಗೆಯು ಜನಪದ ಚಿತ್ರಕಲೆಯನ್ನು ವಿವಿಧ ಪ್ರಕಾರಗಳಲ್ಲಿ ಅಧ್ಯಯನ ಮಾಡಲಾಗಿದೆ.

ಐದನೇ ಅಧ್ಯಾಯದಲ್ಲಿ ಸುರಪುರ ಸಮೀಪದ ರಂಗಂಪೇಟೆಯಲ್ಲಿರುವ ರುದ್ರಸ್ವಾಮಿಮಠ ಮತ್ತು ಅಣ್ಣಯ್ಯನಮಠ (ಗೆಜ್ಜೆಸ್ವಾಮಿಮಠ)ಗಳಲ್ಲಿರುವ ಭಿತ್ತಿಚಿತ್ರಗಳ ಕುರಿತು ವಿವರಣಾತ್ಮಕವಾಗಿ ಅಧ್ಯಯನ ಮಾಡಲಾಗಿದೆ. ಮತ್ತು ಸುರಪುರದ ಹೊಸ ದರ್ಬಾರ್ (ಅರಮನೆ)ಯಲ್ಲಿರುವ ಭಿತ್ತಿಚಿತ್ರ, ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದ ಭಿತ್ತಿಚಿತ್ರಗಳು ಹಾಗೂ ಗುರುಮಿಠಕಲ್ ಹತ್ತಿರವಿರುವ ಕಾಕಲವಾದ ದೇಶಮುಖ್ ಸಂಸ್ಥಾನದ ಅರಮನೆಯಲ್ಲಿರುವ ಭಿತ್ತಿಚಿತ್ರ ಹೀಗೆ ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಭಿತ್ತಿಚಿತ್ರಗಳ ಕುರಿತು ವಿವರವಾಗಿ ಅಧ್ಯಯನ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಸುರಪುರ ಸಂಸ್ಥಾನದ ಗರುಡಾದ್ರಿಯವರು ರಚಿಸಿದ ಹಸ್ತಪ್ರತಿಗಳ ಚಿತ್ರಗಳ ಕುರಿತಂತೆ ಲಕ್ಷ್ಮೀಶನ ಜೈಮಿನಿ ಭಾರತ, ವಿರೂಪಾಕ್ಷ ಪಂಡಿತ ವಿರಚಿತ ಚೆನ್ನಬಸವ ಪುರಾಣ ಹಾಗೂ ಸುರಪುರ ಪಂಚಾಂಗದಲ್ಲಿನ ಮತ್ತು ಡಿ.ಎನ್. ಅಕ್ಕಿಯವರ ಮನೆಯಲ್ಲಿನ ಮಾಟ ಮಂತ್ರದ ಹಸ್ತಪ್ರತಿ ಚಿತ್ರಕಲೆಯ ಕುರಿತು ಅಧ್ಯಯನ ಮಾಡಲಾಗಿದೆ. ಚಿತ್ರಗಳ ವಸ್ತು, ವಿಷಯ, ಶೈಲಿ, ಆಕಾರಗಳ ಕುರಿತು ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಸುರಪುರ ಸಂಸ್ಥಾನಿಕರ ಅರಮನೆ, ಮಠ, ಅಂಗಡಿಗಳಲ್ಲಿ ಕಂಡುಬರುವ ಗರುಡಾದ್ರಿಯವರು ರಚಿಸಿದ ಪ್ರಮುಖರ, ಅರಸರ, ಮಠಾಧೀಶರ, ದೇವಾನುದೇವತೆಗಳ ಚಿತ್ರಗಳು, ಮೆಡೋಸ್ ಟೇಲರ್ ಮತ್ತು ಕಲಾಕೃತಿಗಳು, ಯಾದಗಿರಿ, ಶಹಾಪುರ, ಸುರಪುರ ಪ್ರದೇಶದಲ್ಲಿರುವ ಗಾಜಿನ ಚಿತ್ರಗಳು, ಡಿ.ಎನ್.ಅಕ್ಕಿಯವರ ಮನೆಯಲ್ಲಿ ಸಂಗ್ರಹಗೊಂಡದರ ದಿಕ್ಪಾಲಕರ ಚಿತ್ರಗಳು,

ಯಾದಗಿರಿ ವೀರಶೈವ ಕಲ್ಯಾಣ ಮಂಟಪದಲ್ಲಿರುವ ಕಲಾಕೃತಿಗಳು ಹೀಗೆ ಹಲವಾರು ವಿಧಗಳಲ್ಲಿ ರೂಪಗೊಂಡ ಕಲಾಕೃತಿಗಳನ್ನು ಸಂಕೀರ್ಣದಲ್ಲಿ ವಿವರಿಸಲಾಗಿದೆ.

ಎಂಟನೇ ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಇಲ್ಲಿಯವರೆಗೆ ಉಗಮಗೊಂಡ ಚಿತ್ರಕಲಾ ಸಾಹಿತ್ಯ ಕೃತಿಗಳ ಕುರಿತು ವಿವರ ಮತ್ತು ವಿಶ್ಲೇಷಣೆ, ಕಲಾಶಿಕ್ಷಣ, ಹಿರಿಯ ಕಲಾವಿದರ ಸಾಧನೆ ಹಾಗೂ ಯುವ ಕಲಾವಿದರ ಕಲಾಕೃತಿಗಳ ಕುರಿತು ವಿವರಣೆ ನೀಡಲಾಗಿದೆ.

ಅಧ್ಯಾಯ ಒಂಭತ್ತು ಸಮಾರೋಪದಲ್ಲಿ ಒಟ್ಟು ಅಧ್ಯಯನ ವಿವರ ಮತ್ತು ಸಂಕ್ಷಿಪ್ತ ಸ್ವರೂಪದಲ್ಲಿ ಹಂತ-ಹಂತವಾಗಿ ವಿಷಯವನ್ನು ಹೇಳಲಾಗಿದೆ. ಅಧ್ಯಯನದಿಂದ ಕಂಡುಬರುವ ಪ್ರಮುಖ ಫಲಿತಗಳು ಈ ಕೆಳಗಿನಂತೆ ಹೇಳಲಾಗಿದೆ.

**ಪ್ರಬಂಧದ ಫಲಿತಗಳು:**

* ೧೯೪೦ರ ದಶಕದಲ್ಲಿ ಅ.ಸುಂದರ ಅವರ ಶೋಧನಾ ಕಾರ್ಯದಲ್ಲಿ ಬೆಳಕಿಗೆ ಬಂದ ಬಳಿಚಕ್ರದ ಪ್ರಾಗಿತಿಹಾಸ ಚಿತ್ರನೆಲೆ ಭಾರತದ ಪ್ರಾಗೈತಿಹಾಸಿಕ ಚಿತ್ರನೆಲೆಗಳಲ್ಲಿ ಈ ನೆಲೆಯ ವರ್ಣಚಿತ್ರಗಳು ಅತ್ಯಂತ ಪ್ರಮುಖವಾದುವುಗಳಾಗಿವೆ. ಈ ಚಿತ್ರಗಳ ಕುರಿತಂತೆ ಸಮಗ್ರ ಚಿಂತನಾರ್ಹ ಅಧ್ಯಯನ ಮತ್ತು ವಿವರಣೆ ಪ್ರಸ್ತುತ ಈ ಅಧ್ಯಯನದಿಂದ ಎಂಬುದು ಸತ್ಯಾಂಶವಾಗಿದೆ.
* ಯಾದಗಿರಿಯಿಂದ ಹತ್ತಾರು ಕಿ.ಮೀ. ಅಂತರದಲ್ಲಿರುವ ವರ್ಕಹಳ್ಳಿ ತಾಂಡಾದ ರಕ್ತದ ಗುಂಡು ಎಂದೇ ಕರೆಯುವ ಈ ಚಿತ್ರನೆಲೆ ಪ್ರಾಗಿತಿಹಾಸಕಾಲ ಎಂಬುದು ಈ ಅಧ್ಯಯನದಿಂದ ಬೆಳಕು ಚೆಲ್ಲಿ ಅಲ್ಲಿರುವ ಚಿತ್ರಗಳ ವಸ್ತುವಿಷಯವನ್ನು ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ.
* ಭಾರತೀಯ ಸಾಂಪ್ರದಾಯಿಕ ಚಿತ್ರಶೈಲಿ ಮನೆತನಗಳಲ್ಲಿ ಸುರಪುರದ ಗರುಡಾದ್ರಿ ಮನೆತನದ ಚಿತ್ರಗಳ ಶೈಲಿಯು ಅತ್ಯಂತ ಪ್ರಮುಖವಾದದ್ದು ಮತ್ತು ರಂಗಂಪೇಟೆಯ ರುದ್ರಸ್ವಾಮಿ ಹಾಗೂ ಅಣ್ಣಯ್ಯನ ಮಠಗಳಲ್ಲಿನ ಭಿತ್ತಿಚಿತ್ರಗಳು ಪ್ರಸ್ತುತ ಅಧ್ಯಯನಕಾರರಿಗೆ ಮಾದರಿಯಾಗಿವೆ. ಆದರೆ ಅಣ್ಣಯ್ಯನಮಠದಲ್ಲಿನ ಚಿತ್ರಗಳು ಅಳಿವಿನಂಚಿನಲ್ಲಿವೆ. ರುದ್ರಸ್ವಾಮಿಮಠ ಪೂರ್ತಿ ನವೀಕರಣ ಕಟ್ಟಡವಾಗಿರುವುದರಿಂದ ಭಿತ್ತಿಚಿತ್ರಗಳು ಈಗ ಇರುವುದಿಲ್ಲ. ಅದಕ್ಕಾಗಿ ಅಧ್ಯಯನಕಾರರ ಅನುಕೂಲಕ್ಕಾಗಿ ಅಣ್ಣಯ್ಯನ ಮಠದಲ್ಲಿನ ಭಿತ್ತಿಚಿತ್ರಗಳನ್ನು ಸಂರಕ್ಷಿಸಬೇಕಾಗಿದೆ. ಅಲ್ಲಲ್ಲಿ ಕಾಣುವ ಭಿತ್ತಿಚಿತ್ರಗಳ ರೇಖೆಗಳು ಕಲಾ ವಿದ್ಯಾರ್ಥಿಗಳಿಗೆ ಆಕರ್ಷಣೀಯವಾಗಿದೆ. ಅಧ್ಯಯನಕ್ಕೆ ಪೂರಕವಾಗಿದೆ.
* ಗುರುಮಿಠಕಲ್‌ದಿಂದ ೫ ಕಿ.ಮೀ. ದೂರದಲ್ಲಿರುವ ಕಾಕಲವಾರ ದೇಶಮುಖ್ ಸಂಸ್ಥಾನದ ಅರಮನೆಯಲ್ಲಿನ ಭಿತ್ತಿಚಿತ್ರ ಹಾಗೂ ಕಟ್ಟೆಗೆಯ ಮೇಲಿನ ವರ್ಣ ವಿನ್ಯಾಸ ಕಲಾಕೃತಿಗಳು ಪ್ರಸ್ತುತ ಈ ಅಧ್ಯಯನದಿಂದ ಬೆಳಕು ಕಾಣುತ್ತಿದೆ.

* ಜೈಮಿನಿ ಭಾರತ, ಚೆನ್ನಬಸವ ಪುರಾಣ, ಸುರಪುರ ಪಂಚಾಂಗದಲ್ಲಿನ ಹಸ್ತಪ್ರತಿ ಚಿತ್ರಗಳಲ್ಲಿ ವರ್ಣವಿನ್ಯಾಸಕ್ಕಿಂತ ರೇಖೆಗಳ ಕೌಶಲ್ಯದಿಂದ ಜೀವಂತಿಕೆ ಪಡೆದಿದೆ.

* ಡಿ.ಎನ್. ಅಕ್ಕಿಯವರ ಮನೆಯಲ್ಲಿನ ಮಾಟ-ಮಂತ್ರದ ಹಸ್ತಪ್ರತಿ ಚಿತ್ರಕಲೆ ಈ ಅಧ್ಯಯನದಿಂದ ಮೆರಗು ಪಡೆದಿವೆ. ಅವುಗಳೆಲ್ಲವು ಪೆನ್ನಿನ ರೇಖೆಗಳಿಂದ ರಚನೆಯಾಗಿವೆ.

* ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಗಾಜಿನ ಚಿತ್ರಕಲೆಯ ಸುಳಿವುಗಳನ್ನು ನೋಡಿದಾಗ ೧೮-೧೯ನೇ ಶತಮಾನ ಕಾಲ ತಿಳಿಸುತ್ತದೆ. ಧಾರ್ಮಿಕ ಹಿನ್ನೆಲೆಯಾಗಿ ಹುಟ್ಟಿಕೊಂಡರೂ ಸಹ ಹಲವು ಕಂಪನಿ ಕಲಾಶೈಲಿಯ ರೂಪದಂತೆ ನಿಸರ್ಗ ಚಿತ್ರಗಳು ರಚನೆಯಾಗಿವೆ.

* ಯಾದಗಿರಿ ಜಿಲ್ಲೆಯ ಚಿತ್ರಕಲಾ ಸಾಹಿತ್ಯ ಕುರಿತಂತೆ ಬೆರಳಣಿಕೆಯಷ್ಟು ಕೃತಿಗಳು ಹೊರಬಂದರೂ ಸಹ 'ಸುರಪುರ ಚಿತ್ರಕಲೆ' ಎಂಬ ಸಂಶೋಧನ ಗ್ರಂಥ ಹಾಗೂ ಎಂ.ಟಿ.ಭೋಪಲೆ, ಸಂಗಣ್ಣ ಎಂ. ದೋರನಹಳ್ಳಿ, ಸೇರಿದಂತೆ ಹಲವು ಗ್ರಂಥಗಳು ಕಲಾ ಅಧ್ಯಯನಕಾರರಿಗೆ ಮಾರ್ಗಸೂಚಿಯಾಗಿದೆ. ಅಲ್ಲದೇ ಜಿಲ್ಲೆಯ ಹಿರಿಯ ಕಲಾವಿದರ ಮತ್ತು ಯುವ ಕಲಾವಿದರ ಕಲಾಕೃತಿಗಳು ಮೌಲ್ಯಯುತವಾಗಿವೆ.

* ಹಲವು ವಿಧಾನಗಳಲ್ಲಿ ಅಭಿವ್ಯಕ್ತಗೊಂಡ ಯಾದಗಿರಿ ಜಿಲ್ಲೆಯ ಚಿತ್ರಕಲೆ ಕಲಾಕ್ಷೇತ್ರಕ್ಕೆ ವಿಶೇಷ ಕೊಡುಗೆ ಎಂಬುದು ಮರೆಯುವಂತಿಲ್ಲ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ಸಂಕ್ಷೇಪಗಳು

೩. ಸಂದರ್ಶಕರ ವಿವರ

೪. ಛಾಯಾಚಿತ್ರಗಳು

೫. ಜಿಲ್ಲಾ ನಕ್ಷೆ

## ಪರಾಮರ್ಶನ ಗ್ರಂಥಗಳು


* ಆದಿಮಾನವ – ಕೊರಟಿ ಶ್ರೀನಿವಾಸರಾವ್.
  ಆನಂದನಿಲಯ ಪ್ರಕಾಶನ
  ಬೆಂಗಳೂರು, ೧೯೬೦.

* ಇತಿಹಾಸ ಪುಟಗಳಲ್ಲಿ ಹುಣಸಗಿ – ಪಾಟೀಲ ಬಸನಗೌಡ.
  ಪೋಲಿಸ್ ಪಾಟೀಲ ಪ್ರತಿಷ್ಠಾನ (ರಿ),
  ೨೦೧೧

* ಎಂ.ಟಿ. ಭೋಪಲೆ, – ಡಿ.ಎನ್. ಅಕ್ಕಿ,
  ಕರ್ನಾಟಕ ಲಲಿತಕಲಾ ಅಕಾಡೆಮಿ,
  ಬೆಂಗಳೂರು, ೧೯೯೯.

* ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ – ಡಾ. ಅ. ಸುಂದರ,
  ಕರ್ನಾಟಕ ಲಲಿತಕಲಾ ಅಕಾಡೆಮಿ,
  ಬೆಂಗಳೂರು, ೧೯೯೪.

* ಕಲಬುರ್ಗಿ ಜಿಲ್ಲಾ ಐತಿಹಾಸಿಕ – ಡಾ. ಎಂ.ಎಸ್. ಶಿರವಾಳ,
  ಮತ್ತು ಸಾಂಸ್ಕೃತಿಕ ಪರಂಪರೆ,
  ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು.
  ೨೦೧೧.

* ಕರ್ನಾಟಕ ಹಸ್ತಪ್ರತಿ ಚಿತ್ರಕಲೆ – ಡಾ. ಎಚ್.ಎನ್. ಚಿತ್ರಗಾರ,
  ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ
  ಕನ್ನಡ ವಿಶ್ವವಿದ್ಯಾಲಯ, ಹಂಪಿ.
  ೨೦೦೫.

* ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ – ಕೆ.ವಿ. ಕಾಳೆ,
  ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
  ೨೦೦೦.

* ಕರ್ನಾಟಕದ ಜನಪದ ಚಿತ್ರಕಲೆ – ಡಾ. ಎಸ್.ಸಿ. ಪಾಟೀಲ,
  ವೀರಶೈವ ಅಧ್ಯಯನ ಸಂಸ್ಥೆ,
  ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ,
  ಗದಗ, ೧೯೯೩.

* ಕರ್ನಾಟಕದ ಜನಪದ ಆಚರಣೆಗಳು – ಡಾ. ಸ.ಚಿ. ರಮೇಶ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೧೦.

* ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು – ಡಾ. ಪಿ.ಕೆ. ಖಂಡೋಬಾ,
ಪ್ರಕಾಶನ : ಶ್ರೀ ಸಿದ್ದಲಿಂಗೇಶ್ವರ ಬುಕ್ ಡಿಪೋ,
ಗುಲಬರ್ಗಾ, ೨೦೦೦.

* ಕರ್ನಾಟಕದ ಚಿತ್ರಕಲಾ ಪರಂಪರೆ – ಎನ್. ಮರಿಶಾಮಚಾರ್,
ಸಿ.ಎಂ.ಎನ್. ಪ್ರಕಾಶನ, ಜಯನಗರ,
ಬೆಂಗಳೂರು, ೨೦೧೨.

* ಕಲಾಕೋಶ, – ಎನ್. ಮರಿಶಾಮಚಾರ್, ಡಾ. ಅ.ಲ. ನರಸಿಂಹನ್, ವಿ.ಟಿ. ಕಾಳೆ, ಡಾ. ಬಿ.ಕೆ. ಹಿರೇಮಠ,
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೧೯೯೪.

* ಜಾನಪದ ಶೋಧ – ಡಾ. ಹ.ಕ. ರಾಜೇಗೌಡ,
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೭.

* ದಖನಿ ಚಿತ್ರಕಲೆ – ಎಸ್.ಕೆ. ಅರುಣಿ,
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೨೦೦೧.

* ದಕ್ಷಿಣ ಭಾರತೀಯ ಜಾನಪದ ಕೋಶ – ಡಾ.ಎ. ಮುರಿಗೆಪ್ಪ, ಡಾ. ಆರ್ವಿಯಸ್ ಸುಂದರಂ
ಸಂಪುಟ ೧, ೨, ಪ್ರಸಾರಾಂಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೧೧

* ದೃಶ್ಯ ಸಂಸ್ಕೃತಿ – ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ,
ಸರಚಂದ್ರ ಪ್ರಕಾಶನ, ಚಿತ್ತಾಪುರ,
೨೦೧೧.

* ದೃಶ್ಯ ಪದ ದೃಶ್ಯ – ಡಾ. ಶಿವಾನಂದ ಹೆಚ್. ಬಂಟನೂರು,
ಅಲಕಾ ಪ್ರಕಾಶನ, ಖೈನೂರು, ೨೦೧೩.

* ಧವಳ – ಡಾ. ಎಸ್.ಕೆ. ಅರುಣಿ,
ಅಭಿನಂದನಾ ಸಮಿತಿ, ಶಹಾಪುರ.
೨೦೧೧.

* ನಾಯಕರ ಮಹಾಸಂಸ್ಥಾನ ಸುರಪುರ – ಡಾ. ತಾರಿಹಳ್ಳಿ ಹನುಮಂತಪ್ಪ,
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
೨೦೦೦.

* ಪ್ರಾಚೀನ ಭಾರತ – ಆರ್.ಎಸ್. ಶರ್ಮ
ನವಕರ್ನಾಟಕ ಪ್ರಕಾಶನ, ಬೆಂಗಳೂರು
೧೯೯೭.

* ಭಾರತೀಯ ಚಿತ್ರಕಲೆ – ಬಿ.ಪಿ. ಬಾಯಿರಿ
ಪ್ರತಿಭಾ ಗ್ರಂಥಮಾಲೆ, ಧಾರವಾಡ – ೧.
೧೯೭೯

* ಭಾರತೀಯ ಚಿತ್ರಕಲೆ – ಪಿ.ಆರ್. ತಿಪ್ಪೇಸ್ವಾಮಿ,
ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ
ಹೊಸಪೇಟೆ,
೧೯೯೮.

* ಬಾನಯ್ಯ ಗರುಡಾದ್ರಿ – ಬಸವರಾಜ ಉಪ್ಪಿನ್,
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು,
೧೯೯೫.

* ಮಹಾದೇವ ಬಾಬಾ ಮೆಡೋಸ್‌ಟೇಲ್ – ದೇವು ಪತ್ತಾರ
ವಾರ್ತಾ ಇಲಾಖೆ, ಕರ್ನಾಟಕ ಸರ್ಕಾರ,
೨೦೦೯.

* ಮಾಟದೊಳಗಣ ನೋಟ – ಡಾ. ಶಿವಾನಂದ ಹೆಚ್. ಬಂಟನೂರು,
ಯಾಜಿ ಪ್ರಕಾಶನ, ಹೊಸಪೇಟೆ,
೨೦೧೨.

* ಯಾದಗಿರಿ ಪ್ರದೇಶದ ಲಂಬಾಣಿ – ಎನ್. ವೆಂಕಟೇಶ.
ತಾಂಡಾದ ಚಿತ್ರಕಲೆ
(ಅಪ್ರಕಟಿತ ಬಿ.ವಿ.ಎ. ಪದವಿಗಾಗಿ ಸಲ್ಲಿಸಿದ ಕಿರುಪ್ರಬಂಧ)
೨೦೦೭

* ಯಾದಗಿರಿ ಸಿರಿ – ಪಾಟೀಲ ಬಸನಗೌಡ ಹುಣಸಗಿ
ಹುಣಸಗಿ ಪೋಲಿಸ್ ಪಾಟೀಲ್ ಪ್ರತಿಷ್ಠಾನ (ರಿ)
೨೦೧೧.

* ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, – ಡಾ. ಶೈಲಜಾ ಎನ್. ಬಾಗೇವಾಡಿ.

* ಯಾದಗಿರಿ ತಾಲೂಕಿನ ದೇವಾಲಯಗಳ – ವೆಂಕಣ್ಣ ಡೊಣ್ಣೇಗೌಡರು ಮತ್ತು
ವಾಸ್ತುಶಿಲ್ಪ, ಸಿದ್ಧಯ್ಯ ಕಲಾಲ
ಸೋನಿ ಪ್ರಕಾಶನ,
೨೦೦೧.

* ಲೇಖಾವರಣ – ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ,
ಸರಚಂದ್ರ ಪ್ರಕಾಶನ,
೨೦೧೧.

* ವರ್ಣ ಸಂಚಯ – ಡಾ. ಎಸ್.ಸಿ. ಪಾಟೀಲ,
ವಿಜಯ ಚಿತ್ರಕಲಾ ಮಹಾವಿದ್ಯಾಲಯ,
ಇಲಕಲ್, ೨೦೦೧.

* ಶಿಲಾಶ್ರಯ ದೃಶ್ಯಧ್ಯಾನ – ಡಾ. ಕೆ.ವಿ.ಸುಬ್ರಹ್ಮಣ್ಯಂ,
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೧೧

* ಶಿಲಾಯುಗದ ಗವಿಚಿತ್ರಗಳು – ಡಾ. ಶರಣಬಸಪ್ಪ ಕೋಲ್ಕಾರ,
ಬಸವ ಪ್ರಕಾಶನ, ಗುಲಬರ್ಗಾ,
೨೦೧೧.

* ಶಹಾಪುರ ಪರಿಸರದ ಶಾಸನಗಳು – ಸಿದ್ದಣ್ಣ ಎಸ್. ಕುಂಬಾರ,
ಮತ್ತು ದೇವಾಲಯಗಳು,
ಸರ್ವಜ್ಞ ಪ್ರಕಾಶನ, ಶಹಾಪುರ.
೨೦೧೩

* ಸುರಪುರ ಚಿತ್ರಕಲೆ – ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ.
ಸರಚಂದ್ರ ಪ್ರಕಾಶನ, ಚಿತ್ತಾಪುರ,
೨೦೦೯

* ಸಂಗಣ್ಣ ಎಂ. ದೋರನಹಳ್ಳಿ, ಮಹಾಂತ ಶ್ರೀ ಪ್ರಕಾಶನ ದೋರನಹಳ್ಳಿ, ೨೦೧೩. – ಬಸವರಾಜ ಎಸ್. ಕಲೆಗಾರ,

* ಹೈದ್ರಾಬಾದ್ ಕರ್ನಾಟಕ ಸಾಂಸ್ಕೃತಿಕ ವಿಷಯಕೋಶ, ಜಾನಪದ ಸಂಪುಟ, ಗುಲಬರ್ಗಾ ವಿಶ್ವವಿದ್ಯಾಲಯ. ೨೦೧೨ – (ಸಂ) ಡಾ. ಪಿ.ಕೆ.ಖಂಡೋಬಾ,

* ಹೈದ್ರಾಬಾದ ಕರ್ನಾಟಕ ಸಾಂಸ್ಕೃತಿಕ ವಿಷಯಕೋಶ, ಲಲಿತಕಲೆಗಳ ಸಂಪುಟ ೨೦೧೨. – (ಸಂ) ಡಾ. ಪಿ.ಕೆ. ಖಂಡೋಬಾ ಡಾ. ಎಸ್.ಸಿ.ಪಾಟೀಲ

ಇಂಗ್ಲೀಷ್ ಗ್ರಂಥಗಳು

1. Colour and Meaning : Mariciahall. Combridge University, Prees, 1992.
2. Deccani Painting : Zebrowstai Mark, Roli Book International, New Delhi, 1983.
3. Techniques in Indian Mural Paintings: Chakravarthi Jayantha - 1980.
4. Lepakshi : Amancherla Gopalroa, Archaeological Survey of India, Delhi, 1969.
5. Vijayanagara Art: Saletore, Bombay University, Bombay, 1930.

ಇಂಗ್ಲೀಷ್ ಲೇಖನ

1. Prehistoric 'Tresasure' neglected. Pictolgraphs found at Balichakra remains unproted for long tusday. August 14, 2012, Deccan Herald New, Chidambar Prasad.

## ಸಂಕ್ಷೇಪಗಳು

| | | |
|---|---|---|
| ಕ.ವಿ.ವಿ.ಹಂ. | – | ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಕ.ವಿ.ವಿ.ಧಾ | – | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಕ.ಲ.ಕ.ಅ | – | ಕರ್ನಾಟಕ ಲಲಿತಕಲಾ ಅಕಾಡೆಮಿ. |
| ಸಂ. | – | ಸಂಪಾದಕರು |
| ಪ್ರ | – | ಪ್ರಕಾಶಕರು, ಪ್ರಕಾಶನ, |
| ಗು.ವಿ.ವಿ. | – | ಗುಲಬರ್ಗಾ ವಿಶ್ವವಿದ್ಯಾನಿಲಯ |
| ಲೇ | – | ಲೇಖಕರು |
| ಸ.ಸಂ. | – | ಸಹ ಸಂಪಾದಕರು |

## ಸಂದರ್ಶಕರ ವಿವರ

| ಕ್ರಸಂ. | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೧. | ಡಿ.ಎನ್.ಅಕ್ಕಿ | ೬೫ | ಗೋಗಿ, ತಾ: ಶಹಾಪುರ | ಸಂಶೋಧಕರು |
| ೨. | ಮಹ್ಮದ್ ತಾಹೀರ್ | ೫೪ | ಯಾದಗಿರಿ ತಾ: ಜಿ: | ಚಿತ್ರಕಲಾವಿದರು |
| ೩. | ಸಂಗಣ್ಣ ಎಂ. ದೋರನಹಳ್ಳಿ | ೬೪ | ದೋರನಹಳ್ಳಿ, ತಾ: ಶಹಾಪುರ | ಹಿರಿಯ ಚಿತ್ರಕಲಾವಿದರು |
| ೪. | ಪಂಪಾಪತಿ ಹುಂಡೇಕಾರ | ೪೩ | ಯಾದಗಿರಿ | ಚಿತ್ರಕಲಾವಿದರು |
| ೫. | ರೇವಣಸಿದ್ದೇಶ್ವರ ಶೀಲವಂತ | ೩೨ | ಯಾದಗಿರಿ | ಚಿತ್ರಕಲಾವಿದರು |
| ೬ | ರಾಜ ಮದನಗೋಪಾಲ ನಾಯಕ | ೫೧ | ಸುರಪುರ | ರಾಜಕೀಯ ಧುರೀಣರು |
| ೭. | ಮರೆಪ್ಪ | ೩೧ | ಬಳಿಚಕ್ರ | ಯುವ ಸಂಘಟಕ |
| ೮. | ಮಲ್ಲಿಕಾರ್ಜುನ | ೨೭ | ಬಳಿಚಕ್ರ | ಯುವ ಸಂಘಟಕ |

